# ಗಾಂಧೀಜಿಯವರ ಆತ್ಮಕಥೆ

ಅಥವಾ

# ಸತ್ಯಶೋಧನೆ

ಎರಡನೆಯ ಭಾಗ

ವಿಶ್ವಕರ್ಣಾಟಕ

ಪುಸ್ತಕ ಪ್ರಕಟನಾಲಯ

ಬೆಂಗಳೂರು ನಗರ

೧೯೨೮

# ವಿ ಷ ಯ ಸೂ ಚಿ ಕೆ

(ಅಧ್ಯಾಯಗಳಲ್ಲಿ ಅಲ್ಲಲ್ಲಿ ಕಂಸಗಳೊಳಗೆ ಕಾಣಬರುವ ಅಂಕಕ್ರಮವನ್ನು ಅನುಸರಿಸಿ ಪುಸ್ತಕದ ಕೊನೆಯ ಭಾಗದಲ್ಲಿರುವ ಟಿಪ್ಪಣಿಗಳನ್ನು ವಾಚಕರು ದಯೆಯಿಟ್ಟು ಓದಿಕೊಳ್ಳಬೇಕು.)

# ೧

# ರಾಯಚಂದಭಾಯಿ

ಹಿಂದಿನ ಅಧ್ಯಾಯದಲ್ಲಿ ನಾನು ಮುಂಬಯಿಯಲ್ಲಿ ಬಿರುಗಾಳಿಯೆದ್ದಿದ್ದಿತೆಂದು ಹೇಳಿದ್ದೇನೆ. ಜೂನ್ ಮತ್ತು ಜುಲೈ ತಿಂಗಳುಗಳಲ್ಲಿ ಹಿಂದೂಮಹಾಸಾಗರದಲ್ಲಿ ಇದೇನೂ ಅಪೂರ್ವ ವಿಷಯವಲ್ಲ. ಏಡನ್ನಿನಿಂದ (ಅ) ದಾರಿಯುದ್ದಕ್ಕೂ ಸಮುದ್ರವು ಅಲ್ಲೋಲಕಲ್ಲೋಲವಾಗಿದ್ದಿತು. ಹೆಚ್ಚುಕಡಿಮೆ ಎಲ್ಲಾ ಪ್ರಯಾಣಿಕರೂ ಕಾಹಿಲ್ ಮಲಗಿದ್ದರು. ನಾನೊಬ್ಬನು ಮಾತ್ರ ಯಾವ ಬಾಧೆಯೂ ಇಲ್ಲದೆ ಅಲೆಗಳ ಹೊಡತವನ್ನು ನೋಡುವುದಕ್ಕಾಗಿ ಜಹಜಿನ ಕೈಸಾಲೆಯಲ್ಲಿರುತ್ತಾ ಅವುಗಳ ಎರಚಾಟಕ್ಕೆ ಸಿಕ್ಕಿ ಆನಂದಪಡುತ್ತಿದ್ದೆನು. ಬೆಳಗಿನ ಊಟದ ಸಮಯದಲ್ಲಿ ನನ್ನ ಜೊತೆಗೆ ಒಬ್ಬರಿಬ್ಬರು ಮಾತ್ರ ಇರುತ್ತಿದ್ದರು. ನಾವು ಅಂಬಲಿಯು ತೊಡೆಯಮೇಲೆ ಚೆಲ್ಲಿಬಿಡುವುದೆಂಬ ಭಯದಿಂದ ಬಹಳ ಎಚ್ಚರಿಕೆಯಿಂದ ಅದರ ತಟ್ಟೆಯನ್ನು ತೊಡೆಯಮೇಲಿಟ್ಟುಕೊಂಡು ತಿನ್ನುತ್ತಿದ್ದೆವು.

ನನಗೆ ಈ ಹೊರಗಿನ ಬಿರುಗಾಳಿಯು ಹೃದಯದೊಳಗಿನ ಚಂಡಮಾರುತದ ಸಂಕೇತವಾಗಿದ್ದಿತು. ಆದರೆ ಹೊರಗಿನದು ಹೇಗೋ ಒಳಗಿನದೂ ಹಾಗೆಯೇ ನನ್ನ ಶಾಂತತೆಗೆ ಕುಂದು ತರಲಿಲ್ಲವೆಂದು ಹೇಳಬಲ್ಲೆನು. ನಮ್ಮ ಕುಲದವರ ತಂಟೆಯಂತೂ ನನ್ನಿದಿರಿಗಿದ್ದಿತು. [ಮೊದಲನೆಯ ಭಾಗದ ೧೩ನೆಯ ಅಧ್ಯಾಯವನ್ನು ನೋಡಿ.] ವಕೀಲಿ ಕೆಲಸ ಮಾಡುವ ವಿಚಾರದಲ್ಲಿ ನನಗಿದ್ದ ಚಿಂತೆಯನ್ನು ನಾನು ಆಗಲೇ ತಿಳಿಸಿದ್ದೇನೆ. ಇದಲ್ಲದೆ ನಾನು ಸುಧಾರಕನಾಗಿದ್ದುದರಿಂದ ಕೆಲವು ಸುಧಾರಣೆಗಳನ್ನು ಹೇಗೆ ಪ್ರಾರಂಭಮಾಡುವುದು ಎಂದೂ ಯೋಚಿಸುತ್ತಿದ್ದೆನು. ಆದರೆ ಇಷ್ಟೇ ಅಲ್ಲದೆ ನನಗೆ ತಿಳಿಯದ ಇನ್ನೂ ಅನೇಕ ತೊಂದರೆಗಳು ಕಾದಿದ್ದುವು.

ನಾನು ಬಂದುದನ್ನು ತಿಳಿಸಿದಾಗ ನಮ್ಮಣ್ಣನು ನನ್ನನ್ನು ಇದಿರು ಗೊಳ್ಳುವುದಕ್ಕೆ ಅಲ್ಲಿಗೆ ಬಂದಿದ್ದನು. ಆತನು ಆಗಲೇ ಡಾ. ಮೆಹತಾ ಮತ್ತು ಅವರ ಅಣ್ಣಂದಿರ ಗುರುತನ್ನು ಮಾಡಿಕೊಂಡಿದ್ದನು. ಡಾ. ಮೆಹತಾರವರು ನಾನು ತಮ್ಮ ಜೊತೆಯಲ್ಲಿಯೇ ಇರಬೇಕೆಂದು ಆಗ್ರಹ ಪೂರ್ವಕವಾಗಿ ಹೇಳಿದುದರಿಂದ ಅವರಲ್ಲಿಗೇ ಹೋದೆವು. ಈ ರೀತಿ ಯಾಗಿ ವಿಲಾಯತಿಯಲ್ಲಿ ಪ್ರಾರಂಭವಾದ ನಮ್ಮ ಪರಿಚಯವು ಈ ದೇಶ ದಲ್ಲಿ ಅಭಿವೃದ್ಧಿ ಹೊಂದಿ ನಮ್ಮೆರಡು ಕುಟುಂಬಗಳ ಮಧ್ಯೆ ಶಾಶ್ವತ ಮೈತ್ರಿಯಾಗಿ ನೆಲೆಸಿತು.

ನಮ್ಮ ತಾಯಿಯನ್ನು ನೋಡಲು ನಾನು ಕಾತರನಾಗಿದ್ದೆನು ನನ್ನನ್ನು ಇದಿರುಗೊಂಡು ಆಲಂಗಿಸಲು ಆಕೆಯು ಜೀವಂತಳಾಗಿರ ಲಿಲ್ಲವೆಂದು ನನಗೆ ತಿಳಿದಿರಲಿಲ್ಲ. ಈಗ ನನಗೆ ಈ ದುಃಖದ ವರ್ತಮಾನ ವನ್ನು ತಿಳಿಸಿದರು. ಪದ್ಧತಿಯ ಪ್ರಕಾರ ಸೂತಕಸ್ನಾನವನ್ನು ಮಾಡ ಬೇಕಾಯಿತು. ನಮ್ಮ ತಾಯಿಯ ಮರಣವು ನಾನು ಸೀಮೆಯಲ್ಲಿ ದ್ದಾಗಲೇ ಸಂಭವಿಸಿದ್ದಿತು. ನಾನು ವಿದೇಶದಲ್ಲಿದ್ದಾಗ ಈ ಪೆಟ್ಟು ತಗಲಬಾರದೆಂದು ನಮ್ಮಣ್ಣನು ಈ ಸಮಾಚಾರವನ್ನು ನನಗೆ ತಿಳಿಸಿರಲಿಲ್ಲ. ವರ್ತಮಾನವು ತಿಳಿದಾಗ ದುಃಖದ ಹೊಡೆತವೇನೂ ಕಡಿಮೆಯಾಗಲಿಲ್ಲ. ಆದರೆ ನಾನು ಈ ವಿಷಯವನ್ನು ಬೆಳೆಸಬಾರದು. ನಮ್ಮ ತಂದೆಯ ಮರಣದಿಂದ ಉಂಟಾದ ದುಃಖಕ್ಕಿಂತಲೂ ಈ ಸಂದರ್ಭದಲ್ಲಿ ನನ್ನ ಮನ ಸ್ಸಿನ ಉದ್ವೇಗವು ಹೆಚ್ಚಾಗಿದ್ದಿತು. ನಾನು ಮನಸ್ಸಿನಲ್ಲಿ ಮಾಡಿಕೊಂಡಿದ್ದ ಅನೇಕ ಆಸೆಗಳು ಚದರಿಹೋದುವು. ಆದರೆ ಈ ವರ್ತಮಾನವನ್ನು ಕೇಳಿ ನಾನು ಅತ್ಯುತ್ಕರೆಯಲಿಲ್ಲವೆಂದೂ ಬಹುಶಃ ಕಣ್ಣೀರನ್ನು ತಡೆಯಲಿಕ್ಕೆ ಕೂಡ ಶಕ್ತನಾದೆನೆಂದೂ ನಮ್ಮ ತಾಯಿಯ ಮರಣವು ಸಂಭವಿಸದಿದ್ದರೆ ಹೇಗೋ ಹಾಗೆ ಜೀವನದ ಕಾರ್ಯಗಳನ್ನು ನಡೆಸತೊಡಗಿದೆನೆಂದೂ ನನಗೆ ನೆನಪಿದೆ.

ಡಾ. ಮೆಹತಾರವರು ನನಗೆ ಕೆಲವು ಮಿತ್ರರ ಪರಿಚಯವನ್ನು ಮಾಡಿಕೊಟ್ಟರು. ಈ ಮಿತ್ರರಲ್ಲಿ ಇವರ ಅಣ್ಣಂದಿರಾದ ರೇವಾಶಂಕರ ಜಗಜೀವನರೊಬ್ಬರು (೮). ನಮ್ಮಿಬ್ಬರಿಗೂ ಆಜೀವನ ಪರ್ಯಂತವೂ

ನೆಲೆಸಿದ ಮೈತ್ರಿಯು ಬೆಳೆಯಿತು. ಆದರೆ ನಾನು ಇಲ್ಲಿ ವಿಶೇಷವಾಗಿ ಗಮನಿಸಬೇಕಾದುದನ್ನು ಬರೆಯಬೇಕು ಸುನ್ನಾಪು ಕವಿ ರಾಯಚಂದ ಅಥವಾ ರಾಜಚಂದ್ರರ ಪರಿಚಯ. ಇವರು ಡಾ. ಮೆಹತಾರವರ ಅಣ್ಣಂದಿರೊಬ್ಬರ ಅಳಿಯಂದಿರಾಗಿಯೂ ರೇವಾಶಂಕರ ಜಗಜೀವನರ ಹೆಸರಿನಲ್ಲಿ ನಡೆಯುತ್ತಿದ್ದ ರತ್ನಪಡಿ ವ್ಯಾಪಾರದಲ್ಲಿ ಪಾಲುಗಾರರಾಗಿಯೂ ಇದ್ದರು. ಆ ಸಮಯದಲ್ಲಿ ಇವರಿಗೆ ಇಪ್ಪತ್ತೈದು ವರ್ಷಕ್ಕೆ ಜಾಸ್ತಿಯಾಗಿರಲಿಲ್ಲ. ಆದರೆ ನಾನು ಇವರನ್ನು ಮೊದಲು ನೋಡಿದಾಗ ಇವರು ಬಹಳ ಉಚ್ಚ ಪ್ರಕೃತಿಯವರೆಂದೂ ವಿದ್ವಾಂಸರೆಂದೂ ನನಗೆ ಮಂದಟ್ಟಾಯಿತು. ಇವರಿಗೆ ಶತಾವಧಾನಿಯೆಂಬ (ಇ) ಪ್ರಖ್ಯಾತಿಯೂ ಇದ್ದಿತು. ಇವರ ಶತಾವಧಾನವನ್ನು ನೋಡಬೇಕೆಂದು ಡಾ. ಮೆಹತಾರವರು ನನಗೆ ಸೂಚಿಸಿದರು. ನಾನು ಅವರ ಮುಂದೆ ನನ್ನ ಐರೋಪ್ಯ ಭಾಷಾ ಜ್ಞಾನದ ಭಂಡಾರವನ್ನೆಲ್ಲಾ ಬರಿದುಮಾಡಿ ಕವಿಗೆ ಅದನ್ನು ಉಚ್ಚರಿಸ ಹೇಳಿದೆನು. ಕವಿ ರಾಯಚಂದಭಾಯಿಯು ನಾನು ಯಾವ ಕ್ರಮದಲ್ಲಿ ಆ ಶಬ್ದಗಳನ್ನು ಹೇಳಿದ್ದೆನೋ ಅದೇ ಕ್ರಮದಲ್ಲಿಯೇ ಅವನ್ನು ಪುನಃ ಹೇಳಿದರು. ಇವರ ಈ ಶಕ್ತಿಯು ನನ್ನಲ್ಲಿ ಆಶ್ಚರ್ಯವನ್ನುಂಟುಮಾಡಿದರೂ ಅದು ನನ್ನನ್ನು ಮುಗ್ಧನನ್ನಾಗಿ ಮಾಡಲಿಲ್ಲ. ನನ್ನನ್ನು ಮುಗ್ಧನನ್ನಾಗಿ ಮಾಡಿದ ವಿಷಯವು ಆಮೇಲೆ ನನ್ನ ಅನುಭವಕ್ಕೆ ಬಂದಿತು. ಅದೇನೆಂದರೆ ಅವರ ವಿಶಾಲ ಶಾಸ್ತ್ರಜ್ಞಾನ, ಪರಿಶುದ್ಧ ಚಾರಿತ್ರ ಮತ್ತು ಆತ್ಮಸಂದರ್ಶನವನ್ನು ಹೊಂದಲು ಅವರಿಗಿದ್ದ ತೀವ್ರವಾದ ಇಚ್ಛೆ. ಆತ್ಮಸಾಕ್ಷಾತ್ಕಾರವೊಂದಕ್ಕಾಗಿಯೇ ಇವರು ಜೀವಿಸಿದ್ದುದೆಂದು ನನಗೆ ಆಮೇಲೆ ತಿಳಿಯಬಂದಿತು. ಮುಕ್ತಾನಂದರ (ಈ) ಈ ಉಕ್ತಿಯು :—

ದಿನದನಿತು ಕಜ್ಜದಲಿ ಹರಿಪ ಕಟನಾದೊಡೆ।
ಜನುಮ ಸಾಫಲ್ಯವಂ ಪಡೆವೆನೆಂದು ||
ಭಕ್ತಮುಕ್ತಾನಂದನಿರವ ಜೋಡಿಪ ಎಳೆಯು।
ಭಕ್ತಜನಮಂದಾರ ಶ್ರೀ ಹರಿಯೆ ಅಲ್ತೆ ||

ಸದಾ ಇವರ ಬಾಯಲ್ಲಿರುತ್ತಿದ್ದಿತು. ಇವರ ಹೃದಯ ಭಿತ್ತಿಯಲ್ಲಿ ಚಿತ್ರಿತವಾಗಿದ್ದಿತು.

ರಾಯಚಂದ್ರಭಾಯಿಯವರು ಲಕ್ಷಾಂತರ ರೂಪಾಯಿಯ ವ್ಯಾಪಾರಮಾಡುತ್ತಿದ್ದರು. ಮತ್ತು ರತ್ನಗಳ ಪರೀಕ್ಷೆಯಲ್ಲಿ ಅವರು ನಿಪುಣರು. ಇವರ ಬುದ್ಧಿಶಕ್ತಿಗೆ ಮೀರಿದಷ್ಟು ತೊಡಕಾದ ವ್ಯಾಪಾರ ಸಂಬಂಧದ ಪ್ರಶ್ನೆಯೇ ಇರಲಿಲ್ಲ. ಆದರೆ ಇದಾವುದೂ ಅವರ ಜೀವನದ ಮುಖ್ಯೋದ್ದೇಶವಾಗಿರಲಿಲ್ಲ. ಈಶ್ವರ ಸಾಕ್ಷಾತ್ಕಾರವೇ ಅವರ ಪುರುಷಾರ್ಥವಾಗಿದ್ದಿತು. ಅವರ ಅಂಗಡಿಯ ಮೇಜಿನಮೇಲೆ, ಇತರ ವಸ್ತುಗಳೊಡನೆ ಯಾವುದಾದರೂ ಧಾರ್ಮಿಕಪುಸ್ತಕವು ಮತ್ತು ಅವರ ದಿನಚರಿಯ ಪುಸ್ತಕ (ಡೈರಿ) ವು ಇದ್ದೇ ಇರುತ್ತಿದ್ದುವು. ವ್ಯಾಪಾರದ ವಿಚಾರವು ಮುಗಿಯುತ್ತಲೇ ಅವರು ಧಾರ್ಮಿಕ ಪುಸ್ತಕವನ್ನಾಗಲಿ ತಮ್ಮ ದಿನಚರಿಯ ಪುಸ್ತಕವನ್ನಾಗಲಿ ಕೈಗೆ ತೆಗೆದುಕೊಳ್ಳುತ್ತಿದ್ದರು. ಅವರ ಲೇಖನಗಳಲ್ಲಿ ಪ್ರಕಟಿತವಾಗಿರುವುದರ ಹೆಚ್ಚು ಭಾಗವು ಈ ದಿನಚರಿಯ ಪುಸ್ತಕದಿಂದ ತೆಗೆದುಕೊಂಡುದಾಗಿದೆ. ಲಕ್ಷಾಂತರ ರೂಪಾಯಿಗಳ ವ್ಯಾಪಾರವನ್ನು ಮುಗಿಸಿದ ಮರುಕ್ಷಣವೇ ಆತ್ಮಜ್ಞಾನದ ಗೂಢ ವಿಚಾರಗಳನ್ನು ಬರೆಯುತ್ತಿದ್ದ ಮನುಷ್ಯನು ವ್ಯಾಪಾರಿಯೆಂಬುದು ಸಲ್ಲದ ಮಾತು ಆತನು ನಿಜವಾಗಿಯೂ ಸತ್ಯೋಪಾಸಕನು. ಇವರು ಹೀಗೆ ವ್ಯಾಪಾರದ ಮಧ್ಯೆ ಈಶ್ವರೋಪಾಸನೆಯಲ್ಲಿ ಲೀನರಾದುದನ್ನು ನಾನು ಒಂದೆರಡುಸಲವಲ್ಲ, ಅನೇಕಬಾರಿ ನೋಡಿದೆನು. ಇವರು ಎಚ್ಚರತಪ್ಪಿ ನಡೆದುದನ್ನು ನಾನು ಎಂದೂ ಕಾಣಲಿಲ್ಲ. ನನ್ನಿಂದ ಅವರಿಗೆ ವ್ಯಾಪಾರದ ಮಾರ್ಗವಾಗಿಯಾಗಲಿ ಇನ್ನಾವರೀತಿಯಲ್ಲಾಗಲಿ ಲಾಭವುಂಟಾಗುವಂತಿರಲಿಲ್ಲ. ಆದರೂ ನಾನು ಅವರೊಡನೆ ಗಾಢ ಸ್ನೇಹದ ಸುಖವನ್ನನುಭವಿಸಿದೆನು. ನಾನು ಆಗ ಕೆಲಸವಿಲ್ಲದ ಬ್ಯಾರಿಸ್ಟರಾಗಿದ್ದೆನು. ಆದರೂ ನಾನು ಅವರ ಬಳಿಗೆ ಹೋದಾಗಲೆಲ್ಲ ಅವರು ನನ್ನೊಡನೆ ಧರ್ಮಸಂಬಂಧವಾದ ಮಹತ್ವದ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದರು. ನಾನು ಇನ್ನೂ ಕತ್ತಲೆಯಲ್ಲಿ ತಡಕಾಡುತ್ತಿದ್ದೆನಾದರೂ ಧರ್ಮಜ್ಞಾನದಲ್ಲಿ ನನಗೆ ಆಗ ಅಂತಹ ಕುತೂಹಲವಿದ್ದಿತೆಂದು ಹೇಳಲಾಗುತ್ತಿರಲಿಲ್ಲವಾದರೂ ರಾಯಚಂದಭಾಯಿಯ ಧರ್ಮವಿಷಯಕವಾದ ಮಾತುಗಳು ನನ್ನ ಮನಸ್ಸನ್ನು ಸೆಳೆಯುತ್ತಿದ್ದುವು.

ಇದಾದಮೇಲೆ ಅನೇಕ ಧರ್ಮಾಚಾರ್ಯರನ್ನೋ ಅಥವಾ ಮತದ ಮುಖಂಡರನ್ನೋ ನಾನು ನೋಡಿದ್ದೇನೆ  ಬೇರೆಬೇರೆ ಮತ ಗುರುಗಳನ್ನು ಬೆಟ್ಟಿಮಾತಲು ನಾನು ಪ್ರಯತ್ನಪಟ್ಟಿದ್ದೇನೆ. ಆದರೆ ಇವರಲ್ಲಿ ಯಾರೂ ರಾಯಚಂದಭಾಯಿಯು ಆಕರ್ಷಿಸಿದಂತೆ ನನ್ನ ಮನಸ್ಸನ್ನು ಆಕರ್ಷಿಸಲಿಲ್ಲ. ಅವರ ಮಾತುಗಳು ನೇರನಾಗಿ ಹೃದಯವನ್ನು ಹೊಗುತ್ತಿದ್ದವು. ಅವರ ನೀತಿಶ್ರದ್ಧೆಯು ಹೇಗೋ ಹಾಗೆಯೇ ಅವರ ಬುದ್ಧಿ ತೀಕ್ಷ್ಣತೆಯೂ ಗೌರವಾದರಗಳನ್ನು ಗೆಲ್ಲುತ್ತಿದ್ದಿತು. ಆದುದರಿಂದ ಆಧ್ಯಾತ್ಮಿಕ ಸಂಕಟವೇನಾದರೂ ಒದಗಿದರೆ ನಾನು ಅವರನ್ನು ಮರೆಹೊಗುತ್ತಿದ್ದೆನು.

ರಾಯಚಂದಭಾಯಿಯ ವಿಚಾರದಲ್ಲಿ ನನಗೆ ಇಷ್ಟು ಮನ್ನಣೆಯಿದ್ದರೂ ನಾನು ಅವರನ್ನು ನನ್ನ ಹೃದಯಮಂಟಪದಲ್ಲಿ ಗುರುವಿನ ಗದ್ದಿಗೆಗೇರಿಸಲಾಗಲಿಲ್ಲ. ಆ ಸ್ಥಾನವು ಇನ್ನೂ ಬರಿದಾಗಿಯೇ ಇದೆ. ಗರುವಿಗಾಗಿ ನಾನು ಇನ್ನೂ ಅರಸುತ್ತಲೇ ಇದ್ದೇನೆ.

ಹಿಂದೂಧರ್ಮವು ಗುರೂಪದೇಶಕ್ಕೂ ಆತ್ಮಸಾಕ್ಷಾತ್ಕಾರದಲ್ಲಿ ಗುರುಪದಕ್ಕೂ ಕೊಟ್ಟಿರುವ ಮಹತ್ವದಲ್ಲಿ ನನಗೆ ನಂಬಿಕೆಯಿದೆ. ಗುರುವಿನ ವಿನಾ ನಿಜವಾದ ಜ್ಞಾನವುಂಟಾಗುವುದಿಲ್ಲವೆಂಬುದರಲ್ಲಿ ಎಷ್ಟೋ ಸತ್ಯಾಂಶವಿದೆಯೆಂದು ನನ್ನ ಅಭಿಪ್ರಾಯ. ಐಹಿಕಜ್ಞಾನಾರ್ಜನೆಯಲ್ಲಿ ಪೂರ್ಣ ಯೋಗ್ಯತೆಯಿಲ್ಲದ ಶಿಕ್ಷಕನಿದ್ದರೂ ನಡಿಸಬಹುದು. ಆದರೆ ಆಧ್ಯಾತ್ಮಿಕ ಶಿಕ್ಷಣದಲ್ಲಿ ಇದಾಗುವುದಿಲ್ಲ. ಗುರುಪದಕ್ಕೆ ಸಂಪೂರ್ಣ ಜ್ಞಾನಿಯೇ ಯೋಗ್ಯನು. ಆದುದರಿಂದ ಸಂಪೂರ್ಣತೆಯನ್ನು ಪಡೆಯುವುದಕ್ಕೆ ನಿರಂತರ ಪ್ರಯತ್ನವು ನಡೆಯಬೇಕು. ಏಕೆಂದರೆ ಶಿಷ್ಯನ ಯೋಗ್ಯತೆಗೆ ತಕ್ಕ ಗುರುವೇ ಸಿಕ್ಕುತ್ತಾನೆ  ಸಂಪೂರ್ಣತೆಯ ಪ್ರಾಪ್ತಿಗಾಗಿ ಕೊನೆಯಿಲ್ಲದಷ್ಟು ಪ್ರಯತ್ನಮಾಡುವುದು ಪ್ರತಿಯೊಬ್ಬನ ಅಧಿಕಾರವಾಗಿದೆ  ಈ ಪ್ರಯತ್ನವು ತಾನೇ ತನ್ನ ಪ್ರತಿಫಲ. ಉಳಿದುದೆಲ್ಲಾ ಈಶ್ವರಾಧೀನ.

ಈ ರೀತಿಯಾಗಿ ನಾನು ರಾಯಚಂದಭಾಯಿಯನ್ನು ನನ್ನ ಹೃದಯಮಂಟಪದಲ್ಲಿ ಗುರುವನ್ನಾಗಿ ಪ್ರತಿಷ್ಠಿಸಲಾಗಲಿಲ್ಲವಾದರೂ ಹೇಗೆ ಅವರು

ನನಗೆ ಮಾರ್ಗದರ್ಶಕರಾಗಿ ನೆರವೀಯುವವರಾಗಿದ್ದರೆಂಬುದನ್ನು ಮುಂದೆ ನೋಡುವೆವು. ಈ ಕಾಲದ ಮೂರು ಜನರು ನನ್ನ ಜೀವನಪಥವನ್ನು ಗಂಭೀರವಾಗಿ ಪರಿವರ್ತಿಸಿ ನನ್ನ ಆತ್ಮನನ್ನು ಸೂರೆಗೊಂಡಿದ್ದಾರೆ— ರಾಯಚಂದಭಾಯಿಯು ತಮ್ಮ ಜೀವಿತ ಸಂಸರ್ಗದಿಂದ; ಟಾಲ್‌ಸ್ಟಾಯ್‌ಯವರು ತಮ್ಮ "ದಿ ಕಿಂಗ್‌ಡಮ್ ಆಫ್ ಹೆವನ್ ಈಸ್ ವಿತಿನ್ ಯು" (ಸ್ವರ್ಗದ ರಾಜ್ಯವು ನಿನ್ನ ಹೃದಯುಲ್ಲಿಯೇ ಇದೆ) ಎಂಬ ಪುಸ್ತಕದಿಂದ; ಮತ್ತು ರಸ್‌ಕಿನರು "ಅಂಟು ದಿಸ್ ಲಾಸ್ಟ್" (ಸರ್ವೋದಯ) ಎಂಬ ಪುಸ್ತಕದಿಂದ. ಈ ಪ್ರಸಂಗಗಳು ತಮ್ಮತಮ್ಮ ಸ್ಥಾನಗಳಲ್ಲಿ ವರ್ಣಿಸಲ್ಪಡುತ್ತವೆ.



೨

# ಸಂಸಾರ ಪ್ರವೇಶ

ನಮ್ಮ ಹಿರಿಯಣ್ಣನು ನನ್ನ ವಿಷಯದಲ್ಲಿ ಹೆಚ್ಚಾದ ಆಸೆಯನ್ನಿಟ್ಟು ಕೊಂಡಿದ್ದನು. ಈತನಿಗೆ ಹಣದಲ್ಲಿಯೂ ಕೀರ್ತಿಯಲ್ಲಿಯೂ ಅಧಿಕಾರ ದಲ್ಲಿಯೂ ಹೆಚ್ಚು ಒಲುಮೆಯಿದ್ದಿತು. ಈತನು ವಿಶಾಲಹೃದಯನು. ಈತನ ಔದಾರ್ಯವು ವಿವೇಕದ ಎಲ್ಲೆಯನ್ನು ಮೀರಿದ್ದಿತು. ಇದರಿಂದಲೂ ಮತ್ತು ತನ್ನ ಸರಳಸ್ವಭಾವದಿಂದಲೂ ಈತನು ಅನೇಕ ಮಿತ್ರರನ್ನು ಸಂಪಾದಿಸಿದ್ದನು. ಇವರ ಸಹಾಯದಿಂದ ನನಗೆ ಮೊಕದ್ದಮೆಗಳು ಬರುವುವೆನ್ನುವುದೇ ಆತನ ನಿರೀಕ್ಷಣೆ. ನನ್ನ ವಕೀಲಿ ಕೆಲಸವು ಗುರು ತರವಾಗಿ ನಡೆಯುವುದೆಂದು ಆತನ ಭರವಸೆ. ಈ ನಿರೀಕ್ಷಣೆಯ ಮೇಲೆ ನಮ್ಮಣ್ಣನು ಮನೆಯ ಖರ್ಚನ್ನು ಹೆಚ್ಚಿಸಿದ್ದನು. ಮತ್ತು ನನ್ನ ವಕೀಲಿಯ ಕೆಲಸವು ಸುಸೂತ್ರವಾಗಿ ನಡೆಯಲು ಕೈಲಾದ ಪ್ರಯ ತ್ನವನ್ನೆಲ್ಲಾ ಮಾಡಿದ್ದನು.

ನಾನು ಸೀಮೆಗೆ ಹೋದ ವಿಷಯವಾಗಿ ನಮ್ಮ ಕುಲದಲ್ಲಿ ಎದ್ದಿದ್ದ ಗಲಭೆಯು ಇನ್ನೂ ಶಾಂತವಾಗಿರಲಿಲ್ಲ. ನಮ್ಮ ಬಂಧುಗಳಲ್ಲಿ ಎರಡು ಪಂಗಡಗಳಾಗಿ ಒಂದು ಪಕ್ಷವು ನನ್ನನ್ನು ಒಡನೆಯೇ ಜಾತಿಗೆ ಸೇರಿಸಿ ಕೊಂಡಿತು. ಇನ್ನೊಂದು ಪಕ್ಷವು ನನ್ನನ್ನು ಜಾತಿಗೆ ಸೇರಿಸಿ ಕೊಳ್ಳಕೂಡದೆಂದು ಮನಸ್ಸುಮಾಡಿದ್ದಿತು. ಮೊದಲನೆಯ ಪಕ್ಷದ ವರನ್ನು ಸಂತೋಷಪಡಿಸುವುದಕ್ಕಾಗಿ ನಮ್ಮಣ್ಣನು ನನ್ನನ್ನು ರಾಜ ಕೋಟೆಗೆ ಕರೆದುಕೊಂಡುಹೋಗುವುದಕ್ಕೆ ಮೊದಲು ನಾಸಿಕಕ್ಕೆ ಕೊಂಡೊಯ್ದು ಅಲ್ಲಿನ ಪವಿತ್ರವಾದ ನದಿಯಲ್ಲಿ ಸ್ನಾನಮಾಡಿಸಿ ನಾವು ರಾಜಕೋಟೆಗೆ ಹೋದಮೇಲೆ ನಮ್ಮ ಬಂಧುಗಳಿಗೆ ಸಮಾರಾಧನೆ ಮಾಡಿಸಿದನು. ನನಗೆ ಇದೆಲ್ಲಾ ಸರಿಬೀಳಲಿಲ್ಲ. ಆದರೆ ನಮ್ಮಣ್ಣನಿಗೆ

ನನ್ನಲ್ಲಿ ಅಳೆಯಲಾಗದಷ್ಟು ಪ್ರೇಮವಿದ್ದಿತು. ಆತನಿಗೆ ನನ್ನಲ್ಲಿ ಎಷ್ಟು ಪ್ರೇಮವಿದ್ದಿತೋ ನನಗೆ ಆತನಲ್ಲಿ ಅಷ್ಟು ಭಕ್ತಿಯಿದ್ದಿತು. ಆದು ದರಿಂದ ಆತನ ಇಚ್ಛೆಯನ್ನೇ ಆಜ್ಞೆಯೆಂದು ತಿಳಿದುಕೊಂಡು ಯಂತ್ರ ದಂತೆ ಆತನ ಇಷ್ಟದ ಪ್ರಕಾರ ನಡೆಯುತ್ತಿದ್ದೆನು. ಈ ರೀತಿಯಾಗಿ ನನ್ನನ್ನು ಪುನಃ ಜಾತಿಗೆ ಸೇರಿಸಿಕೊಳ್ಳುವ ವಿಚಾರವು ಕೊನೆಗಂಡಂತಾ ಯಿತು.

ನನಗೆ ಬಹಿಷ್ಕಾರವನ್ನು ಹಾಕಿದ ಪಂಗಡಕ್ಕೆ ಸೇರಲು ನಾನು ಯಾವಾಗಲೂ ಪ್ರಯತ್ನಿಸಲಿಲ್ಲ. ಈ ಪಕ್ಷದ ಮುಖ್ಯಸ್ಥರ ವಿಚಾರ ವಾಗಿ ನನ್ನ ಮನಸ್ಸಿನಲ್ಲಿ ಕ್ರೋಧ ಕೂಡ ಉಂಟಾಗಲಿಲ್ಲ. ಇವರಲ್ಲಿ ನನ್ನನ್ನು ಅಪ್ರಿಯವಾಗಿ ಕಾಣುವವರೂ ಇದ್ದರು. ನಾನು ಇವರು ಗಳ ಮನಸ್ಸನ್ನು ಎಳ್ಳಷ್ಟೂ ನೋಯಿಸದಂತೆ ಎಚ್ಚರಿಕೆಯಿಂದಿರುತ್ತಿ ದ್ದೆನು. ಜಾತಿಬಹಿಷ್ಕಾರಕ್ಕೆ ಸಂಬಂಧಪಟ್ಟ ಕುಲನಿಯಮಗಳನ್ನು ನಾನು ಪೂರ್ಣವಾಗಿ ಗಮನಿಸುತ್ತಿದ್ದೆನು. ಈ ನಿಯಮಗಳ ಪ್ರಕಾರ ನನ್ನ ಬಂಧುಗಳಾರೂ—ನಮ್ಮ ಮಿತ್ರೆಯಾಗಲಿ, ಮಾವನಾಗಲಿ, ಕಡೆಗೆ ನಮ್ಮ ಅಕ್ಕನಾಗಲಿ, ಭಾವನಾಗಲಿ—ನನ್ನನ್ನು ಮನೆಯೊಳಕ್ಕೆ ಸೇರಿಸ ಕೂಡದಾಗಿದ್ದಿತು. ನಾನು ಇವರುಗಳ ಮನೆಯಲ್ಲಿ ನೀರನ್ನು ಕೂಡ ಕುಡಿಯುತ್ತಿರಲಿಲ್ಲ. ಅವರು ಯಾರಿಗೂ ಕಾಣದಂತೆ ಬಹಿಷ್ಕಾರಕ್ಕೆ ವಿರೋಧವಾಗಿ ನನಗೆ ನೀರು ಕೊಡಲು ಸಿದ್ಧರಾಗಿದ್ದರೂ ಎಲ್ಲರೆದುರಿಗೂ ಮಾಡದುದನ್ನು ಒಳಗೊಳಗೇ ಮಾಡುವುದಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ.

ನನ್ನ ಈ ಜಾಗರೂಕತೆಯ ಸತತೆಯಿಂದ ಉಂಟಾದ ಪರಿಣಾಮ ವೇನೆಂದರೆ ನನ್ನ ಕುಲದವರಿಂದ ತೊಂದರೆಯೊದಗಲು ಎಂದೂ ಅವಕಾಶ ವಾಗಲಿಲ್ಲ. ಇಷ್ಟೇ ಅಲ್ಲ. ಇಂದು ಕೂಡ ಒಂದು ಪಕ್ಷದವರು ನನ್ನನ್ನು ನಿಯಮಪೂರ್ವಕವಾಗಿ ಬಹಿಷ್ಕೃತನೆಂದು ಕಂಡರೂ ಅವರು ನನಗೆ ಸದಾ ಔದಾರ್ಯವನ್ನೂ ಆದರವನ್ನೂ ತೋರಿಸಿದ್ದಾರೆ. ಅವರು ನನ್ನಿಂದ ಪ್ರತಿಫಲವನ್ನಪೇಕ್ಷಿಸದೆ ನನ್ನ ಕಾರ್ಯಗಳಲ್ಲಿ ಅನೇಕ ಸಲ ಸಹಾಯ

ವನ್ನುಕೂಡ ಮಾಡಿದ್ದಾರೆ. ಇದು ನನ್ನ ಅಪ್ರತೀಕಾರದ ಮಧುರ ಫಲವೆಂದೆಣಿಸುತ್ತೇನೆ

ನನ್ನನ್ನು ಜಾತಿಗೆ ಸೇರಿಸಿಕೊಳ್ಳಬೇಕೆಂದು ನಾನು ಚಳವಳಿ ನಡೆಸಿದುದೇ ಆದರೆ, ನಮ್ಮ ಕುಲವನ್ನು ಇನ್ನೂ ಅನೇಕ ಪಂಗಡಗಳಾಗಿ ವಿಂಗಡಿಸಲು ಯತ್ನಿಸಿದುದೇ ಆದರೆ, ನಮ್ಮ ಕುಲದವರನ್ನು ಕೆಣಕಿದುದೇ ಆದರೆ, ಅವರು ಖಂಡಿತವಾಗಿ ಮುಯ್ಯಿಗೆಮುಯ್ಯಿ ತೀರಿಸದೆ ಬಿಡುತ್ತಿರಲಿಲ್ಲ. ನಾನು ವಿಲಾಯತಿಯಿಂದ ಬಂದಮೇಲೆ ಯಾವ ತಂಟೆಯೂ ಇಲ್ಲದೆ ಇರುವುದಕ್ಕೆ ಬದಲಾಗಿ ಚಳವಳಿಯ ಸುಳಿಗೆ ಸಿಕ್ಕುವುದಷ್ಟೇ ಅಲ್ಲದೆ ಬಹುಶಃ ಕಪಟವರ್ತನೆಯಲ್ಲಿ ಭಾಗಿಯಾಗಿಯೂ ಇರುತ್ತಿದ್ದೆನು.

ನನ್ನ ಹೆಂಡತಿಯೊಡನೆ ನನ್ನ ಸಂಬಂಧವು ಇನ್ನೂ ಸಮರ್ಪಕವಾಗಿರಲಿಲ್ಲ. ವಿಲಾಯತಿಯ ವಾಸವು ಕೂಡ ಆಕೆಯ ವಿಷಯದಲ್ಲಿ ನನಗಿದ್ದ ಅಸೂಯೆಯನ್ನು ಇನ್ನೂ ತೊಲಗಿಸಿರಲಿಲ್ಲ. ಪ್ರತಿಯೊಂದು ಸಣ್ಣ ವಿಚಾರದಲ್ಲಿಯೂ ಸಂದೇಹಪಡುವುದನ್ನು ಇನ್ನೂ ಬಿಟ್ಟಿರಲಿಲ್ಲ. ಆದುದರಿಂದ ನನ್ನ ಮನಸ್ಸಿನಲ್ಲಿ ಮೂಡಿದ್ದ ಆಸೆಗಳೆಲ್ಲಾ ಈಡೇರದೆ ಇದ್ದುವು. ನನ್ನ ಹೆಂಡತಿಯು ಓದುಬರಹವನ್ನು ಕಲಿತುಕೊಳ್ಳಬೇಕೆಂದೂ ನಾನು ಈ ಅಭ್ಯಾಸದಲ್ಲಿ ಆಕೆಗೆ ನೆರವೀಯಬೇಕೆಂದೂ ಮನಸ್ಸುಮಾಡಿದ್ದೆನು. ಆದರೆ ನನ್ನ ವಿಷಯಾಸಕ್ತಿಯ ದೆಸೆಯಿಂದ ಇದು ಸಾಧ್ಯವಾಗಲಿಲ್ಲ. ನನ್ನ ದೋಷಗಳಿಂದ ಆಕೆಯು ಕಷ್ಟವನ್ನನುಭವಿಸಬೇಕಾಗಿದ್ದಿತು. ಒಂದುಸಲ ಆಕೆಯನ್ನು ತವರುಮನೆಗೆ ಕಳುಹಿಸಿಬಿಟ್ಟೆನು. ಬಹು ಸಂಕಟಪಡಿಸಿದಮೇಲೆಯೇ ನಾನು ಆಕೆಯನ್ನು ಪುನಃ ಸ್ವೀಕರಿಸಲು ಒಪ್ಪಿದುದು. ಇದು ಕೇವಲ ನನ್ನ ಮೂರ್ಖತನವೆಂದು ಆಮೇಲೆ ನನಗೆ ತೋರಿಬಂದಿತು.

ಹುಡುಗರ ಶಿಕ್ಷಣವನ್ನು ಮಾರ್ಪಡಿಸಬೇಕೆಂದು ನಾನು ಯೋಚಿಸಿದ್ದೆನು. ನಮ್ಮ ಹಿರಿಯಣ್ಣನಿಗೆ ಮಕ್ಕಳಿದ್ದರು. ನಾನು ಸೀಮೆಗೆ ಹೋದಾಗ ಇಲ್ಲಿಯೇ ಬಿಟ್ಟುಹೋಗಿದ್ದ ನನ್ನಮಗನಿಗೆ ಈಗ ಸುಮಾರು ನಾಲ್ಕು ವರ್ಷ ವಯಸ್ಸಾಗಿದ್ದಿತು. ಈ ಹುಡುಗರಿಗೆ ವ್ಯಾಯಾಮ ಮಾಡಿಸಿ ಅವರನ್ನು ದೃಢಕಾಯರನ್ನಾಗಿ ಮಾಡಬೇಕೆಂದೂ ಅವರನ್ನು

ನನ್ನ ಜೊತೆಯಲ್ಲಿಯೇ ಇಟ್ಟುಕೊಂಡು ಮುಂದಕ್ಕೆ ತರಬೇಕೆಂದೂ ನಾನು ಮುಂಚೆಯೇ ಮನಸ್ಸು ಮಾಡಿಕೊಂಡಿದ್ದೆನು. ಇದರಲ್ಲಿ ನಮ್ಮಣ್ಣನ ಸಹಾನುಭೂತಿಯೂ ಇದ್ದಿತು. ನಾನು ಈ ವಿಷಯದಲ್ಲಿ ತಕ್ಕಮಟ್ಟಿಗೆ ಸಫಲತೆಯನ್ನೂ ಹೊಂದಿದೆನು. ಹುಡುಗರೊಡನೆ ಸೇರುವುದರಲ್ಲಿ ನನಗೆ ಬಹಳ ಇಷ್ಟವಿದ್ದಿತು. ಇಂದುಕೂಡ ಅವರೊಡನೆ ಹಾಸ್ಯಮಾಡುವುದೂ ಆಟವಾಡುವುದೂ ನನ್ನ ಅಭ್ಯಾಸವಾಗಿ ನಿಂತು ಹೋಗಿದೆ. ನಾನು ಹುಡುಗರಿಗೆ ಒಳ್ಳೆಯ ಶಿಕ್ಷಕನಾಗುವೆನೆಂದು ಅಂದಿನಿಂದಲೂ ನನ್ನ ಎಣಿಕೆ.

ಆಹಾರದ ವಿಷಯದಲ್ಲಿ ಕೂಡ ಸುಧಾರಣೆ ಮಾಡುವುದರ ಆವಶ್ಯಕತೆಯು ನನಗೆ ಸ್ಪಷ್ಟವಾಗಿದ್ದಿತು. ಚಹಾ ಮತ್ತು ಕಾಫಿಗಳು ಆಗಲೇ ನಮ್ಮ ಮನೆಯನ್ನು ಪ್ರವೇಶಮಾಡಿದ್ದುವು. ನಾನು ವಿಲಾಯತಿಯಿಂದ ಹಿಂತಿರುಗಿದಾಗ ನಮ್ಮ ಮನೆಯಲ್ಲಿ ಸೀಮೆಯ ವಾತಾವರಣವು ಸಾಧ್ಯವಾದಷ್ಟುಮಟ್ಟಿಗೆ ಇರಬೇಕೆಂದು ಯೋಚಿಸಿ ನಮ್ಮಣ್ಣನು ಮೊದಲು ಸಮಯಸಂದರ್ಭಗಳಲ್ಲಿ ಮಾತ್ರ ಉಪಯೋಗಿಸುತ್ತಿದ್ದ ಚೀನಾ ಪಾತ್ರೆ ಮುಂತಾದವುಗಳನ್ನು ಈಗ ಮನೆಯಲ್ಲಿ ಸಾಧಾರಣವಾಗಿ ಉಪಯೋಗಿಸುವಂತೆ ಮಾಡಿದ್ದನು. ನನ್ನ 'ಸುಧಾರಣೆ'ಗಳು ವಾಯುಮಂಡಲದ ಬದಲಾವಣೆಯನ್ನು ಪೂರ್ತಿಮಾಡಿದುವು. ಓಟಮೀಲ್ ಗೋಧಿಯ ಅಂಬಲಿಯನ್ನು ಮಾಡಬೇಕೆಂದೂ ಚಹಾ ಮತ್ತು ಕಾಫಿಯ ಬದಲು ಕೋಕೋವನ್ನು ಉಪಯೋಗಿಸಬೇಕೆಂದೂ ನಾನು ಹೇಳಿದೆನು. ಇದರಿಂದ ಆದ ಪರಿಣಾಮವೇನೆಂದರೆ ಕಾಫಿ ಚಹಾ ಕೋಕೋ ಈ ಮೂರನ್ನೂ ಕುಡಿಯಲು ಪ್ರಾರಂಭಮಾಡಿದೆವು. ಬೂಟ್ಸುಗಳೂ ಮೋಜಾಗಳೂ ಆಗಲೇ ಮನೆಯಲ್ಲಿದ್ದುವು. ನಾನು ಐರೋಪ್ಯರ ಉಡುಪನ್ನು ಹಾಕಿಕೊಂಡು ಮನೆಯ ಐರೋಪ್ಯ ಸಂವಿಧಾನವನ್ನು ಪೂರ್ತಿಗೊಳಿಸಿದೆನು.

ಈ ರೀತಿಯಾಗಿ ವೆಚ್ಚವು ಹೆಚ್ಚಾಗುತ್ತಾ ಬಂದಿತು. ದಿನವೂ ಹೊಸಪದಾರ್ಥಗಳು ಮನೆಗೆ ಬಂದುಬೀಳುತ್ತಿದ್ದುವು. ಮನೆಯ ಬಾಯುದಲ್ಲಿ ಆನೆಯನ್ನು ಕಟ್ಟಿಕೊಂಡಂತಾದೇನೋ ಆಯಿತು. ಆದರೆ ಅದಕ್ಕೆ ಆಹಾರವನ್ನೆಲ್ಲಿಂದ ಒದಗಿಸುವುದು? ಒಮ್ಮೆಯೇ ರಾಜಕೋಟೆಯಲ್ಲಿ

ವಕೀಲಿ ಕೆಲಸವನ್ನು ಪ್ರಾರಂಭಮಾಡುವುದರಿಂದ ನಾನು ಖಂಡಿತವಾಗಿ ನಗೆಗೀಡಾಗುತ್ತಿದ್ದೆನು. ಅಲ್ಲಿನ ವಕೀಲರಷ್ಟು ಅನುಭವವೂ ತಿಳಿವಳಿಕೆಯೂ ಇಲ್ಲದಿದ್ದರೂ ಅವರಿಗಿಂತ ಹತ್ತರಷ್ಟುಹೆಚ್ಚಾಗಿ ರುಸುಮನ್ನು (ಫೀಸ್) ನಿರೀಕ್ಷಿಸುತ್ತಿದ್ದೆನು! ಹೀಗಿರುವಾಗ ಯಾವ ಮೂಢನು ನನ್ನ ಬಳಿಗೆ ಮೊಕದ್ದಮೆಯನ್ನು ತೆಗೆದುಕೊಂಡುಬಂದಾನು? ಅಂತಹ ಮೂರ್ಖನಾವನಾದರೂ ಇದ್ದರೂ ನನ್ನ ಅಜ್ಞಾನದ ಜೊತೆಗೆ ಔದ್ಧತ್ಯವನ್ನೂ ಮೋಸವನ್ನೂ ಜೋಡಿಸಿ ಪ್ರಪಂಚಕ್ಕೆ ನನ್ನ ಋಣವನ್ನು ಇನ್ನೂ ಹೆಚ್ಚಿಸುವುದೇನು?

ನನ್ನ ಸ್ನೇಹಿತರು ನಾನು ಕೆಲವುಕಾಲ ಮುಂಬಯಿಗೆಹೋಗಿ ಅಲ್ಲಿ ಹೈಕೋರ್ಟಿನ ಅನುಭವವನ್ನುಹೊಂದಿ ಹಿಂದೂಸ್ಥಾನದ ಕಾನೂನುಗಳನ್ನು ಚೆನ್ನಾಗಿ ತಿಳಿದುಕೊಂಡು ಅಲ್ಲಿ ಮೊಕದ್ದಮೆಗಳೇನಾದರೂ ದೊರಕಿದರೆ ಅವುಗಳನ್ನು ಪಡೆಯಲು ಪ್ರಯತ್ನಪಡಬೇಕೆಂದು ಸಲಹೆಕೊಟ್ಟರು. ಇದಕ್ಕನುಸಾರವಾಗಿ ನಾನು ಮುಂಬಯಿಗೆ ಬಂದೆನು.

ಅಲ್ಲಿ ಒಂದು ಮನೆಯನ್ನು ಮಾಡಿ ಒಬ್ಬ ಅಡಿಗೆಯವನನ್ನು ಗೊತ್ತುಮಾಡಿದೆನು. ನನ್ನ ಕೆಲಸದಲ್ಲಿ ನನಗೆ ಎಷ್ಟು ಯೋಗ್ಯತೆಯಿದ್ದಿತೋ ಅವನ ಕೆಲಸದಲ್ಲಿ ಅವನ ಯೋಗ್ಯತೆಯೂ ಅಷ್ಟೇ. ಇವನು ಬ್ರಾಹ್ಮಣ. ನಾನು ಅವನನ್ನು ಸಂಬಳಕ್ಕೆ ಇಟ್ಟುಕೊಂಡ ಆಳೆಂದೆಣಿಸದೆ ಮನೆಯವರಲ್ಲೊಬ್ಬನಂತೆ ಕಾಣುತ್ತಿದ್ದೆನು. ಅವನು ಮೈಮೇಲೆ ನೀರನ್ನು ಸುರಿದುಕೊಳ್ಳುತ್ತಿದ್ದರೂ ಮೈಯನ್ನು ಮಾತ್ರ ತಿಕ್ಕಿಕೊಳ್ಳುತ್ತಿರಲಿಲ್ಲ. ಅವನ ಪಂಚೆ ಕೊಳಕು, ಅವನ ಜನಿವಾರವೂ ಕೊಳಕು. ಶಾಸ್ತ್ರಗಳ ಜ್ಞಾನವಂತೂ ಅವನಿಗೆ ಸ್ವಲ್ಪವೂ ಇರಲಿಲ್ಲ. ಆದರೆ ಇವನಿಗಿಂತ ಒಳ್ಳೆಯ ಅಡಿಗೆಯವನನ್ನು ತರುವುದೆಲ್ಲಿಂದ?

''ರವಿಶಂಕರ್ (ಅದೇ ಅವನ ಹೆಸರು), ನಿನಗೆ ಅಡಿಗೆಯೇನೋ ಬರದೆ ಇರಬಹುದು. ಆದರೆ ಸಂಧ್ಯಾವಂದನೆ ನಿನಗೆ ಚೆನ್ನಾಗಿ ಬರಬೇಕಲ್ಲವೆ?'' ಎಂದು ನಾನು ಕೇಳುತ್ತಿದ್ದೆನು.

''ಸಂಧ್ಯಾವಂದನೆಯೆ ಸ್ವಾಮಿ! ನೇಗಿಲೇ ನಮ್ಮ ಸಂಧ್ಯಾವಂದನೆ, ಗುದ್ದಲಿಯೇ ನಮ್ಮ ಔಪಾಸನ. ನಮ್ಮ ಬ್ರಾಹ್ಮಣಿಕೆ

ಇಂತಹದು. ನಿಮ್ಮ ಕೃಪೆಯಿಂದಲೇ ನಾನು ಹೊಟ್ಟೆಹೊರದುಕೊಳ್ಳಬೇಕು. ಇಲ್ಲದಿದ್ದರೆ ಆರಂಬ ಇದ್ದೇ ಇದೆ.''

ಆದುದರಿಂದ ನಾನು ರವಿಶಂಕರನ ಶಿಕ್ಷಕನಾಗಬೇಕಾಯಿತು. ಬೇಕಾದಷ್ಟು ಹೊತ್ತು ಇರುತ್ತಿದ್ದಿತು. ಅರ್ಧ ಅಡಿಗೆಯನ್ನು ನಾನೇ ಮಾಡತೊಡಗಿದೆನು. ಸೀಮೆಯಲ್ಲಿ ಮಾಡುತ್ತಿದ್ದ ಶಾಕಾಹಾರದ ಸಂಬಂಧವಾಗಿ ಶೋಧನೆಗಳನ್ನು ಮಾಡಲು ಆರಂಭಿಸಿದೆನು. ಒಂದು ಅಗ್ಗಿಷ್ಟಿಕೆ (ಸ್ಟವ್) ಯನ್ನು ಕೊಂಡುಕೊಂಡು ರವಿಶಂಕರನೊಡನೆ ಪಾಕಶಾಲೆಯ ಪಾರುಪತ್ಯವನ್ನು ವಹಿಸಿದೆನು. ಅವನೊಡನೆ ಊಟ ಮಾಡುವುದಕ್ಕೆ ನನಗೇನೂ ಅಭ್ಯಂತರವಿರಲಿಲ್ಲ. ಬರಬರುತ್ತಾ ಅವನ ಅಭ್ಯಂತರಗಳೂ ಮಾಯವಾದುವು. ಆದುದರಿಂದ ನಾವಿಬ್ಬರೂ ಒಳ್ಳೆಯ ಸಂಗಾತಿಗಳಾದೆವು. ಒಂದು ಅಡಚಣೆಮಾತ್ರ ಇದ್ದಿತು—ರವಿಶಂಕರನು ಕೊಳೆಯೊಡನೆ ತನ್ನ ಗೆಳೆತನವನ್ನು ಬಿಡುವುದಿಲ್ಲವೆಂದೂ ಅಡಿಗೆಯನ್ನು ಶುಚಿಯಾಗಿಟ್ಟಿರುವುದಿಲ್ಲವೆಂದೂ ಶಪಥಮಾಡಿದ್ದನು!

ಆದರೆ ಮುಂಬಯಿಯಲ್ಲಿ ನಾಲ್ಕೈದು ತಿಂಗಳಿಗಿಂತ ಹೆಚ್ಚಾಗಿ ಇರಲು ಸಾಧ್ಯವಾಗಲಿಲ್ಲ. ಏಕಂದರೆ ಖರ್ಚೇನೋ ಹೆಚ್ಚುತ್ತಾಬಂದರೂ ವರಮಾನಮಟ್ಟಿಗೆ ಏನೂ ಇರಲಿಲ್ಲ.

ನಾನು ಸಂಸಾರವನ್ನು ನಡೆಸುವುದಕ್ಕೆ ಮೊದಲು ಮಾಡಿದುದು ಹೀಗೆ. ಬ್ಯಾರಿಸ್ಟರ ಕೆಲಸವು ನನಗೆ ಬಹಳ ಕಠಿಣವಾಗಿ ತೋರಿತು. ಹೊರಗಿನ ಆಡಂಬರ ಜಾಸ್ತಿ, ಒಳಗಿನ ತಿಳಿವು ಮಟ್ಟಿಗೆ ಬಹಳ ಕಡಿಮೆ. ನನ್ನ ಜವಾಬ್ದಾರಿಯ ಹೊರೆಯು ನಾನು ಹೊರದಷ್ಟು ಭಾರವಾಗಿ ಕಂಡಿತು.



## ೩

# ನನ್ನ ಮೊದಲನೆಯ ಮೊಕದ್ದಮೆ

ನಾನು ಮುಂಬಯಿಯಲ್ಲಿರುವಾಗ ಒಂದುಕಡೆ ಕಾನೂನನ್ನು ಅಧ್ಯಯನ ಮಾಡತೊಡಗಿದೆನು. ಇನ್ನೊಂದುಕಡೆ ಆಹಾರದ ವಿಷಯವಾಗಿ ಶೋಧನೆಗಳನ್ನು ನಡೆಸಲು ಮೊದಲುಮಾಡಿದೆನು. ಇವುಗಳಲ್ಲಿ ನನ್ನ ಸ್ನೇಹಿತನಾದ ವೀರಚಂದ ಗಾಂಧಿಯೂ ನನ್ನೊಡನೆ ಸೇರಿದನು. ಅತ್ತಲಾಗಿ ನಮ್ಮಣ್ಣನು ನನಗೆ ಮೊಕದ್ದಮೆಗಳು ಬರುವಹಾಗೆ ತನ್ನ ಕೈಲಾದಷ್ಟು ಪ್ರಯತ್ನಮಾಡುತ್ತಿದ್ದನು.

ಹಿಂದೂಸ್ಥಾನದ ಕಾನೂನುಗಳನ್ನು ಓದುವ ಕೆಲಸವು ಬಹಳ ಬೇಸರದ ಕೆಲಸವಾಗಿದ್ದಿತು. ಸಿವಿಲ್ ಪ್ರೊಸೀಜರ್ ಕೋಡಂತೂ [ವ್ಯವಹಾರ ನಡೆಸುವ ರೀತಿಗೆ ಸಂಬಂಧಪಟ್ಟ ಕಾನೂನು] ನನ್ನ ತಲೆಗೇ ಹತ್ತುತ್ತಿರಲಿಲ್ಲ. ಆದರೆ ಎವಿಡೆನ್ಸ್ ಆಕ್ಟಿನ [ಸಾಕ್ಷ್ಯಕ್ಕೆ ಸಂಬಧಪಟ್ಟ ಕಾನೂನು] ವಿಚಾರವು ಹಾಗಿರಲಿಲ್ಲ. ವೀರಚಂದ ಗಾಂಧಿಯು ಸೊಲಿಸಿಟರ್ ಪರೀಕ್ಷೆಗೆ ಓದುತ್ತಿದ್ದನು. ಅವನು ಬ್ಯಾರಿಸ್ಟರರ ಮತ್ತು ವಕೀಲರ ವಿಚಾರವಾಗಿ ಅನೇಕ ಕತೆಗಳನ್ನು ನನಗೆ ಹೇಳುತ್ತಿದ್ದನು. ''ಫಿರೋಜ್‌ಷಹಾರವರಿಗೆ ಕಾನೂನುಗಳ ಅಗಾಧ ಜ್ಞಾನವಿರುವುದರಿಂದಲೇ ಅವರು ಅಷ್ಟು ಒಳ್ಳೆಯ ವಕೀಲರಾಗಿರುವುದು. ಎವಿಡೆನ್ಸ್ ಆಕ್ಟ್ ಎಲ್ಲಾ ಅವರ ನಾಲಿಗೆಯ ತುದಿಯಲ್ಲೇ ಇದೆ. ೩೨ನೆಯ ಸೆಕ್ಷನ್ ಮೇಲಿನ ಪ್ರತಿಯೊಂದು ಮೊಕದ್ದಮೆಯೂ ಅವರಿಗೆ ಗೊತ್ತಿದೆ. ಬದ್ರುದ್ದೀನ್ ತಯ್ಯಬ್ಜಿಯವರ ವಾದಕೌಶಲ್ಯದ ಮುಂದೆ ನ್ಯಾಯಾಧೀಶರು ಮುಗ್ಧರಾಗುತ್ತಾರೆ.'' ಎಂದು ಹೇಳುತ್ತಿದ್ದನು.

ಇಂತಹ ಪ್ರಸಿದ್ಧ ಪುರುಷರ ಕತೆಗಳನ್ನು ಕೇಳಿದಾಗಲೆಲ್ಲಾ ನನ್ನ ಗಾಬರಿಯು ಹೆಚ್ಚಾಗುತ್ತಿದ್ದಿತು.

"ಬ್ಯಾರಿಸ್ಟರುಗಳು ಐದಾರು ವರ್ಷ ಕೋರ್ಟಿನಲ್ಲಿ ಕುಳಿತು ಕುಳಿತು ಕೊಳೆಯುವುದು ಏನೂ ಹೆಚ್ಚಿನ ವಿಷಯವಲ್ಲ. ಇದಕ್ಕೋಸ್ಕರವೇ ನಾನು ಸೊಲಿಸಿಟರರಾಗಬೇಕೆಂದು ನಿರ್ಧರಿಸಿದೆನು. ಮೂರು ವರ್ಷದೊಳಗಾಗಿ ನಿನ್ನ ಸಂಸಾರವನ್ನು ನೀನು ನಡೆಸುವುದಕ್ಕಾದರೆ ನೀನು ಅದೃಷ್ಟಶಾಲಿಯೆಂದೆಣಿಸಬೇಕು." ಎಂದು ತನ್ನ ಅಭಿಪ್ರಾಯವನ್ನು ನನಗೆ ತಿಳಿಸುತ್ತಿದ್ದನು.

ತಿಂಗಳು ತಿಂಗಳಿಗೂ ವೆಚ್ಚವು ಏರುತ್ತಿದ್ದಿತು. ಹೊರಗಡೆ 'ಬ್ಯಾರಿಸ್ಟರ್' ಎಂಬ ವಿಳಾಸವನ್ನು ಹಾಕಿ ಒಳಗಡೆ ಇನ್ನೂ ಬ್ಯಾರಿಸ್ಟರ್ ಕೆಲಸವನ್ನು ಕಲಿತುಕೊಳ್ಳುವುದು ನನ್ನ ಮನಸ್ಸಿಗೆ ಸರಿಬೀಳುತ್ತಿರಲಿಲ್ಲ. ಈ ವ್ಯಾಕುಲದಿಂದ ನನ್ನ ಓದು ಸರಿಯಾಗಿ ನಡೆಯುತ್ತಿರಲಿಲ್ಲ. ಎವಿಡೆನ್ಸ್ ಆಕ್ಟಿನಲ್ಲಿ ಸ್ವಲ್ಪ ಅಭಿರುಚಿ ಹುಟ್ಟಿತು. ಮೆಯ್ನನ ಹಿಂದೂ ಕಾನೂನಿನ ಮೇಲಿನ ಪುಸ್ತಕವನ್ನು ಬಹಳ ಕುತೂಹಲದಿಂದ ಓದಿದೆನು. ಆದರೆ ಮೊಕದ್ದಮೆಯನ್ನು ನಡೆಸುವುದಕ್ಕೆ ಧೈರ್ಯವಿರಲಿಲ್ಲ. ಈ ನಿಸ್ಸಹಾಯತೆಯು ವರ್ಣನಾತೀತವಾಗಿದ್ದಿತು. ನನ್ನ ಸ್ಥಿತಿಯು ಅತ್ತೆಯ ಮನೆಗೆ ಹೊಸದಾಗಿ ಕಾಲಿಟ್ಟ ಸೊಸೆಯ ಸ್ಥಿತಿಯಂತಿದ್ದಿತು.

ಇಷ್ಟರಲ್ಲಿ ಮಮಿಬಾಯಿ ಎಂಬಾತನ ಮೊಕದ್ದಮೆಯನ್ನು ನಾನು ತೆಗೆದುಕೊಂಡೆನು. ಅದು ಸ್ಮಾಲ್‌ಕಾಸ್ ಕೋರ್ಟಿಗೆ ಹೋಗುವುದಾಗಿದ್ದಿತು. "ನೀನು ದಳ್ಳಾಳಿ (ಟೌಟ್) ಗೆ ಹಣವನ್ನು ಕೊಡಬೇಕಾಗುವುದು." ಎಂದು ಹೇಳಿದರು. ನಾನು "ಅದೆಲ್ಲಾ ಆಗುವುದಿಲ್ಲ." ಎಂದೆನು.

"ತಿಂಗಳಿಗೆ ೩—೪ ಸಾವಿರ ರೂಪಾಯಿ ಸಂಪಾದಿಸುವಂತಹ ಕ್ರಿಮಿನಲ್ ಲಾಯರು ಕೂಡ ಹೀಗೆ ಕಮಿಷನ್ ಕೊಡುತ್ತಾರೆ."

"ನಾನು ಅವರಂತಾಗಬೇಕಾದುದೇನೂ ಇಲ್ಲ. ನನಗೆ ತಿಂಗಳಿಗೆ ೩೦೦ ರೂಪಾಯಿ ಬಂದರೆ ಸಾಕು. ನಮ್ಮ ತಂದೆಯವರಿಗೆ ಅದಕ್ಕೆ ಹೆಚ್ಚಾಗಿ ಬರುತ್ತಿರಲಿಲ್ಲ."

"ಆದರೆ ಆ ಕಾಲವೆಲ್ಲಾ ಹೊರಟು ಹೋಯಿತು. ಮುಂಬಯಿಯಲ್ಲಿ ಖರ್ಚು ಒಂದಕ್ಕೆ ಹತ್ತರಷ್ಟಾಗಿದೆ. ನೀವು ವ್ಯವಹಾರಕ್ಕೆ ತಕ್ಕಂತೆ ನಡೆಯಬೇಕು."

ಆದರೆ ನಾನು ವಜ್ರಮನಸ್ಕನಾಗಿದ್ದೆನು. ಒಂದು ಕಾಸು ಕಮಿಷನನ್ನೂ ಕೊಡಲಿಲ್ಲ. ಆದರೂ ಮಮಿಬಾಯಿಯ ಮೊಕದ್ದಮೆಯು ನನ್ನ ಹತ್ತಿರಕ್ಕೆ ಬಂದಿತು. ಅದು ಸುಲಭವಾದ ಮೊಕದ್ದಮೆಯಾಗಿದ್ದಿತು. ೩೦ ರೂಪಾಯಿ ರುಸುಮು ತೆಗೆದುಕೊಂಡೆನು. ಆ ಮೊಕದ್ದಮೆಯು ಒಂದು ದಿವಸಕ್ಕಿಂತ ಹೆಚ್ಚಾಗಿ ನಡೆಯುವುದಾಗಿರಲಿಲ್ಲ.

ಸ್ಮಾಲ್ ಕಾಸ್ ಕೋರ್ಟಿಗೆ ಇದೇ ನನ್ನ ಪ್ರಥಮ ಪ್ರವೇಶ. ನಾನು ಪ್ರತಿವಾದಿಯ ಕಡೆಯ ವಕೀಲನಾಗಿದ್ದುದರಿಂದ ಪಾಟಿ ಸವಾಲು ಮಾಡಬೇಕಾಗಿದ್ದಿತು. ನಾನು ಎದ್ದುನಿಂತುಕೊಂಡೆನು. ನನ್ನ ಧೈರ್ಯವೆಲ್ಲಾ ಎಲ್ಲೋ ಮಾಯವಾಯಿತು. ನನ್ನ ತಲೆ ತಿರುಗತೊಡಗಿತು. ನ್ಯಾಯಸ್ಥಾನವೆಲ್ಲಾ ನನ್ನ ಸುತ್ತಲೂ ಸುತ್ತುತ್ತಿರುವಂತೆ ತೋರಿತು. ಸವಾಲನ್ನು ಕೇಳುವುದಕ್ಕೆ ತೋಚಲೇ ಇಲ್ಲ. ನ್ಯಾಯಾಧಿಪತಿಯು ಇದನ್ನು ನೋಡಿ ನಕ್ಕಿರಬೇಕು, ವಕೀಲರೆಲ್ಲಾ ವಿನೋದಗೊಂಡಿರಬೇಕು. ಆದರೆ ಇದಾವುದೂ ನನ್ನ ಕಣ್ಣಿಗೆ ಬೀಳುವಂತಿರಲಿಲ್ಲ. ನಾನು ಕುಳಿತುಬಿಟ್ಟೆನು. ದಳ್ಳಾಳಿಯೊಂದಿಗೆ "ನನ್ನ ಕೈಲಿ ಈ ಮೊಕದ್ದಮೆಯನ್ನು ನಡೆಸುವುದಕ್ಕಾಗುವುದಿಲ್ಲ. ಇದನ್ನು ಮಿ. ಪಟೇಲರಿಗೆ ಕೊಡಿ. ನನಗೆ ಕೊಟ್ಟಿರುವ ಹಣವನ್ನು ವಾಪಸು ತೆಗೆದುಕೊಂಡುಹೋಗಿ." ಎಂದು ಹೇಳಿದೆನು. ಪಟೇಲರನ್ನು ೫೧ ರೂಪಾಯಿಗೆ ಗೊತ್ತುಮಾಡಿದುದಾಯಿತು. ಅವರಿಗೆ ಈ ಮೊಕದ್ದಮೆಯು ಮಕ್ಕಳಾಟವಾಗಿದ್ದಿತು.

ನಾನು ಅಲ್ಲಿಂದ ಒಡನೆಯೇ ತೆರಳಿದೆನು. ನನ್ನ ಕಕ್ಷಿಗಾರನು ಗೆದ್ದನೋ ಸೋತನೋ ನನಗೆ ಒಂದೂ ತಿಳಿಯಲಿಲ್ಲ. ನನಗೆ ಬಹಳ ನಾಚಿಕೆಯಾಯಿತು. ಸಾಕಾದಷ್ಟು ಧೈರ್ಯ ಬರುವವರೆಗೂ ಇನ್ನಾವ ಮೊಕದ್ದಮೆಯನ್ನೂ ತೆಗೆದುಕೊಳ್ಳುವುದಿಲ್ಲವೆಂದು ಮನಸ್ಸು ಮಾಡಿದೆನು. ವಾಸ್ತವಿಕವಾಗಿ ನಾನು ದಕ್ಷಿಣ ಆಫ್ರಿಕಕ್ಕೆ ಹೋಗುವವರೆಗೂ ಪುನಃ ಕೋರ್ಟಿನಲ್ಲಿ ಕಾಲಿಡಲಿಲ್ಲ. ಹೀಗೆ ನಿರ್ಧರಿಸಿದುದರಲ್ಲಿ ನನ್ನದೇನೂ

ಶೂರತನವಿರಲಿಲ್ಲ. ನನ್ನ ಸಿದ್ಧಾಂತವು ಅಭಾವವೈರಾಗ್ಯದಂತಿದ್ದಿತು. ಸುಮ್ಮನೇ ಕಳೆದುಕೊಳ್ಳುವುದಕ್ಕಾಗಿ ಯಾವ ಮೂರ್ಖನು ಮೊಕದ್ದಮೆಯನ್ನು ನನ್ನ ಬಳಿಗೆ ತರುವನು ?

ಆದರೆ ಮುಂಬಯಿಯಲ್ಲಿ ಇನ್ನೊಂದು ಮೊಕದ್ದಮೆಯು ನನ್ನ ಬಳಿಗೆ ಬರುವುದಾಗಿದ್ದಿತು. ಇದೇನೆಂದರೆ ಒಂದು ಅರ್ಜಿಯನ್ನು ಬರೆಯುವುದು. ಪೋರಬಂದರಿನಲ್ಲಿ ಒಬ್ಬ ಬಡ ಮುಸಲ್ಮಾನನ ಜಮೀನು ಮುಟ್ಟುಗೋಲಾಗಿಹೋಗಿದ್ದಿತು. ಅವನು ನನ್ನ ತಂದೆಯಂತಹ ಸಜ್ಜನರ ಮಗನು ಯೋಗ್ಯನಾಗಿಯೇ ಇರಬೇಕೆಂದು ನನ್ನ ಬಳಿಗೆ ಬಂದನು. ಇವನ ಪಕ್ಷದಲ್ಲಿ ಬಲವಿಲ್ಲವೆಂದು ನನಗೆ ತೋರಿತು. ಆದರೂ ನಾನು ಅರ್ಜಿಯನ್ನು ಬರೆದು ಕೊಡುವುದಕ್ಕೆ ಒಪ್ಪಿದೆನು. ಅದನ್ನು ಅಚ್ಚುಮಾಡುವ ಖರ್ಚನ್ನು ಅವನು ವಹಿಸಬೇಕೆಂದು ಗೊತ್ತಾಯಿತು. ಆ ಅರ್ಜಿಯನ್ನು ಬರೆದು ಅದನ್ನು ನಮ್ಮ ಮಿತ್ರವರ್ಗದ ಮುಂದೆ ಓದಿದೆನು. ಅದು ಸರಿಯಾಗಿದೆಯೆಂದು ಅವರು ಹೇಳಿದರು. ಅರ್ಜಿ ಬರೆಯುವ ಯೋಗ್ಯತೆಯು ನನ್ನಲ್ಲಿದೆಯೆಂಬ ಧೈರ್ಯವು ನನಗುಂಟಾಯಿತು. ಅಷ್ಟುಮಟ್ಟಿನ ಯೋಗ್ಯತೆಯಿರುವುದೂ ನಿಜವಾದ ಮಾತಾಗಿದ್ದಿತು. ಅರ್ಜಿಗಳನ್ನು ಹಣವಿಲ್ಲದೆ ಬರೆದುಕೊಟ್ಟರೆ ಬೇಕಾದಷ್ಟು ಕೆಲಸವು ಒದಗುತ್ತಿದ್ದಿತು. ಆದರೆ ಇದರಿಂದ ಹೊಟ್ಟೆ ತುಂಬುವುದು ಹೇಗೆ? ಆದುದರಿಂದ ಶಿಕ್ಷಕನಾಗಬಹುದೆಂದು ಯೋಚಿಸಿದೆನು. ನಾನು ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಅಭ್ಯಾಸಮಾಡಿದ್ದೆನು. ಯಾವ ಶಾಲೆಯಲ್ಲಾದರೂ ಮೆಟ್ರಿಕ್ಯುಲೇಷನ್ ತರಗತಿಯ ಹುಡುಗರಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸಬೇಕೆಂದರೆ ನನ್ನ ಮನವು ನಲಿಯುತ್ತಿದ್ದಿತು. ಇದರಿಂದ ಹೊಟ್ಟೆಯು ತಕ್ಕಮಟ್ಟಿಗೆ ತುಂಬಬಹುದು !

"ಒಬ್ಬ ಇಂಗ್ಲಿಷ್ ಭಾಷೆಯ ಶಿಕ್ಷಕನು ಬೇಕು. ದಿನಕ್ಕೆ ಒಂದು ತಾಸಿನ ಕೆಲಸ ಮಾತ್ರ. ಸಂಬಳ ೭೫ ರೂಪಾಯಿ." ಎಂಬದಾಗಿ ಒಂದು ಪ್ರಸಿದ್ಧವಾದ ಹೈಸ್ಕೂಲ್‌ನವರಿಂದ ವೃತ್ತಪತ್ರಗಳಲ್ಲಿ ಪ್ರಕಟಿಸಲ್ಪಟ್ಟ ಜಾಹಿರಾತನ್ನು ನೋಡಿದೆನು. ನಾನು ಈ ಕೆಲಸಕ್ಕೆ ಅರ್ಜಿಹಾಕಿದೆನು. ಶಾಲೆಯ ಮುಖ್ಯಾಧ್ಯಾಪಕರನ್ನು ನೋಡಬೇಕೆಂದು ಉತ್ತರ ಬಂದಿತು.

ನಾನು ಬಹಳ ಉತ್ಸಾಹದಿಂದ ಅಲ್ಲಿಗೆ ಹೋದೆನು. ಆದರೆ ನಾನು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿಲ್ಲವೆಂದು ಮುಖ್ಯೋಪಾಧ್ಯಾಯರಿಗೆ ತಿಳಿದೊಡನೆಯೇ ಅವರು ಕೆಲಸ ಕೊಡಲಾಗುವದಿಲ್ಲವೆಂದು ಪಶ್ಚಾತ್ತಾಪ ಪೂರ್ವಕವಾಗಿ ಹೇಳಿದರು.

"ನಾನು ಲಂಡನ್ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದೇನೆ. ಲ್ಯಾಟಿನ್ ನನ್ನ ಎರಡನೆಯ ಭಾಷೆಯಾಗಿದ್ದಿತು."

"ಅದೇನೋ ನಿಜ. ಆದರೆ ನಮಗೆ ಒಬ್ಬ ಗ್ರಾಜುಯೇಟ್ (ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವವರು) ಬೇಕು."

ಇದಕ್ಕೆ ಉಪಾಯವಿರಲಿಲ್ಲ. ನಿರಾಸೆಯಿಂದ ನಾನು ಖತಿಗೊಂಡೆನು. ನಮ್ಮಣ್ಣನೂ ಬಹು ಚಿಂತೆಗೀಡಾದನು. ಮುಂಬಯಿಯಲ್ಲಿ ಇದ್ದು ಕಾಲ ಕಳೆಯುವುದು ನಿರರ್ಥಕವೆಂದೂ ನಾನು ರಾಜಕೋಟೆಗೆ ಹೋಗಿ ನೆಲಸಬೇಕೆಂದೂ ನಾವಿಬ್ಬರೂ ನಿರ್ಧಾರಮಾಡಿದೆವು. ನಮ್ಮಣ್ಣನೂ ಸಣ್ಣ ವಕೀಲನಾಗಿದ್ದನು. ಆದುದರಿಂದ ಆತನು ನನಗೆ ಅರ್ಜಿ ಬರೆಯುವುದು ಮುಂತಾದ ಕೆಲಸವನ್ನು ಅಷ್ಟು ಇಷ್ಟು ಕೊಡುವುದಕ್ಕಾಗುತ್ತಿದ್ದಿತು. ಇದಲ್ಲದೆ ಆಗಲೇ ರಾಜಕೋಟೆಯಲ್ಲಿ ಸಂಸಾರವನ್ನು ಹೂಡಿದ್ದುದರಿಂದ ಮುಂಬಯಿಯ ಮನೆಯನ್ನು ಬಿಡುವುದೆಂದರೆ ಬಹಳ ವೆಚ್ಚವು ಉಳಿದಂತಾಗುತ್ತಿದ್ದಿತು. ಈ ಸೂಚನೆಯು ನನಗೆ ರುಚಿಸಿತು. ಆರು ತಿಂಗಳ ವಾಸವಾದನಂತರ ಈ ರೀತಿಯಾಗಿ ಮುಂಬಯಿಯ ಮನೆಯನ್ನು ಬಿಟ್ಟುದಾಯಿತು.

ನಾನು ಮುಂಬಯಿಯಲ್ಲಿರುವವರೆಗೂ ಪ್ರತಿನಿತ್ಯವೂ ಹೈಕೋರ್ಟಿಗೆ (ಶ್ರೇಷ್ಠ ನ್ಯಾಯಸ್ಥಾನ) ಹೋಗುತ್ತಿದ್ದೆನು. ಆದರೆ ನಾನು ಏನನ್ನೂ ಕಲಿತುಕೊಂಡೆನೆಂದು ಹೇಳಲಾರೆನು. ಕಲಿತುಕೊಳ್ಳುವಷ್ಟು ತಿಳುವಳಿಕೆ ನನಗಿರಲಿಲ್ಲ. ಅನೇಕಸಲ ಮೊಕದ್ದಮೆಗಳು ತಲೆಗೆ ಹತ್ತದೆ ನನಗೆ ನಿದ್ದೆ ಬರುತ್ತಿದ್ದಿತು. ನನ್ನ ಜೊತೆಗೆ ನಿದ್ದೆಮಾಡುವುದಕ್ಕೆ ಇತರ ಮಿತ್ರರೂ ಇದ್ದುದರಿಂದ ನನ್ನ ನಾಚಿಕೆಯೂ ಅವಮಾನವೂ ಹೆಚ್ಚಾಗಿ ತೋರುತ್ತಿರಲಿಲ್ಲ. ನಾಲ್ಕು ದಿವಸವಾದಮೇಲೆ ಹೈಕೋರ್ಟಿನಲ್ಲಿ ಕುಳಿತುಕೊಂಡಿರು

ವಾಗ ನಿದ್ದೆಮಾಡುವುದೂ ಒಂದು ಸೊಗಸೆಂದು ನಾನು ತಿಳಿದು ಕೊಂಡೆನು. ಈ ಕಾರಣದಿಂದ ಮೊದಲು ನನ್ನಲ್ಲಿದ್ದ ಸ್ವಲ್ಪ ಲಜ್ಜೆಯೂ ಮಾಯವಾಯಿತು.

ಈ ಕಾಲದಲ್ಲಿಯೂ ಕೂಡ ಮುಂಬಯಿಯಲ್ಲಿ ನನ್ನಂತೆಯೇ ಕೆಲಸವಿಲ್ಲದ ಬ್ಯಾರಿಸ್ಟರುಗಳಿದ್ದರೆ ಅವರಿಗೆ ಅಲ್ಲಿ ಜೀವನ ನಡೆಸುವ ವಿಷಯವಾಗಿ ಒಂದು ಸಣ್ಣ ಸೂತ್ರವನ್ನು ಸೂಚಿಸಲೆಳಸುತ್ತೇನೆ. ನನ್ನ ವಾಸಸ್ಥಳವು ಗಿರಿಗಾಂನಲ್ಲಿದ್ದರೂ ನಾನು ಗಾಡಿಯಲ್ಲಾಗಲೀ ಟ್ರಾಂ ನಲ್ಲಾಗಲೀ ಬರುತ್ತಿದ್ದುದು ಬಹಳ ಅಪೂರ್ವ. ಮನೆಯಿಂದ ಹೈಕೋರ್ಟಿಗೆ ನಡೆಯಬೇಕೆಂದು ನಿಯಮಮಾಡಿಕೊಂಡಿದ್ದೆನು. ಹೀಗೆ ಹೋಗುವು ದಕ್ಕೆ ಸಂಪೂರ್ಣವಾಗಿ ೪೫ ನಿಮಿಷ ಹಿಡಿಯುತ್ತಿದ್ದಿತು. ಹಿಂತಿರುಗಿ ಬರು ವಾಗಲಂತು ನಡೆದುಕೊಂಡೇ ಬರುತ್ತಿದ್ದೆನು. ಮಧ್ಯಾಹ್ನ ಬಹಳ ಬಿಸಿಲಿ ರುತ್ತಿದ್ದಿತು. ಆದರೆ ಇದನ್ನು ಸಹಿಸುವುದನ್ನು ಅಭ್ಯಾಸಮಾಡಿಕೊಂಡೆನು. ಹೀಗೆ ನಡೆಯುತ್ತಿದ್ದುದರಿಂದ ತಕ್ಕಮಟ್ಟಿಗೆ ಹಣವು ಉಳಿದುದಲ್ಲದೆ ನನ್ನ ಸ್ನೇಹಿತರನೇಕರು ಆಗಾಗ ಕಾಹಿಲೆ ಬೀಳುತ್ತಿದ್ದರೂ ನಾನು ಒಂದು ಸಲವಾದರೂ ಹಾಗೆ ನರಳಿದೆನೆಂದು ನನಗೆ ನೆನಪಿಲ್ಲ. ಹಣವನ್ನು ಸಂಪಾದಿಸುವುದಕ್ಕೆ ಪ್ರಾರಂಭಮಾಡಿದಮೇಲೆ ಕೂಡ ನಾನು ನನ್ನ ಕಚೇರಿಗೆ ನಡೆದುಕೊಂಡು ಹೋಗಿಬರುವ ಅಭ್ಯಾಸವನ್ನು ಬಿಡಲಿಲ್ಲ. ಇದರಿಂದ ಈಗಲೂ ಲಾಭವನ್ನು ಪಡೆಯುತ್ತಿದ್ದೇನೆ.



೪

# ಮೊದಲನೆಯ ಆಘಾತ

ಮುಂಬಯಿಯಲ್ಲಿ ನಿರಾಶನಾಗಿ ನಾನು ರಾಜಕೋಟೆಗೆ ಬಂದು ಬಿಟ್ಟೆನು. ಅಲ್ಲಿ ನಾನು ನನ್ನ ಸ್ವಂತ ಕಚೇರಿಯನ್ನು ಹೂಡಿದೆನು. ಕೆಲಸವೂ ತಕ್ಕ ಮಟ್ಟಿಗೆ ಸಿಕ್ಕುತ್ತಿದ್ದಿತು. ಅರ್ಜಿ ಮುಂತಾದುವುಗಳನ್ನು ಬರೆಯುವುದರಿಂದ ತಿಂಗಳಿಗೆ ಸರಾಸರಿ ೩೦೦ ರೂಪಾಯಿ ಬರುತ್ತಿದ್ದಿತು. ಹೀಗೆ ಕೆಲಸವು ದೊರಕುತ್ತಿದ್ದುದು ನನ್ನ ಕಾರ್ಯ ಕುಶಲತೆಗಿಂತ ಹೆಚ್ಚಾಗಿ ಇತರರಿಗೆ ನನ್ನ ಏಳಿಗೆಯಲ್ಲಿದ್ದ ಆಸಕ್ತಿಯಿಂದ. ನಮ್ಮಣ್ಣನ ಜೊತೆಗೆ ಪಾಲುಗಾರರಾಗಿ ಕೆಲಸ ಮಾಡುತ್ತಿದ್ದ ವಕೀಲರಿಗೆ ಹೆಚ್ಚಾಗಿಯೂ ತಪ್ಪದೆಯೂ ಮೊಕದ್ದಮೆಗಳು ಬರುತ್ತಿದ್ದವು. ಆತನ ಬಳಿಗೆ ಬಂದ ಅರ್ಜಿಗಳಲ್ಲಿ ಮುಖ್ಯವಾದವುಗಳನ್ನೆಲ್ಲಾ—ಅಥವಾ ಆತನಿಗೆ ಮುಖ್ಯವಾಗಿ ತೋರಿದವುಗಳನ್ನೆಲ್ಲಾ—ಆತನು ಯಾರೋ ಭಾರೀ ಬ್ಯಾರಿಸ್ಟರುಗಳಿಗೆ ಕಳುಹಿಸಿಕೊಡುತ್ತಿದ್ದನು. ಆತನು ಬಡ ಕಕ್ಷಿಗಾರರಿಗಾಗಿ ಬರೆಯಬೇಕಾದ ಅರ್ಜಿಗಳೆಲ್ಲಾ ನನ್ನ ಪಾಲಿಗೆ ಬೀಳುತ್ತಿದ್ದುವು.

ಮುಂಬಯಿಯಲ್ಲಿ ಕಮಿಷನ್ (ಮೊಕದ್ದಮೆಯನ್ನು ತಂದು ಕೊಡುವ ಮಧ್ಯಸ್ಥಗಾರರಿಗೆ ಕೊಡುವ ಹಣ) ಕೊಡುವುದಿಲ್ಲವೆಂದು ತಪ್ಪದೆ ಅನುಸರಿಸಿದ ನಿಯಮವನ್ನು ನಾನು ಇಲ್ಲಿ ನಡೆಸಲಿಲ್ಲವೆಂದು ಒಪ್ಪಿಕೊಳ್ಳಬೇಕು. ಎರಡು ಕಡೆಯ ಸ್ಥಿತಿಗೂ ವ್ಯತ್ಯಾಸವಿದೆಯೆಂದು ನನಗೆ ಹೇಳಿದರು. ಅದು ಹೇಗೆಂದರೆ ಮುಂಬಯಿಯಲ್ಲಿ ದಳ್ಳಾಳಿಗೆ ಕಮಿಷನ್ ಕೊಡಬೇಕು. ಮುಂಬಯಿಯಲ್ಲಿ ಹೇಗೋ ಹಾಗೆ ಇಲ್ಲಿಯೂ ಎಲ್ಲಾ ಬ್ಯಾರಿಸ್ಟರುಗಳೂ ಯಾವ ಅಪವಾದವೂ ಇಲ್ಲದೆ ತಮ್ಮ ರುಸುಮಿನಲ್ಲಿ ಸೇಕಡಾ ಇಷ್ಟರಂತೆ ಮೊಕದ್ದಮೆ ಕೊಡುವ ವಕೀಲರಿಗೆ ಕಮಿಷನ್ ಕೊಡುತ್ತಾರೆಂದು ತಿಳಿಸಿದರು. ನಮ್ಮಣ್ಣನು ಹೇಳಿದ ಈ ಸಮಾಧಾನಕ್ಕೆ ನಾನು ಯಾವ ಉತ್ತರವನ್ನೂ ಕೊಡುವಹಾಗಿರಲಿಲ್ಲ. "ನಾನೂ

ಇನ್ನೊಬ್ಬ ವಕೀಲರೂ ಒಟ್ಟಿಗೆ ಕೆಲಸ ಮಾಡುವುದು ನಿನಗೆ ಗೊತ್ತಿದೆ. ನಮ್ಮ ಹತ್ತಿರ ಬರುವ ಮೊಕದ್ದಮೆಗಳಲ್ಲಿ ನಿನಗೆ ಕೊಡುವುದಕ್ಕಾಗುವುದನ್ನೆಲ್ಲಾ ಕೊಡಬೇಕೆಂಬ ಇಚ್ಛೆಯು ನನಗಿರುತ್ತದೆ. ನೀನು ನನ್ನ ಜೊತೆಯ ವಕೀಲರಿಗೆ ಕಮಿಷನ್ ಕೊಡದೆ ಹೋದರೆ ನನ್ನನ್ನು ಪೇಚಾಟಕ್ಕೆ ಗುರಿಮಾಡುತ್ತೀಯೆ. ಇದಲ್ಲದೆ ನಾವಿಬ್ಬರೂ ಒಟ್ಟಿಗಿರುವುದರಿಂದ ನೀನು ಕೊಟ್ಟ ಕಮಿಷನಿನಲ್ಲಿ ಒಂದು ಭಾಗವು ನನಗೆ ಬಂದೇ ಬರುತ್ತದೆ. ನನ್ನ ಜೊತೆಯ ವಕೀಲರಿಗೆ ಇದರಿಂದ ಹೆಚ್ಚು ಲಾಭ ಬರುವುದೇನು ? ಆತನು ಈ ಮೊಕದ್ದಮೆಗಳನ್ನು ಇನ್ನಾವ ಬ್ಯಾರಿಸ್ಟರಿಗಾದರೂ ಕೊಟ್ಟರೆ ಆತನ ಲಾಭ ಆ ಬ್ಯಾರಿಸ್ಟರಿಂದ ಆತನಿಗೆ ಬರುವುದಿಲ್ಲವೇನು ?'' ಎಂದು ಹೇಳಿದನು. ಈ ವಾದಕ್ಕೆ ನಾನು ಮರುಳಾದೆನು. ನಾನು ಬ್ಯಾರಿಸ್ಟರಾಗಿ ಕೆಲಸ ಮಾಡಬೇಕಾದರೆ ಕಮಿಷನ್ ಕೊಡುವುದಿಲ್ಲವೆಂಬ ನಿಯಮವನ್ನು ಇಂತಹ ಸಂದರ್ಭಗಳಲ್ಲಿ ಬಿಟ್ಟು ಬಿಡಬೇಕೆಂದು ತೋರಿತು. ಈ ರೀತಿಯಾಗಿ ನನ್ನ ಮನಸ್ಸನ್ನು ಸಮಾಧಾನಪಡಿಸಿದೆನು. ಅಥವಾ ಸ್ಪಷ್ಟ ಶಬ್ದಗಳಲ್ಲಿ ಹೇಳಬೇಕೆಂದರೆ ಈ ರೀತಿಯಾಗಿ ನನ್ನ ಕಣ್ಣಿಗೆ ನಾನೇ ಮಣ್ಣೆರಚಿಕೊಂಡೆನು. ಆದರೆ ಈ ಮೊಕದ್ದಮೆಗಳನ್ನುಳಿದು ಇನ್ನು ಯಾವಾಗಲೂ ನಾನು ಕಮಿಷನ್ ಕೊಟ್ಟೆನೆಂದು ನನ್ನ ಸ್ಮರಣೆಯಲ್ಲಿಲ್ಲ.

ಈ ಪ್ರಕಾರವಾಗಿ ಸಾಕಾದಷ್ಟು ಹಣವನ್ನು ದುಡಿಯುತ್ತಿದ್ದೆನು. ಆದರೆ ಈ ಸಮಯದಲ್ಲಿಯೇ ನಾನು ನನ್ನ ಮೊದಲನೆಯ ಆಘಾತವನ್ನು ಅನುಭವಿಸಿದೆನು. ಬ್ರಿಟಿಷ್ ಅಧಿಕಾರಿಗಳು ಹೇಗೆ ನಡೆಯುವರೆಂಬುದನ್ನು ಇದುವರೆಗೆ ಕಿವಿಯಲ್ಲಿ ಮಾತ್ರ ಕೇಳಿದ್ದೆನು. ಆದರೆ ಕಣ್ಣಿಂದ ನೋಡುವ ಸಂದರ್ಭವು ಇದುವರೆಗೂ ಒದಗಿರಲಿಲ್ಲ.

ನಮ್ಮಣ್ಣನು ಪೋರಬಂದರದ ಹಿಂದಿನ ರಾಣಾಸಾಹೇಬರು ಗದ್ದಿಗೆಯನ್ನೇರುವುದಕ್ಕೆ ಮೊದಲು ಅವರ ಮಂತ್ರಿಯಾಗಿಯೂ ಸಲಹೆಗಾರನಾಗಿಯೂ ಇದ್ದನು. ಈ ಕೆಲಸದಲ್ಲಿರುವಾಗ ರಾಣಾಸಾಹೇಬರಿಗೆ ತಪ್ಪು ಸಲಹೆಗಳನ್ನು ಕೊಟ್ಟನೆಂಬ ಅಪವಾದವು ಈ ಸಮಯದಲ್ಲಿ ನಮ್ಮಣ್ಣನ ಮೇಲೆ ಕುಳಿತಿದ್ದಿತು. ಇದು ಪೊಲಿಟಿಕಲ್ ಏಜಂಟಿನವರೆಗೂ ಹೋಗಿ:

ಆತನಿಗೆ ನಮ್ಮಣ್ಣನ ವಿಚಾರದಲ್ಲಿ ಕೆಟ್ಟ ಅಭಿಪ್ರಾಯವುಂಟಾಗಿದ್ದಿತು. ನನಗೆ ಸೀಮೆಯಲ್ಲಿ ಈತನ ಪರಿಚಯವುಂಟಾಗಿದ್ದಿತು. ಅಲ್ಲಿ ಈತನು ನನ್ನೊಡನೆ ತಕ್ಕಮಟ್ಟಿಗೆ ಪ್ರೀತಿಯಿಂದ ವರ್ತಿಸುತ್ತಿದ್ದನೆಂದು ಹೇಳ ಬಹುದು. ಈ ಗುರುತಿನ ಆಧಾರದ ಮೇಲೆ ನಾನು ಈತನಿಗೆ ಒಂದೆರಡು ಮಾತು ಹೇಳಿ ನಮ್ಮಣ್ಣನ ವಿಷಯದಲ್ಲಿ ಈತನಿಗಿದ್ದ ಕೆಟ್ಟ ಅಭಿಪ್ರಾಯ ವನ್ನು ದೂರ ಮಾಡಬೇಕೆಂದು ನಮ್ಮಣ್ಣನು ಯೋಚನೆ ಮಾಡಿದನು. ನನ್ನ ಮನಸ್ಸಿಗೆ ಇದು ಸ್ವಲ್ಪವೂ ಸರಿಬೀಳಲಿಲ್ಲ. ವಿಲಾಯತಿಯಲ್ಲುಂ ಟಾದ ಸಕೃತ್‌ಪರಿಚಯದಿಂದ ಇಲ್ಲಿ ಲಾಭವನ್ನು ಪಡೆಯಲು ಯತ್ನಿಸ ಕೂಡದೆಂದು ನನಗೆ ತೋರಿತು. ನಮ್ಮಣ್ಣನು ನಿಜವಾಗಿಯೂ ದೋಷಿ ಯಾಗಿದ್ದರೆ ಈ ಸಿಫಾರಸಿನಿಂದ ಪ್ರಯೋಜನವೇನು? ಹಾಗೇನೂ ತಪ್ಪು ಮಾಡಿಲ್ಲದಿದ್ದರೆ ನಿಯಮಪೂರ್ವಕವಾಗಿ ಅರ್ಜಿಯನ್ನು ಹಾಕಬೇಕು; ತಾನು ನಿರ್ದೋಷಿಯೆಂದು ತನ್ನಲ್ಲಿ ವಿಶ್ವಾಸವಿಟ್ಟು ನಿರ್ಭಯನಾಗಿ ಪರಿ ಣಾಮವನ್ನಿದಿರಿಸಬೇಕು. ಇದೆಲ್ಲಾ ನಮ್ಮಣ್ಣನಿಗೆ ಸರಿತೋರಲಿಲ್ಲ. "ನಿನಗೆ ಕಾಠ್ಯವಾಡದ ವಿಷಯ ಗೊತ್ತಿಲ್ಲ. ಪ್ರಪಂಚದ ಜ್ಞಾನವು ನಿನಗೆ ಇನ್ನೂ ಬರಬೇಕು. ಇಲ್ಲಿ ಏನಾದರೂ ಆಗಬೇಕಾದರೆ ಸಿಫಾರಸಿ ನಿಂದಲೇ. ನಿನಗೆ ಪರಿಚಿತನಾದ ಅಧಿಕಾರಿಗೆ ನನ್ನ ವಿಷಯ ವಾಗಿ ಒಂದೆರಡು ಒಳ್ಳೆಯ ಮಾತನ್ನು ಹೇಳುವ ಸಮಯವೊದಗಿರು ವಾಗ ನೀನು ನನ್ನ ತಮ್ಮನಾಗಿಯೂ ಹಿಂದು ಮುಂದು ನೋಡು ವುದು ಧರ್ಮವಲ್ಲ." ಎಂದು ಹೇಳಿದನು.

ನಮ್ಮಣ್ಣನಮಾತನ್ನು ನಿರಾಕರಿಸಲಾಗಲಿಲ್ಲ. ಆದುದರಿಂದ ನಾನು ನನ್ನ ಇಚ್ಛೆಗೆ ವಿರುದ್ಧವಾಗಿ ಪೊಲಿಟಿಕಲ್ ಏಜಂಟನನ್ನು ನೋಡಲು ಹೋದೆನು. ಈತನ ಬಳಿಗೆ ಹೋಗಲು ನನಗೆ ಯಾವ ಅಧಿಕಾರವೂ ಇಲ್ಲವೆಂದೂ ಹಾಗೆ ಹೋಗುವುದರಿಂದ ನನ್ನ ಮಾನಕ್ಕೆ ಕುಂದು ತಂದು ಕೊಳ್ಳುತ್ತಿದ್ದೆನೆಂದೂ ಚೆನ್ನಾಗಿ ಗೊತ್ತಿದ್ದಿತು. ಆದರೂ ಆತನನ್ನು ನೋಡಲು ಸಮಯ ಬೇಡಿದೆನು. ವೇಳೆಯು ಗೊತ್ತಾಗಿ ನಾನು ಆತನನ್ನುನೋಡಲು ಹೋದೆನು. ನಮ್ಮ ಹಳೆಯ ಪರಿಚಯವನ್ನು ಆತನಿಗೆ ಜ್ಞಾಪಿಸಿದೆನು. ಆದರೆ ವಿಲಾಯತಿಗೂ ಕಾಠ್ಯವಾಡಕ್ಕೂ

ವ್ಯತ್ಯಾಸವಿದೆಯೆಂದು ತಕ್ಷಣವೇ ಗೊತ್ತಾಯಿತು. ಅಧಿಕಾರದ ಆಸನದಲ್ಲಿ ಕುಳಿತಿರುವ ವ್ಯಕ್ತಿಗೂ ರಜದಮೇಲಿರುವ ಅಧಿಕಾರಿಗೂ ಭೇದವಿದೆಯೆಂದು ತಿಳಿಯಿತು. ಆತನು ಹಿಂದಿನ ಪರಿಚಯವು ನೆನಪಿದೆ ಯೆಂದು ಸೂಚಿಸಿದನು. ಆದರೆ ಈ ಸ್ಮರಣೆಯಿಂದ ಆತನ ದರ್ಪವು ಹೆಚ್ಚಿದಂತೆ ತೋರಿತು. ಅದನ್ನು ನೋಡಿದರೆ "ಆ ಪರಿಚಯದಿಂದ ಈಗ ಲಾಭಹೊಂದುವದಕ್ಕೆ ನೀನು ಬಂದಿಲ್ಲ ತಾನೆ?" ಎಂದು ಆತನು ಹೇಳುವಂತೆ ತೋರಿತು. ಇದೇ ಅರ್ಥವು ಆತನ ಮುಖಮುದ್ರೆಯಲ್ಲಿ ಚಿತ್ರಿತವಾಗಿರುವಂತೆ ಕಂಡಿತು. ಆದರೂ ನಾನು ನನ್ನ ಕತೆಯನ್ನು ಮೊದಲು ಮಾಡಿದೆನು. ಸಾಹೇಬನು ತಾಳ್ಮೆಗೆಟ್ಟು "ನಿಮ್ಮಣ್ಣನು ಪಿತೂರಿಗಾರ. ಇನ್ನೇನೂ ನಿನ್ನಿಂದ ಕೇಳಲು ನನಗೆ ಇಷ್ಟವಿಲ್ಲ. ನನಗೆ ಸಮಯವಿಲ್ಲ. ನಿಮ್ಮಣ್ಣನು ಏನಾದರೂ ಹೇಳಬೇಕಾದರೆ ಸರಿಯಾದ ರೀತಿಯಲ್ಲಿ ಅರ್ಜಿಹಾಕಲಿ" ಎಂದು ಹೇಳಿದನು. ಈ ಉತ್ತರವೇ ಸಾಕಾಗಿದ್ದಿತು. ಪ್ರಾಯಶಃ ಅದು ನ್ಯಾಯವಾದುದೇ ಆಗಿದ್ದಿತು. ಆದರೆ ಸ್ವಾರ್ಥಿಗೆ ಕಣ್ಣಿರುವುದಿಲ್ಲ. ನಾನು ನನ್ನ ಕತೆಯನ್ನು ಹೇಳುತ್ತಾ ಹೋದೆನು. ಸಾಹೇಬನು ಎದ್ದುನಿಂತು "ನೀನು ಈಗ ಹೊರಡಬೇಕು." ಎಂದನು.

"ನನ್ನ ಮಾತನ್ನು ಪೂರ್ತಿ ಕೇಳಿರಿ" ಎಂದೆನು ನಾನು. ಇದರಿಂದ ಆತನ ಕೋಪವು ಹೆಚ್ಚಿತು. ಆಳನ್ನು ಕೂಗಿ, "ಈತನನ್ನು ಹೊರಕ್ಕೆ ಕರೆದು ಕೊಂಡು ಹೋಗು." ಎಂದು ಹೇಳಿದನು. ನಾನು ಇನ್ನೂ ಅನಿಶ್ಚಿತನಾಗಿ ನಿಂತಿದ್ದೆನು. ಅಷ್ಟರಲ್ಲಿಯೇ ಆಳುಬಂದು ನನ್ನ ಭುಜದಮೇಲೆ ಕೈ ಹಾಕಿ ನನ್ನನ್ನು ಕೋಣೆಯ ಹೊರಕ್ಕೆ ನೂಕಿದನು.

ಸಾಹೇಬನೂ ಹೊರಟುಹೋದನು, ಆಳೂ ಹೊರಟುಹೋದನು. ದುಃಖದಿಂದಲೂ ರೋಷದಿಂದಲೂ ಕುದಿಯುತ್ತಾ ನಾನು ಹಿಂತಿರು ಗಿದೆನು. ಆಗಲೆ ಒಂದು ಕಾಗದವನ್ನು ಬರೆದು ಕಳುಹಿಸಿದೆನು. ಅದರ ತಾತ್ಪ ರ್ಯವೇನಂದರೆ—"ತಾವು ನನಗೆ ಅಪಮಾನಮಾಡಿ ತಮ್ಮ ಆಳಿನ ಮೂಲಕ ನನ್ನ ಶರೀರದ ಆಕ್ರಮಣ ಮಾಡಿದಿರಿ. ತಾವು ನನ್ನ ಕ್ಷಮಾಪಣೆಯನ್ನು ಬೇಡದಿದ್ದರೆ ನಾನು ತಮ್ಮ ಮೇಲೆ ಕಟ್ಲೆ ನಡೆಸಬೇಕಾಗುತ್ತದೆ." ಸಾಹೇ

ಬನ ಸಮಾರನು ಸ್ವಲ್ಪಹೊತ್ತಿನಲ್ಲಿಯೇ ಉತ್ತರವನ್ನು ತಂದನು. ಅದರ ಸಾರಾಂಶವು ಈ ರೀತಿಯಾಗಿದ್ದಿತು :—

''ತಾವು ನನ್ನಲ್ಲಿ ಅಸಭ್ಯರೀತಿಯಿಂದ ವರ್ತಿಸಿದಿರಿ. ತಮಗೆ ಹೋಗಿರೆಂದು ಹೇಳಿದರೂ ತಾವು ಹೋಗಲಿಲ್ಲ. ಆದುದರಿಂದ ತಮಗೆ ಬಾಗಿಲನ್ನು ತೋರಿಸೆಂದು ಜವಾನನಿಗೆ ಹೇಳಬೇಕಾಯಿತು. ಅವನು ತಮಗೆ ಹೋಗಲು ಹೇಳಿದಮೇಲೆ ಕೂಡ ತಾವು ಹೋಗಲಿಲ್ಲ. ಆದುದರಿಂದ ಅವನು ತಮ್ಮನ್ನು ಬಾಗಿಲಿನಿಂದ ಹೊರಗೆ ಹಾಕುವುದಕ್ಕೆ ಸಾಕಾಗುವಷ್ಟು ಬಲವನ್ನು ಮಾತ್ರ ಉಪಯೋಗಿಸಬೇಕಾಯಿತು. ತಮಗೆ ಇಷ್ಟತೋರಿದಂತೆ ವರ್ತಿಸಲು ತಾವು ಸ್ವತಂತ್ರರಿದ್ದೀರಿ.''

ಈ ಉತ್ತರವನ್ನು ಕಿಸೆಯಲ್ಲಿ ಇಟ್ಟುಕೊಂಡು ಜೋಲು ಮುಖ ಹಾಕಿಕೊಂಡು ಮನೆಗೆ ಬಂದೆನು. ನಡೆದುದೆಲ್ಲವನ್ನೂ ನಮ್ಮಣ್ಣನಿಗೆ ತಿಳಿಸಿದೆನು. ಆತನಿಗೆ ಬಹಳ ದುಃಖವಾಯಿತು. ಆದರೆ ಆತನು ನನ್ನನ್ನು ಸಮಾಧಾನಪಡಿಸುವದೆಂತು ? ತನ್ನ ವಕೀಲ ಮಿತ್ರರಿಗೆ ಕೂಡ ಈ ಕತೆಯನ್ನು ಹೇಳಿದನು. ಏಕೆಂದರೆ ಸಾಹೇಬನಮೇಲೆ ಮೊಕದ್ದಮೆಯನ್ನು ಹೇಗೆ ದಾಖಲೆ ಮಾಡಬೇಕೆನ್ನುವುದು ನನಗೆ ತಿಳಿದಿರಲಿಲ್ಲ. ಈ ಸಮಯಕ್ಕೆ ಸರಿಯಾಗಿ ಯಾವುದೋ ಒಂದು ಮೊಕದ್ದಮೆಗೋಸ್ಕರ ಸರ್ ಫಿರೋಜ್‌ಷಹಾ ಮೆಹತಾರವರು ರಾಜಕೋಟೆಗೆ ಬಂದಿದ್ದರು. ಆದರೆ ನನ್ನಂತಹ ಹೊಸ ಬ್ಯಾರಿಸ್ಟರು ಅವರನ್ನು ನೋಡುವುದು ಹೇಗೆ ? ಆದುದರಿಂದ ಅವರನ್ನು ಕರೆಸಿದ ವಕೀಲರ ಮೂಲಕ ಇದಕ್ಕೆ ಸಂಬಂಧಪಟ್ಟ ಕಾಗದಪತ್ರಗಳನ್ನೆಲ್ಲಾ ಅವರಿಗೆ ಕಳುಹಿಸಿ ಅವರ ಸಲಹೆಯನ್ನು ಬೇಡಿದೆನು. ''ಈ ರೀತಿಯಾದ ಅನುಭವವು ಅನೇಕ ವಕೀಲರಿಗೂ ಬ್ಯಾರಿಸ್ಟರಿಗೂ ಉಂಟಾಗಿದೆ ಎಂದು ಗಾಂಧಿಗೆ ತಿಳಿಸಿ. ಆತನು ಹೊಸದಾಗಿ ಸೀಮೆಯಿಂದ ಬಂದಿದ್ದಾನೆ. ಇದರ ಜೊತೆಗೆ ಆತನಿಗೆ ಬಿಸಿನೆತ್ತರು ಬೇರೆ. ಬ್ರಿಟಿಷ್ ಅಧಿಕಾರಿಗಳ ವಿಷಯ ಆತನಿಗೆ ಇನ್ನೂ ತಿಳಿದಿಲ್ಲ. ನಾಲ್ಕುಕಾಸು ಸಂಪಾದಿಸಿಕೊಂಡು ಸುಖವಾಗಿರಬೇಕೆನ್ನುವ ಆಸೆ ಆತನಿಗಿದ್ದರೆ ಆ ಚೀಟಿಯನ್ನು ಹರಿದುಹಾಕಿ ತನ್ನ ಅಪಮಾನವನ್ನು

ಮರೆತುಬಿಡಬೇಕು. ಕಟ್ಟಳೆ ನಡೆಸುವುದರಿಂದ ಇನ್ನೂ ಕೇಡುಂಟಾಗಬಹುದೇ ವಿನಾ ಆತನಿಗೆ ಯಾವ ಲಾಭವೂ ಉಂಟಾಗುವಂತಿಲ್ಲ. ಆತನಿಗೆ ಇನ್ನೂ ಜೀವನದ ಅನುಭವ ಸಂಪಾದಿಸಬೇಕೆಂದು ಹೇಳಿ.'' ಎಂದರು ಅವರು.

ಈ ಬುದ್ಧಿವಾದವು ನನಗೆ ಆಗ ಏಷದಷ್ಟು ಕಹಿಯಾಗಿ ತೋರಿದರೂ ಅದನ್ನು ನುಂಗುವುದನ್ನು ಬಿಟ್ಟು ಬೇರೆ ದಾರಿಯಿರಲಿಲ್ಲ. ನಾನು ಈ ಅಪಮಾನವನ್ನೇನೋ ಸಹಿಸಿದೆನು. ಆದರೆ ಇದರಿಂದ ಉಪಯೋಗವನ್ನೂ ಹೊಂದಿದೆನು. ''ನಾನು ಇನ್ನೆಂದಿಗೂ ನನ್ನನ್ನು ಇಂತಹ ಸ್ಥಿತಿಗೆ ತಂದುಕೊಳ್ಳುವುದಿಲ್ಲ. ಇನ್ನೆಂದಿಗೂ ಈ ಪ್ರಕಾರವಾಗಿ ಸ್ನೇಹದಿಂದ ಲಾಭ ಹೊಂದಲು ಯತ್ನಿಸುವುದಿಲ್ಲ.'' ಎಂದು ನನ್ನಲ್ಲಿ ನಾನೇ ಹೇಳಿಕೊಂಡೆನು. ಈ ನಿಯಮಕ್ಕೆ ಇದುವರೆಗೂ ನಾನು ಭಂಗ ತಂದಿಲ್ಲ. ಈ ಏಟಿನಿಂ ನನ್ನ ಜೀವನದ ಮಾರ್ಗವು ಬೇರೆಯಾಯಿತು.

೫

# ದಕ್ಷಿಣ ಆಫ್ರಿಕಕ್ಕೆ ಹೋಗಲು ಸಿದ್ಧನಾದುದು

ಆ ಅಧಿಕಾರಿಯ ಬಳಿಗೆ ನಾನು ಹೋದುದು ತಪ್ಪೇ ಸರಿ. ಆದರೆ ಆತನ ಮುಂಗೋಪ, ಸಿಟ್ಟು, ಗರ್ವ ಇವುಗಳಿಂದ ಕೂಡಿದ ನಡತೆಯ ಮುಂದೆ ನನ್ನ ದೋಷವು ಅಲ್ಪ ಪರಿಮಾಣವುಳ್ಳುದಾಗಿದ್ದಿತು; ನನ್ನನ್ನು ಹೊರಕ್ಕೆ ತಳ್ಳಿಸುವಷ್ಟು ದೊಡ್ಡದಾಗಿರಲಿಲ್ಲ. ನಾನು ಐದು ನಿಮಿಷಕ್ಕಿಂತ ಹೆಚ್ಚಾಗಿ ಆತನ ಕಾಲವನ್ನು ವಿನಿಯೋಗಿಸಿರಲಾರೆನು. ಆದರೂ ನಾನು ಮಾತನಾಡುವದೇ ಆತನಿಗೆ ಸಹನಾತೀತವಾಯಿತು. ಆತನು ಸಭ್ಯ ರೀತಿಯಿಂದ ನನಗೆ ಹೋಗಿರೆಂದು ಹೇಳಬಹುದಾಗಿದ್ದಿತು. ಆದರೆ ಆತನಿಗೆ ಅಧಿಕಾರ ಮದವು ಮಿತಿಮೀರಿ ಏರಿದ್ದಿತು. ಆತನಲ್ಲಿ ತಾಳ್ಮೆಯ ಹೆಸರೇ ಇರಲಿಲ್ಲವೆಂದು ನನಗೆ ಆಮೇಲೆ ತಿಳಿದುಬಂದಿತು. ತನ್ನ ಬಳಿಗೆ ಬಂದವರನ್ನು ಅಪಮಾನಪಡಿಸುವುದು ಈತನಿಗೆ ಸಾಧಾರಣವಾದ ವಿಷಯವಾಗಿದ್ದಿತು. ಸ್ವಲ್ಪ ಹೆಚ್ಚು ಕಡಿಮೆಯಾದರೂ ಈತನು ರೇಗಿ ಬಿಡುತ್ತಿದ್ದನು.

ಸ್ವಾಭಾವಿಕವಾಗಿ ನನ್ನ ಕೆಲಸದ ಹೆಚ್ಚು ಭಾಗವು ಆತನ ಕೋರ್ಟಿನಲ್ಲಿಯೇ ಇರುತ್ತಿದ್ದಿತು. ಆತನನ್ನು ಸಮಾಧಾನಪಡಿಸುವುದು ನನ್ನ ಕೈಲಾಗುವ ಮಾತಾಗಿರಲಿಲ್ಲ. ಆತನು ಒಲಿಯುವಂತೆ ಅಂಗಲಾಚಲು ನನಗೆ ಇಷ್ಟವಿರಲಿಲ್ಲ. ಅಷ್ಟೇಕೆ, ಆತನಮೇಲೆ ಕಟ್ಟಳೆ ನಡೆಸುವೆನೆಂದು ಹೆದರಿಸಿ ಸುಮ್ಮನೆ ಕುಳಿತಿರುವುದು ನನಗೆ ಸರಿಬೀಳಲಿಲ್ಲ.

ಈಮಧ್ಯೆ ಅಲ್ಲಿಯ ರಾಜಕೀಯ ಪ್ರಪಂಚದ ಚಾಲಚಲನಗಳ ಅನುಭವವೂ ಕೂಡ ನನಗೆ ತಕ್ಕಮಟ್ಟಿಗೆ ಉಂಟಾಗುತ್ತಾ ಬಂದಿತು. ಕಾಥ್ಯವಾಡವು ಬಹಳಮಟ್ಟಿಗೆ ಪುಟ್ಟ ಪುಟ್ಟ ರಾಜ್ಯಗಳಿಂದ ಕೂಡಿದ ಪ್ರಾಂತ್ಯವಾದುದರಿಂದ ಅಲ್ಲಿ ಸ್ವಾಭಾವಿಕವಾಗಿ ರಾಜನೀತಿಕುಶಲರ ತಂಡವಿದ್ದೇ ಇರಬೇಕು. ಸಂಸ್ಥಾನಗಳೊಳಗೆ ತಮ್ಮ ತಮ್ಮಲ್ಲಿ ಪಿತೂರಿ, ಅಧಿಕಾರವನ್ನು ಪಡೆಯು

ವುದಕ್ಕಾಗಿ ನೌಕರರ ಪಿತೂರಿ, ಇವು ಆಗ ಸಾಧಾರಣವಾಗಿದ್ದುವು. ರಾಜರು ಸಿಪಿ ಮಾತಿನ ಚಾಡಿಗಾರರಿಗೆ ಕಿವಿಗೊಟ್ಟು ಪರಾಧೀನರಾಗಿದ್ದರು. ಸಾಹೇಬನ ಆಳನ್ನು ಕೂಡ ತುಷ್ಟಿಪಡಿಸಬೇಕಾಗುತ್ತಿದ್ದಿತು. ಸಾಹೇಬನ ಸಿರಸ್ತೆದಾರನು ಸಾಹೇಬನಿಗಿಂತ ಒಂದು ಕೈ ಮೇಲಾಗಿದ್ದನು. ಏಕೆಂದರೆ, ಅವನೇ ಸಾಹೇಬನ ಕಣ್ಣು, ಅವನೇ ಸಾಹೇಬನ ಕಿವಿ. ಸಾಹೇಬನ ಮಾತೆಲ್ಲಾ ಅವನ ಮೂಲಕವೇ. ಅವನ ಇಚ್ಛೆಯೇ ಕಾನೂನು. ಅವನ ಪರಮಾನವು ಸಾಹೇಬನ ಪರಮಾನಕ್ಕಿಂತಲೂ ಅಧಿಕವೆಂದೆಣಿಸಲ್ಪಡುತ್ತಿದ್ದಿತು. ಇದರಲ್ಲಿ ಅತಿಶಯೋಕ್ತಿ ಇರಬಹುದು. ಆದರೆ ಆತನ ಸಂಬಳಕ್ಕಿಂತ ವೆಚ್ಚವು ಹೆಚ್ಚಾಗಿರುತ್ತಿದ್ದಿತೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಈ ವಾತಾವರಣವು ನನಗೆ ವಿಷಮಯವಾಗಿ ತೋರಿತು. ಇದರ ಸೋಂಕನ್ನು ತಪ್ಪಿಸಿಕೊಂಡಿರುವುದು ಹೇಗೆ ಎನ್ನುವದೇ ಸದಾ ನನ್ನ ಯೋಚನೆಯಾಗಿದ್ದಿತು.

ಇದರಿಂದ ನಾನು ಕೇವಲ ಖಿನ್ನನಾದೆನು. ಇದನ್ನು ನಮ್ಮಣ್ಣನು ನೋಡಿದನು. ಎಲ್ಲಾದರೂ ಒಂದು ಕಡ ನೌಕರಿಯು ದೊರೆತು ಅದಕ್ಕೆ ಸೇರಿದರೆ ಈ ಪಿತೂರಿಯ ಪ್ರಪಂಚದಿಂದ ನನಗೆ ಬಿಡುಗಡೆಯಾದೀತೆಂದು ನಮ್ಮಿಬ್ಬರಿಗೂ ತೋರಿತು. ಆದರೆ ಖಟಪಟಿಯಿಲ್ಲದೆ ದಿವಾನಪದವಿಯಾಗಲಿ ನ್ಯಾಯಾಧೀಶಪದವಿಯಾಗಲಿ ಸಿಕ್ಕುವುದು ಹೇಗೆ? ಸಾಹೇಬನೊಡನೆ ಮಾಡಿದ ಜಗಳದಿಂದ ನನ್ನ ವಕೀಲಿ ಕೆಲಸಕ್ಕೆ ಹಾನಿಯುಂಟಾಗುತ್ತಿದ್ದಿತು.

ಆಗ ಪೋರಬಂದರದಲ್ಲಿ 'ಅಡ್ಮಿನಿಸ್ಟ್ರೇಷನ್' ನಡೆಯುತ್ತಿದ್ದಿತು. [ಪೋರಬಂದರ ಸಂಸ್ಥಾನವು ಬ್ರಿಟಿಷ್ ಸರಕಾರದಿಂದ ನಿಯಮಿತನಾದ ಅಧಿಕಾರಿಯ ಆಡಳಿತದಲ್ಲಿದ್ದಿತು.] ಅಲ್ಲಿಯ ರಾಣಾ ಸಾಹೇಬರಿಗೆ ಹೆಚ್ಚು ಅಧಿಕಾರವನ್ನು ಕೊಡಿಸಲು ಪ್ರಯತ್ನಪಡುವ ಕೆಲಸವು ನನ್ನ ಪಾಲಿಗೆ ಬಿದ್ದಿತು. ಮೇರ [ಅಲ್ಲಿನ ರೈತರ ಹೆಸರು] ಜನರಿಂದ ಹೆಚ್ಚು ಕಂದಾಯವನ್ನು ವಸೂಲುಮಾಡುತ್ತಿದ್ದರು. ಈ ವಿಷಯವಾಗಿಯೂ ನಾನು ಅಡ್ಮಿನಿಸ್ಟ್ರೇಟರನ್ನು [ಬ್ರಿಟಿಷ್ ಸರ್ಕಾರದಿಂದ ನಿಯಮಿತನಾದ ಅಧಿಕಾರಿ]

ನೋಡಬೇಕಾಗಿದ್ದಿತು. ಈ ಅಧಿಕಾರಿಯು ದೇಶೀಯನಾದರೂ ದರ್ಪದಲ್ಲಿ ಸಾಹೇಬನಿಗಿಂತ ಒಂದು ಕೈ ಏರಿಸಿದವನೆಂದು ತೋರಿತು. ಆತನು ತನ್ನ ಕೆಲಸದಲ್ಲಿ ಗಟ್ಟಿಗನಾಗಿದ್ದನು. ಆದರೆ ಆತನ ಕಾರ್ಯಕುಶಲತೆಯಿಂದ ರೈತರಿಗೆ ಯಾವ ಲಾಭವೂ ಉಂಟಾದಂತೆ ನನಗೆ ತೋರಲಿಲ್ಲ. ರಾಣಾ ಸಾಹೇಬರಿಗೆ ಸ್ವಲ್ಪ ಹೆಚ್ಚು ಅಧಿಕಾರವನ್ನು ಕೊಡಿಸುವುದರಲ್ಲಿಯೇನೋ ನನ್ನ ಪ್ರಯತ್ನವು ಸಫಲವಾಯಿತು. ಆದರೆ ನೇರರ ಹೊರೆಯು ಕಡಿಮೆಯಾಗಲಿಲ್ಲ. ಅವರ ವಿಚಾರವನ್ನು ಸರಿಯಾಗಿ ಪರಿಶೋಧಿಸಿದಂತೆ ಕೂಡ ನನಗೆ ಕಾಣಲಿಲ್ಲ.

ಅಂತೂ ಈ ವಿಷಯದಲ್ಲಿ ಕೂಡ ನನ್ನ ಶ್ರಮಕ್ಕೆ ತಕ್ಕಫಲವುಂಟಾಗಲಿಲ್ಲ. ನನ್ನ ಕಕ್ಷಿಗಾರರಿಗೆ ನ್ಯಾಯವು ದೊರಕಲಿಲ್ಲವೆಂದು ತೋರಿತು. ಆದರೆ ಅವರಿಗೆ ನ್ಯಾಯವನ್ನು ದೊರಕಿಸಲು ನನ್ನಲ್ಲಿ ಯಾವ ಸಾಧನವೂ ಇರಲಿಲ್ಲ. ಹೆಚ್ಚೆಂದರೆ ಪೊಲಿಟಿಕಲ್ ಏಜಂಟರಿಗೆ ಅಥವಾ ಗವರ್ನರಿಗೆ 'ಅಪ್ಪೀಲು' [ಮೇಲರ್ಜಿ] ಮಾಡಬಹುದಾಗಿದ್ದಿತು. ಅವರು, ''ನಾವು ಈ ವಿಚಾರದಲ್ಲಿ ಪ್ರವೇಶಮಾಡುವುದಿಲ್ಲ.'' ಎಂದು ಹೇಳಿ ಮೇಲರ್ಜಿಯನ್ನು ವಜಾಮಾಡಿಬಿಡುತ್ತಿದ್ದರು. ಇಂತಹ ವಿಷಯದ ನಿಷ್ಕರ್ಷೆಗೆ ಮೂಲವಾಗಿ ಯಾವ ಕಾನೂನಾದರೂ ಇದ್ದರೆ ಸರಿ. ಆದರೆ ಇಲ್ಲಿ ಸಾಹೇಬನ ಇಚ್ಛೆಯೇ ಕಾನೂನಾಗಿದ್ದಿತು. ನಾನು ತಾಳ್ಮೆಗೆಟ್ಟೆನು.

ಈ ಮಧ್ಯೆ ಪೋರಬಂದರದ ಒಂದು ಮೇಮನ್ ಅಂಗಡಿಯವರು ''ನಾವು ದಕ್ಷಿಣ ಆಫ್ರಿಕದಲ್ಲಿ ವ್ಯಾಪಾರ ಮಾಡುತ್ತಾ ಇದ್ದೇವೆ. ನಮ್ಮ ವ್ಯಾಪಾರ ಬಹಳ ಭಾರಿಯದಾಗಿದೆ. ನಮ್ಮದೊಂದು ದೊಡ್ಡ ಮೊಕದ್ದಮೆ ನಡೆಯುತ್ತಾ ಇದೆ. ಸುಮಾರು ೪೦,೦೦೦ ಪೌಂಡಿಗೆ (ಸುಮಾರು ೬ ಲಕ್ಷ ರೂಪಾಯಿ) ದಾವಾ ಮಾಡಿದ್ದೇವೆ. ಇದು ಅನೇಕದಿವಸದಿಂದ ನಡೆಯುತ್ತಿದೆ. ನಾವು ಬಹಳ ಗಟ್ಟಿಗರಾದ ವಕೀಲರನ್ನೂ ಬ್ಯಾರಿಸ್ಟರರನ್ನೂ ಇಟ್ಟುಕೊಂಡಿದ್ದೇವೆ. ತಾವು ತಮ್ಮ ತಮ್ಮನನ್ನು ಕಳುಹಿಸಿಕೊಟ್ಟರೆ ಆತನಿಂದ ನಮಗೆ ಸಹಾಯವಾಗುತ್ತದೆ. ಆತನಿಗೂ ಅನುಕೂಲವಾಗುತ್ತದೆ. ಆತನು ನಮ್ಮ ವಕೀಲರಿಗೆ ಮೊಕದ್ದಮೆಗೆ ಸಂಬಂಧಪಟ್ಟ

ವಿಷಯಗಳನ್ನು ನಮಗಿಂತ ಚೆನ್ನಾಗಿ ತಿಳಿಯಹೇಳಬಹುದು. ಆತನು ಹೊಸ ದೇಶವನ್ನು ನೋಡಿದ ಹಾಗೂ ಆಗುತ್ತದೆ. ಆತನಿಗೆ ಹೊಸಬರ ಪರಿಚಯವೂ ಉಂಟಾಗುತ್ತದೆ.'' ಎಂಬದಾಗಿ ನಮ್ಮಣ್ಣನಿಗೆ ಪತ್ರವನ್ನು ಬರೆದರು.

ನಮ್ಮಣ್ಣನು ಈ ವಿಚಾರವಾಗಿ ನನ್ನೊಡನೆ ಆಲೋಚಿಸಿದನು. ನನಗೆ ಇದೊಂದೂ ಅರ್ಥವಾಗಲಿಲ್ಲ. ವಕೀಲರಿಗೆ ಮೊಕದ್ದಮೆಯ ವಿಚಾರ ತಿಳಿಯಹೇಳುವದಷ್ಟೆಯೋ ಅಥವಾ ನಾನೂ ಕೋರ್ಟಿಗೆ ಹೋಗಬೇಕಾಗುವುದೋ ಎಂಬುದು ಕೂಡ ತಿಳಿಯಲಿಲ್ಲ. ಆದರೂ ನನಗೆ ಹೋಗಬೇಕೆಂಬ ಆಸೆಯುಂಟಾಯಿತು.

ದಾದಾ ಅಬ್ದುಲ್ಲಾ ಅಂಗಡಿಯ ಮಾಲಿಕರಲ್ಲಿ ಒಬ್ಬರಾದ ಸೇಠ್ ಅಬ್ದುಲ್ ಕರೀಮ್ ಝೂವೇರಿಯವರ ಪರಿಚಯವನ್ನು ನಮ್ಮಣ್ಣನು ನನಗೆ ಮಾಡಿಕೊಟ್ಟನು. ಸೇಠರು ''ನೀವೇನೂ ಹೆಚ್ಚು ಶ್ರಮ ವಹಿಸಬೇಕಾಗುವುದಿಲ್ಲ. ದೊಡ್ಡ ದೊಡ್ಡ ಐರೋಪ್ಯರು ನಮ್ಮ ಮಿತ್ರರಾಗಿರುವರು. ಅವರ ಪರಿಚಯವು ನಿಮಗೂ ಉಂಟಾಗುವುದು. ನಮ್ಮ ಅಂಗಡಿಯ ಕೆಲಸದಲ್ಲಿ ಕೂಡ ನೀವು ಸಹಾಯಮಾಡಬಹುದು. ನಮ್ಮ ಕಾಗದಪತ್ರಗಳಲ್ಲಿ ಹೆಚ್ಚು ಭಾಗ ಇಂಗ್ಲಿಷಿನಲ್ಲಿರುವುದರಿಂದ ಅದಕ್ಕೆ ಸಂಬಂಧಪಟ್ಟ ಕೆಲಸದಲ್ಲಿಯೂ ನೀವು ನಮಗೆ ನೆರವೀಯಬಹುದು. ನಿಮಗೆ ವಾಸಿಸುವುದಕ್ಕಂತು ನಮ್ಮ ಬಂಗಲೆಯಲ್ಲೇ ಏರ್ಪಾಡು ಮಾಡುತ್ತೇವೆ. ಆದುದರಿಂದ ನಿಮ್ಮ ಖರ್ಚಿನ ಭಾರವು ನಿಮ್ಮ ಮೇಲೇನೂ ಬೀಳುವುದಿಲ್ಲ.'' ಎಂದು ತಿಳಿಸಿದರು.

''ನಾನು ನಿಮ್ಮಲ್ಲಿ ಎಷ್ಟುದಿನ ನೌಕರಿ ಮಾಡಬೇಕು ? ನನಗೆ ಸಂಬಳ ಎಷ್ಟು ಕೊಡುತ್ತೀರಿ ?'' ಎಂದು ನಾನು ಕೇಳಿದೆನು.

''ಒಂದುವರ್ಷಕ್ಕೆ ಹೆಚ್ಚಾಗಿ ಆಗಲಾರದು. ನಿಮಗೆ ಹೋಗಿ ಬರುವುದಕ್ಕೆಮೊದಲನೆಯ ದರ್ಜೆಯ ಬಾಡಿಗೆ ಕೊಡುತ್ತೇವೆ. ಊಟ ತಿಂಡಿಯ ವೆಚ್ಚವಲ್ಲದೆ ೧೦೫ ಪೌಂಡು (೧೫೭೫ ರೂ.) ಕೊಡುತ್ತೇವೆ.''

ಹಾಗೆ ಹೋಗುವುದು ವಕೀಲಿ ಕೆಲಸ ಮಾಡುವುದಕ್ಕೆಂದು ಹೇಳುವ ಹಾಗಿರಲಿಲ್ಲ. ಇದು ಕೇವಲ ಆ ಅಂಗಡಿಯ ನೌಕರಿಯಾಗಿದ್ದಿತು.

ಆದರೆ ನನಗೆ ಹೇಗಾದರೂ ಮಾಡಿ ಹಿಂದೂಸ್ಥಾನವನ್ನು ಬಿಟ್ಟು ಹೊರಗೆ ಹೋಗಬೇಕೆನಿಸುತ್ತಿದ್ದಿತು. ಹೊಸ ದೇಶವನ್ನು ನೋಡಬಹುದು. ಹೊಸ ಅನುಭವವನ್ನು ಹೊಂದಬಹುದು ಎನ್ನುವ ಆಸೆ ಬೇರೆ. ಇದಲ್ಲದೆ ೧೦೫ ಪೌಂಡು ನಮ್ಮಣ್ಣನಿಗೆ ಸಂಸಾರದ ವೆಚ್ಚಕ್ಕಾಗಿ ಕಳುಹಿಸಬಹುದಾಗಿದ್ದಿತು. ಆದುದರಿಂದ ಚರ್ಚೆ ಮಾಡದೆ ಅವರು ಹೇಳಿದಷ್ಟು ಸಂಬಳಕ್ಕೆ ಅವರಲ್ಲಿ ಕೆಲಸಮಾಡಲು ಒಪ್ಪಿಕೊಂಡು ದಕ್ಷಿಣ ಆಫ್ರಿಕಕ್ಕೆ ಹೊರಡಲು ಅನುವಾದೆನು.



## ೬

# ನೇಟಾಲನ್ನು ತಲಪಿದುದು

ವಿಲಾಯತಿಗೆ ಹೊರಟಾಗ ನಾನು ಅನುಭವಿಸಿದ ವಿಯೋಗದುಃಖವು ನಾನು ದಕ್ಷಿಣ ಆಫ್ರಿಕಕ್ಕೆ ಹೊರಟಾಗ ನನಗುಂಟಾಗಲಿಲ್ಲ. ಈಗ ನಮ್ಮ ತಾಯಿಯು ಬದುಕಿರಲಿಲ್ಲ. ನನಗೆ ಪ್ರಪಂಚದ ಜ್ಞಾನವು ತಕ್ಕಮಟ್ಟಿಗೆ ಬಂದಿದ್ದಿತಲ್ಲದೆ ಪ್ರಯಾಣದ ಅನುಭವವೂ ಉಂಟಾಗಿದ್ದಿತು. ರಾಜಕೋಟೆಯಿಂದ ಮುಂಬಯಿಗೆ ಹೋಗಿಬರುವುದು ಸಾಮಾನ್ಯ ವಿಷಯವಾಗಿದ್ದಿತು.

ಈಸಲ ನನ್ನ ಹೆಂಡತಿಯನ್ನು ಬಿಟ್ಟುಹೋಗಬೇಕೆನ್ನುವುದು ಮಾತ್ರ ಹೃದಯವೇದನೆಗೆ ಕಾರಣವಾಗಿದ್ದಿತು. ವಿಲಾಯತಿಯಿಂದ ಹಿಂತಿರುಗಿ ಬಂದಮೇಲೆ ನಮಗೆ ಇನ್ನೊಬ್ಬ ಮಗನು ಹುಟ್ಟಿದ್ದನು. ಇನ್ನೂ ನಮ್ಮ ಪ್ರೇಮದಲ್ಲಿ ವಿಕಾರವಿರಲೇ ಇಲ್ಲವೆಂದು ಹೇಳಲಾಗದಿದ್ದರೂ ಅದು ಬರಬರುತ್ತಾ ಹೆಚ್ಚು ನೈರ್ಮಲ್ಯವನ್ನು ಹೊಂದುತ್ತಿದ್ದಿತು. ನಾನು ಸೀಮೆಯಿಂದ ಬಂದಮೇಲೆ ನಾವಿಬ್ಬರೂ ಒಟ್ಟಿಗಿದ್ದ ಕಾಲವು ಬಹು ಕಡಿಮೆ. ಶಿಕ್ಷಣವು ಹೇಗಾದರೂ ಇರಲಿ, ನಾನೇ ನನ್ನ ಹೆಂಡತಿಯ ಶಿಕ್ಷಕನಾಗಿದ್ದೆನು. ಮತ್ತು ಕೆಲವು ಸುಧಾರಣೆಗಳನ್ನು ಮಾಡಿಕೊಳ್ಳಲು ಆಕೆಗೆ ಸಹಾಯವಾಗಿದ್ದೆನು. ಈ ಮಾರ್ಪಾಡುಗಳನ್ನು ಪೂರ್ತಿಗೊಳಿಸುವುದಕ್ಕಾಗಿಯಾದರೂ ನಾವು ಒಟ್ಟಿಗಿರುವುದು ಆವಶ್ಯಕವೆಂದು ನಮಗೆ ತೋರಿತು. ಆದರೆ ಆಫ್ರಿಕದ ಕಡೆಗೆ ನನ್ನ ಮನಸ್ಸು ಓಡುತ್ತಿದ್ದುದರಿಂದ ಈ ವಿಯೋಗವು ಸಹಿಸಲು ಸಾಧ್ಯವಾಗಿ ಕಂಡಿತು. ''ಇನ್ನೊಂದು ವರ್ಷಕ್ಕೆ ಹೇಗಿದ್ದರೂ ಒಟ್ಟಿಗೆ ಸೇರುತ್ತೇವೆ.'' ಎಂದು ನನ್ನ ಹೆಂಡತಿಗೆ ಸಮಾಧಾನ ಹೇಳಿ ನಾನು ರಾಜಕೋಟೆಯಿಂದ ಹೊರಟು ಮುಂಬಯಿಗೆ ತೆರಳಿದೆನು.

ಅಲ್ಲಿಗೆ ಹೋದಮೇಲೆ ಅಲ್ಲಿದ್ದ ದಾದಾ ಅಬ್ದುಲ್ಲಾ ಕಂಪೆನಿಯ ಪ್ರತಿನಿಧಿಯ ಮುಖಾಂತರ ನಾನು ಟಿಕೆಟನ್ನು ತೆಗೆದುಕೊಳ್ಳಬೇಕಾಗಿದ್ದಿತು. ಆದರೆ ಜಹಜಿನಲ್ಲಿ ಸ್ಥಳವಿರಲಿಲ್ಲ. ನಾನು ಆಗ ಹೊರಡದಿದ್ದರೆ ಮುಂಬಯಿಯಲ್ಲಿ ಕೈಕಟ್ಟಿಕೊಂಡು ಕುಳಿತಿರಬೇಕಾಗಿದ್ದಿತು. ಪ್ರತಿನಿಧಿಯು "ನಿಮಗೆ ಮೊದಲನೆಯ ದರ್ಜೆಯ ಸ್ಥಳವನ್ನು ಕೊಡಿಸಲು ಕೈಲಾದಷ್ಟು ಪ್ರಯತ್ನಪಟ್ಟೆನು. ಆದರೂ ಟಿಕೆಟ್ ಸಿಕ್ಕಲಿಲ್ಲ. ನೀವು ಜಹಜಿನ ಕೈಸಾಲೆಯಲ್ಲಿ ಇರುವುದಕ್ಕೆ ಇಷ್ಟಪಟ್ಟರೆ ಒಳ್ಳೆಯದೇ ಆಯಿತು. ಊಟಕ್ಕೆ ಸೆಲೂನಿ [ಮೇಲಿನ ದರ್ಜೆಯುವರು ಊಟಮಾಡುವಸ್ಥಳ] ಸಲ್ಲಿಯೇ ಏರ್ಪಾಡು ಮಾಡಬಹುದು." ಎಂದು ಹೇಳಿದನು. ಆ ಕಾಲದಲ್ಲಿ ನಾನು ಮೊದಲನೆಯ ತರಗತಿಯಲ್ಲಿಯೇ ಪ್ರಯಾಣ ಮಾಡುತ್ತಿದ್ದೆನು. ನಾನು ಬ್ಯಾರಿಸ್ಟರಾಗಿಯೂ ಡೆಕ್ಕಿನ ಪ್ರಯಾಣಿಕನಾಗಿ ಹೋಗುವುದು ಹೇಗೆ? ಆದುದರಿಂದ ನಾನು ಇದಕ್ಕೆ ಒಪ್ಪಲಿಲ್ಲ. ಆ ಪ್ರತಿನಿಧಿಯ ಮಾತು ನಿಜವೋ ಸುಳ್ಳೋ ಎಂದು ಸಂಶಯವುಂಟಾಯಿತು. ಏಕೆಂದರೆ ಮೊದಲನೆಯ ತರಗತಿಯ ಪ್ರಯಾಣಿಕನಿಗೆ ಸ್ಥಳವಿಲ್ಲವೆನ್ನುವುದನ್ನು ನನಗೆ ನಂಬುವುದಕ್ಕಾಗಲಿಲ್ಲ. ಆತನ ಒಪ್ಪಿಗೆಯನ್ನು ಪಡೆದು ಸ್ಥಳ ಸಿಕ್ಕುವುದೇ ಎಂದು ವಿಚಾರಿಸಲು ನಾನೇ ಹೊರಟೆನು. ಜಹಜಿನ ಮೇಲೆ ಹೋಗಿ ಅದರ ಮುಖ್ಯಾಧಿಕಾರಿಯನ್ನು ಕಂಡೆನು. ಆತನನ್ನು ವಿಚಾರಿಸಲು ಆತನು ಏನನ್ನೂ ಮರೆಮಾಚದೆ "ನಮ್ಮಲ್ಲಿ ಸಾಮಾನ್ಯವಾಗಿ ಇಷ್ಟು ನೂಕುನುಗ್ಗಲಿರುವುದಿಲ್ಲ. ಮೊಜಾಂಬಿಕದ ಗವರ್ನರ್ ಜನರಲ್‌ರವರು ಈ ಜಹಜಿನಲ್ಲಿ ಹೋಗುವುದರಿಂದ ಸ್ಥಳವೆಲ್ಲಾ ತುಂಬಿದೆ." ಎಂದು ಹೇಳಿದನು.

"ಹೇಗಾದರೂ ಮಾಡಿ ನನಗೆ ಸ್ಥಳ ಕೊಡುವುದಕ್ಕಾಗುವುದಿಲ್ಲವೆ?" ಎಂದು ಕೇಳಿದೆನು.

ಅಧಿಕಾರಿಯು ನನ್ನನ್ನು ಶಿರದಿಂದ ಅಂಗುಷ್ಟದವರೆಗೂ ನೋಡಿ ನಗುತ್ತಾ, "ಇದಕ್ಕೆ ಒಂದೇ ಒಂದು ಉಪಾಯವಿದೆ. ನನ್ನ ಕೊಠಡಿಯಲ್ಲಿ ಇನ್ನೊಬ್ಬರಿಗೆ ಜಾಗವಿದೆ. ಅದನ್ನು ಸಾಧಾರಣವಾಗಿ ಪ್ರಯಾಣಿಕರಿಗೆ ಕೊಡುವುದಿಲ್ಲ. ಆದರೂ ಅದನ್ನು ನಿಮಗೆ ಕೊಡಲು ಸಿದ್ಧನಾಗಿ

ದ್ದೇನೆ.'' ಎಂದನು. ನನಗೆ ಆನಂದವಾಯಿತು. ''ನಿಮ್ಮಿಂದ ನನಗೆ ಉಪಕಾರವಾಯಿತು.'' ಎಂದು ಆತನಿಗೆ ಹೇಳಿ ಪ್ರತಿನಿಧಿಗೆ ತಿಳಿಸಿ ಟಿಕೆಟನ್ನು ತರಿಸಿಕೊಂಡೆನು. ೧೮೯೩ನೆಯ ಇಸವಿ ಏಪ್ರಿಲ್ ತಿಂಗಳಲ್ಲಿ ನನ್ನ ಅದೃಷ್ಟವನ್ನು ಪರೀಕ್ಷಿಸಲು ದಕ್ಷಿಣ ಆಫ್ರಿಕಕ್ಕೆ ಬಹಳ ಉತ್ಸಾಹದಿಂದ ಹೊರಟೆನು.

ನಮಗೆ ಸಿಕ್ಕಿದ ಮೊದಲನೆಯ ಬಂದರು ಲಾಮು ಎಂಬುದು. ಅದನ್ನು ತಲಪುವುದಕ್ಕೆ ಸುಮಾರು ಹದಿಮೂರು ದಿವಸ ಹಿಡಿಯಿತು. ಈ ಹೊತ್ತಿಗೆ ಕ್ಯಾಪ್ಟನನೂ (ಜಹಜಿನ ಮುಖ್ಯಾಧಿಕಾರಿ) ನಾನೂ ಪರಮ ಮಿತ್ರರಾಗಿದ್ದೆವು. ಆತನಿಗೆ ಚತುರಂಗವಾಡುವುದೆಂದರೆ ಇಷ್ಟ. ಆದರೆ ಅದನ್ನು ಇನ್ನೂ ಹೊಸದಾಗಿ ಕಲಿತಿದ್ದುದರಿಂದ ತನ್ನಷ್ಟೂ ಆಟ ಬರದವನು ಆತನ ಜೊತೆಗೆ ಆಟವಾಡುವುದಕ್ಕೆ ಬೇಕಾಗಿದ್ದಿತು. ಆದುದರಿಂದ ಆತನು ನನ್ನನ್ನು ಕರೆದನು. ನಾನು ಈ ಆಟವನ್ನು ಎಂದೂ ಆಡಿರಲಿಲ್ಲವಾದರೂ ಇದರಲ್ಲಿ ಬುದ್ಧಿಯನ್ನು ಬೇಕಾದಹಾಗೆ ಉಪಯೋಗಿಸಲು ಅವಕಾಶವಿದೆಯೆಂದು ಆಟಗಾರರ ಬಾಯಿಯಲ್ಲಿ ಕೇಳಿದ್ದೆನು. ಕ್ಯಾಪ್ಟನನು ನನಗೆ ಹೇಳಿಕೊಡಲು ಒಪ್ಪಿದನು. ನಾನೂ ಅವನಿಗೆ ಒಳ್ಳೆಯ ಶಿಷ್ಯನಾದೆನು. ಏಕೆಂದರೆ ನನ್ನ ತಾಳ್ಮೆಗೆ ಮಿತಿಯೇ ಇರಲಿಲ್ಲ. ಪ್ರತಿ ಸಲವೂ ನಾನೇ ಸೋಲುತ್ತಿದ್ದೆನು. ಇದರಿಂದ ಆತನಿಗೆ ನನಗೆ ಹೇಳಿಕೊಡಬೇಕೆಂಬ ಉತ್ಸಾಹವು ಇನ್ನೂ ಹೆಚ್ಚುತ್ತಿದ್ದಿತು. ನನಗೂ ಈ ಆಟದಲ್ಲಿ ಅಭಿರುಚಿ ಹುಟ್ಟಿತು. ಆದರೆ ಈ ಅಭಿರುಚಿಯು ಜಹಜಿನಲ್ಲೇ ಕೊನೆಗಂಡಿತು. ಈ ಆಟದಲ್ಲಿನ ಕುಶಲತೆಯು ಕೂಡ ರಾಜ ರಾಣಿ ಮುಂತಾದುವುಗಳನ್ನು ನಡೆಸುವುದು ಹೇಗೆ ಎಂದು ತಿಳಿದುಕೊಳ್ಳುವುದರಲ್ಲೇ ಮುಗಿದುಹೋಯಿತು.

ಲಾಮುಬಂದರಿನಲ್ಲಿ ಜಹಜು ಮೂರು ನಾಲ್ಕು ತಾಸು ನಿಂತಿತು. ಬಂದರನ್ನು ನೋಡುವುದಕ್ಕಾಗಿ ನಾನು ಇಳಿದೆನು. ಕ್ಯಾಪ್ಟನನೂ ಇಳಿದಿದ್ದನು. ಆದರೆ ಆತನು ''ಈ ಬಂದರನ್ನು ನಂಬುವುದಕ್ಕಿಲ್ಲ. ಬೇಗ ಹಿಂದಕ್ಕೆಬನ್ನಿರಿ.'' ಎಂದು ನನಗೆ ಎಚ್ಚರಿಕೆ ಕೊಟ್ಟಿದ್ದನು.

ಆ ಊರು ಬಹು ಸಣ್ಣದಾಗಿದ್ದಿತು. ಅಲ್ಲಿಯ ಅಂಚೆಯ ಮನೆಗೆ ಹೋದೆನು. ಅಲ್ಲಿದ್ದ ಭಾರತೀಯ ಗುಮಾಸ್ತರನ್ನು ನೋಡಿ ನನಗೆ ಸಂತೋಷವಾಯಿತು. ಅವರೊಡನೆ ಮಾತುಕತೆಯಾಡಿದೆನು. ಅಲ್ಲಿ ಆಫ್ರಿಕದ ಜನರನ್ನೂ ನೋಡಿದೆನು. ಅವರ ರೀತಿನೀತಿಗಳನ್ನು ತಿಳಿದು ಕೊಳ್ಳಲು ಪ್ರಯತ್ನಪಟ್ಟೆನು. ಇವುಗಳಲ್ಲಿ ನನಗೆ ಬಹು ಕುತೂಹಲ ವುಂಟಾಯಿತು. ಇದೆಲ್ಲಾ ಸ್ವಲ್ಪ ಹೊತ್ತು ಹಿಡಿಯಿತು.

ನನಗೆ ಗುರುತಾಗಿದ್ದ ಕೆಲವು ಡೆಕ್ಕಿನ ಪ್ರಯಾಣಿಕರು ಅಡಿಗೆ ಯನ್ನು ಮಾಡಿಕೊಂಡು ಸಾವಕಾಶವಾಗಿ ಊಟಮಾಡಿಕೊಂಡು ಹೋಗ ಬೇಕೆಂಬ ಉದ್ದೇಶದಿಂದ ಹಡಗಿನಿಂದ ಇಳಿದಿದ್ದರು. ನಾನು ಅವರು ಜಹಜಿಗೆ ಹೋಗಲು ಸಿದ್ಧರಾಗುತ್ತಿದ್ದುದನ್ನು ಕಂಡೆನು. ಆದುದರಿಂದ ನಾವೆಲ್ಲರೂ ೧ ಒಂದೇ ದೋಣಿಯಲ್ಲಿಯೇ ಹೊರಟೆವು. ಬಂದರಿನಲ್ಲಿ ಸಮುದ್ರವು ಹೆಚ್ಚಾಗಿ ಏರಿದ್ದಿತು. ನಮ್ಮ ದೋಣಿಯೊಳಗಿನ ತೂಕವು ಅದರ ಯೋಗ್ಯತೆಯನ್ನು ಮೀರಿಯೇ ಇದ್ದಿತು. ಪ್ರವಾಹದ ರಭಸದಿಂದ ದೋಣಿಯ ಹಗ್ಗವನ್ನು ಜಹಜಿನ ಏಣಿಗೆ ಕಟ್ಟಲು ಆಗುತ್ತಲೇ ಇರಲಿಲ್ಲ. ದೋಣಿಯು ಏಣಿಯ ಹತ್ತಿರಕ್ಕೆ ಬರುತ್ತಲೂ ಪ್ರವಾಹವು ಅದನ್ನು ದೂರ ಸೆಳೆದುಬಿಡುತ್ತಿದ್ದಿತು. ಜಹಜು ಹೊರಡುವುದಕ್ಕಾಗಿ ಮೊದಲ ನೆಯ ಸಿಳ್ಳು ಆಗಿಹೋಗಿದ್ದಿತು. ನನಗೆ ಗಾಬರಿಯಾಯಿತು. ಕ್ಯಾಪ್ಟ ನನು ಮೇಲಿನಿಂದ ನಮ್ಮ ಪರಿಸ್ಥಿತಿಯನ್ನು ನೋಡುತ್ತಿದ್ದನು. ಆತನು ಜಹಜು ಇನ್ನು ಐದು ನಿಮಿಷ ಕಾಯಲು ಅಪ್ಪಣೆ ಮಾಡಿದ್ದನು. ಹತ್ತಿರ ದಲ್ಲಿಯೇ ಇನ್ನೊಂದು ದೋಣಿಯಿದ್ದಿತು ನನ್ನ ಮಿತ್ರನೊಬ್ಬನು ನನ ಗಾಗಿ ಅದನ್ನು ಹತ್ತುರೂಪಾಯಿ ಬಾಡಿಗೆಗೆ ಗೊತ್ತುಮಾಡಿದನು. ಹಿಡಿ ಯಲಾರದಷ್ಟು ಹೊರೆಯನ್ನು ಹೊತ್ತಿದ್ದ ದೋಣಿಯಿಂದ ಈ ದೋಣಿಗೆ ನನ್ನನ್ನು ಇಳಿಸಿಕೊಂಡರು. ಅಷ್ಟು ಹೊತ್ತಿಗೆ ಜಹಜಿನ ಏಣಿಯನ್ನು ಮೇಲಕ್ಕೆ ಎತ್ತಿಬಿಟ್ಟಿದ್ದರು. ಆದುದರಿಂದ ನನ್ನನ್ನು ಒಂದು ಹಗ್ಗದಿಂದ ಮೇಲಕ್ಕೆ ಎಳೆದುಕೊಳ್ಳಬೇಕಾಯಿತು. ಒಡನೆಯೇ ಜಹಜು ಹೊರ ಟಿತು. ಉಳಿದ ಪ್ರಯಾಣಿಕರು ಹಿಂದೆ ಉಳಿದುಬಿಟ್ಟರು.

ಕ್ಯಾಪ್ಟನನು ನನಗೆ ಎಚ್ಚರಿಕೆ ಕೊಟ್ಟುದರ ರಹಸ್ಯವು ಈಗ ನನಗೆ ಗೊತ್ತಾಯಿತು.

ಲಾಮುವಿನಿಂದ ಮೊಂಬಾಸವನ್ನೂ ಅಲ್ಲಿಂದ ಜಾಂಜಿಬಾರನ್ನೂ ತಲಪಿದೆವು. ಇಲ್ಲಿ ದೀರ್ಘಕಾಲ—ಎಂಟುಹತ್ತು ದಿನ—ನಿಲ್ಲುವುದಿದ್ದಿತು. ಇಲ್ಲಿಂದ ಬೇರೆ ಜಹಜಿನಲ್ಲಿ ಪ್ರಯಾಣಮಾಡಿದೆನು.

ಕ್ಯಾಪ್ಟನನು ನನ್ನ ಮೇಲೆ ಅತಿಶಯ ಪ್ರೇಮವನ್ನಿಟ್ಟಿದ್ದನು. ಆದರೆ ಇದು ಅಸಾಧುವಾದ ರೂಪವನ್ನು ಹೊಂದಿತು. ಆತನ ಸಂಗಡ ತಿರುಗಾಡಿಕೊಂಡು ಬರಲು ನನ್ನನ್ನೂ ಒಬ್ಬ ಆಂಗ್ಲ ಮಿತ್ರನನ್ನೂ ಕರೆದನು. ನಾವು ಮೂವರೂ ಕ್ಯಾಪ್ಟನಿನ ದೋಣಿಯಲ್ಲಿ ಹೊರಟು ದಡವನ್ನು ಮುಟ್ಟಿದೆವು. ಈ ತಿರುಗಾಟದ ಮರ್ಮವು ನನಗೆ ಸ್ವಲ್ಪವೂ ಗೊತ್ತಿರಲಿಲ್ಲ. ನಾನು ಇಂತಹ ವಿಷಯಗಳ ಅರಿವೇ ಇಲ್ಲದವನೆಂದು ಕ್ಯಾಪ್ಟನನಿಗೆ ತಾನೇ ಏನು ಗೊತ್ತು? ಒಬ್ಬ ಮಧ್ಯಸ್ಥಿಕೆಗಾರನು ನಮ್ಮನ್ನು ನೀಗ್ರೋ ಹೆಂಗಸರ ಮನೆಯೊಂದಕ್ಕೆ ಕರೆದುಕೊಂಡು ಹೋದನು. ಒಬ್ಬೊಬ್ಬರನ್ನು ಒಂದೊಂದು ಕೊಠಡಿಯೊಳಕ್ಕೆ ಬಿಟ್ಟರು. ನಾನು ನಾಚಿಕೆಯಿಂದಲೂ ವಿಷಾದದಿಂದಲೂ ಸುಮ್ಮನೆ ನಿಂತುಬಿಟ್ಟೆನು. ಪಾಪ, ಆ ಬಡ ಹೆಂಗಸು ನನ್ನ ವಿಷಯವಾಗಿ ಏನು ತಿಳಿದುಕೊಂಡಿರಬೇಕೋ ದೇವರಿಗೇ ಗೊತ್ತು. ಕ್ಯಾಪ್ಟನನು ನನ್ನನ್ನು ಕರೆದೊಡನೆಯೇ ನಾನು ಹೇಗೆ ಒಳಕ್ಕೆ ಹೋದೆನೋ ಹಾಗೆಯೇ ಹೊರಕ್ಕೆ ಬಂದೆನು. ನನ್ನ ಸಾತ್ವಿಕತೆಯು ಆತನಿಗೆ ಗೊತ್ತಾಯಿತು. ನನಗೆ ಮೊದಲು ಬಹಳ ಅವಮಾನವಾಯಿತು. ಆದರೆ ಇದನ್ನು ನೆನೆಸಿಕೊಂಡಾಗಲೆಲ್ಲಾ ಬಹು ಜುಗುಪ್ಸೆಯಾಗುತ್ತಿದ್ದಿತು. ಇದರಿಂದ ನನ್ನ ನಡತೆಯು ಮಾನಕ್ಕೆ ಕಡಿಮೆಯೆನ್ನುವ ಭಾವವು ಅಳಿಸಿಹೋಯಿತು. ಈ ಸಹೋದರಿಯನ್ನು ನೋಡಿ ನನ್ನ ಮನಸ್ಸಿನಲ್ಲಿ ಲೇಶವೂ ವಿಕಾರಹುಟ್ಟದೆ ಇದ್ದುದಕ್ಕಾಗಿ ನಾನು ದೇವರನ್ನು ಕೊಂಡಾಡಿದೆನು. ನನ್ನ ಮನೋದುರ್ಬಲತೆಯನ್ನು ನೋಡಿ ನನಗೆ ಹೇಸಿಕೆಯುಂಟಾಯಿತು. ಕರೆದಾಗ ಕೊಠಡಿಯೊಳಕ್ಕೆ ಹೋಗುವುದಿಲ್ಲವೆಂದು ಹೇಳುವಷ್ಟು ಧೈರ್ಯವಿರಲಿಲ್ಲವೆಂದು ನನ್ನಲ್ಲಿ ನನಗೇ ಕಸಿಕರವುಂಟಾಯಿತು.

ಈ ರೀತಿಯಾದ ಪರೀಕ್ಷೆಗಳಲ್ಲಿ ಇದು ನನ್ನ ಜೀವನದಲ್ಲಿ ಮೂರ ನೆಯದಾಗಿದ್ದಿತು. ಮೊದಲು ನಿಷ್ಕಳಂಕರಾಗಿದ್ದ ಅನೇಕ ಯುವಕರು ಈ ತೆರನಾದ ಸುಳ್ಳು ನಾಚಿಕೆಯಿಂದ ಪಾಪದ ದಾರಿಗೆ ಎಳೆಯಲ್ಪಟ್ಟಿರ ಬೇಕು. ನಾನು ಈ ದಾರಿಗೆ ಬೀಳದಿದ್ದುದು ನನ್ನ ಪುರುಷಪ್ರಯತ್ನ ದಿಂದಲ್ಲ. ಆ ಕೊಠಡಿಯೊಳಕ್ಕೆ ನಾನು ಹೋಗುವುದಿಲ್ಲವೆಂದು ಖಂಡಿತ ವಾಗಿ ನಾನು ಹೇಳಿದ್ದರೆ ಸ್ವಪ್ರಯತ್ನದಿಂದಲೇ ನಾನು ಕೆಟ್ಟ ದಾರಿಗೆ ಬೀಳುವುದರಿಂದ ತಪ್ಪಿಸಿಕೊಂಡೆನೆಂದು ಹೇಳಬಹುದಾಗಿದ್ದಿತು. ಪಾಪ ದಿಂದ ದಯಾಮಯನಾದ ಭಗವಂತನೇ ನನ್ನನ್ನು ರಕ್ಷಿಸಿದನೆಂದು ಹೇಳ ಬೇಕು. ಈ ಘಟನೆಯಿಂದ ಈಶ್ವರನಲ್ಲಿ ನನ್ನ ನಂಬಿಕೆಯು ದೃಢಪಟ್ಟಿ ತಲ್ಲದೆ ಸುಳ್ಳುನಾಚಿಕೆಯನ್ನು ಬಿಟ್ಟುಬಿಡುವುದನ್ನೂ ನಾನು ತಕ್ಕ ಮಟ್ಟಿಗೆ ಕಲಿತುಕೊಂಡೆನು.

ಈ ಬಂದರಿನಲ್ಲಿ ಒಂದು ವಾರ ನಿಂತಿರಬೇಕಾಗಿದ್ದುದರಿಂದ ನಾನು ಊರಿನಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡೆನು. ಊರನ್ನೂ ಸುತ್ತುಮುತ್ತಲಿನ ಪ್ರದೇಶವನ್ನೂ ಚೆನ್ನಾಗಿ ತಿರುಗಾಡಿ ನೋಡಿದೆನು. ಜಾಂಜಿಬಾರಿನಲ್ಲಿ ಸಮೃದ್ಧಿಯಾಗಿ ಬೆಳೆದಿರುವ ಸಸ್ಯಾದಿಗಳ ಸೌಂದರ್ಯ ವನ್ನು ಊಹಿಸಲು ಮಲಬಾರನ್ನು ನೋಡಿರುವವರಿಗೆ ಮಾತ್ರ ಸಾಧ್ಯ. ಅಲ್ಲಿನ ಮರಗಳ ಮಹಾಪರಿಮಾಣವನ್ನೂ ದೊಡ್ಡದೊಡ್ಡ ಹಣ್ಣು ಗಳನ್ನೂ ನೋಡಿ ನನಗೆ ಆಶ್ಚರ್ಯವಾಯಿತು.

ಅಲ್ಲಿಂದ ಹೊರಟು ಮೊಜಾಂಬಿಕನ್ನೂ ಆ ಸ್ಥಳದಿಂದ ಕಡೆಗೆ ಮೇ ತಿಂಗಳ ಕೊನೆಯಲ್ಲಿ ನೇಟಾಲನ್ನೂ ಸೇರಿದೆವು.

೭

# ಕೆಲವು ಅನುಭವಗಳು

ಡರ್ಬನ್ ಎಂಬುದು ನೇಟಾಲಿನ ರೇವು ಪಟ್ಟಣ. ಇದನ್ನು ಪೋರ್ಟ್ ನೇಟಾಲ್ ಎಂದೂ ಕರೆಯುವುದುಂಟು. ನನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ಅಬ್ದುಲ್ಲಾ ಸೇಠರು ಬಂದರಿಗೆ ಬಂದಿದ್ದರು. ಜಹಜು ಬಂದರಿನ ಕಟ್ಟೆಯನ್ನು ಸೇರಲು ನಾನು ತಮ್ಮ ತಮ್ಮ ಮಿತ್ರರನ್ನು ಕರೆದುಕೊಂಡು ಹೋಗಲು ಜಹಜನ್ನು ಹತ್ತಿಬರುತ್ತಿದ್ದ ಜನರನ್ನು ನೋಡುತ್ತಾ ಇರಲು ಇಲ್ಲಿ ಭಾರತೀಯರನ್ನು ಮನ್ನಣೆಯಿಂದ ಕಾಣುವುದಿಲ್ಲವೆನ್ನುವುದು ಗೊತ್ತಾಯಿತು. ಅಬ್ದುಲ್ಲಾಸೇಠರೊಡನೆ ಪರಿಚಯವುಳ್ಳವರು ಅವರ ಬಳಿಯಲ್ಲಿ ಒಂದು ರೀತಿಯಾದ ದೊಡ್ಡಸ್ತಿಕೆಯಿಂದ ವರ್ತಿಸುತ್ತಿದ್ದುದು ನನ್ನ ಕಣ್ಣಿಗೆ ಬೀಳದೆ ಇರಲಿಲ್ಲ. ಇದು ನನ್ನ ಮನಸ್ಸನ್ನು ಚುಚ್ಚಿತು. ಇತರರು ತಮ್ಮನ್ನು ಹೀಗೆ ಕಾಣುವುದು ಸೇಠರಿಗೆ ಅಭ್ಯಾಸವಾಗಿಹೋಗಿದ್ದಿತು. ನನ್ನಕಡೆ ನೋಡುತ್ತಿದ್ದವರು ಒಂದುರೀತಿಯ ಕುತೂಹಲವನ್ನು ತೋರ್ಪಡಿಸುತ್ತಿದ್ದರು. ನನ್ನ ಪೋಷಾಕು ಇತರ ಭಾರತೀಯರ ಉಡಿಗೆಯಂತಿರಲಿಲ್ಲ. ನಾನು ಆಗ ಫ್ರಾಕ್ ಕೋಟನ್ನೂ [ಸೀಮೆಯಲ್ಲಿ ಉಪಯೋಗಿಸುವ ನೋಟು ಅಂಗಿ] ಬಂಗಾಳಿ ಪಗರಿಯಂತಿರುವ ರುಮಾಲನ್ನೂ ಹಾಕಿಕೊಂಡಿದ್ದೆನು.

ಅಂಗಡಿಗೆ ಕರೆದುಕೊಂಡು ಹೋಗಿ ಅಬ್ದುಲ್ಲಾ ಸೇಠರು ನನ್ನನ್ನು ತಮ್ಮ ಕೊಠಡಿಯ ಪಕ್ಕದಲ್ಲಿರುವ ನನಗಾಗಿ ಏರ್ಪಡಿಸಿದ್ದ ಇನ್ನೊಂದು ಕೊಠಡಿಯಲ್ಲಿ ಇಳಿಸಿದರು. ನನ್ನ ಮಾತು ಅವರಿಗೆ ಅರ್ಥವಾಗುತ್ತಿರಲಿಲ್ಲ; ಅವರ ಮಾತು ನನಗೆ ತಿಳಿಯುತ್ತಿರಲಿಲ್ಲ. ಅವರ ತಮ್ಮನು ನನ್ನೊಡನೆ ಕಳುಹಿಸಿದ ಕಾಗದಪತ್ರಗಳನ್ನು ಓದಿ ಅವರಿಗೆ ಇನ್ನೂ ವಿಸ್ಮಯವಾಯಿತು. ನನ್ನನ್ನು ಕಳುಹಿಸಿದುದು ಮನೆಯಲ್ಲಿ ಒಂದು ಆನೆಯನ್ನು ಪೂಜೆ ಮಾಡುವುದಕ್ಕೋಸ್ಕರ ಇಟ್ಟುಕೊಳ್ಳಲು ಕಳುಹಿಸಿದಂತೆ ಅವರಿಗೆ

ತೋರಿತು. ನನ್ನ ಉಡುಪೂ ಜೀವನದ ರೀತಿಯೂ ಐರೋಪ್ಯರಿಗಾಗುವಂತೆಯೇ ಬಹಳ ವೆಚ್ಚ ತಗಲುವುದಾಗಿ ಅವರಿಗೆ ಕಂಡಿತು. ನನಗೆ ಕೊಡತಕ್ಕಂಥ ಕೆಲಸವು ಸದ್ಯಕ್ಕೆ ಯಾವುದೂ ಇರಲಿಲ್ಲ. ಅವರ ಮೊಕದ್ದಮೆಯು ಟ್ರಾನ್ಸ್‌ವಾಲಿನಲ್ಲಿ ನಡೆಯುತ್ತಿದ್ದಿತು. ನನ್ನನ್ನು ಒಡನೆಯೇ ಅಲ್ಲಿಗೆ ಕಳುಹಿಸುವುದರಲ್ಲಿ ಅರ್ಥವಿರಲಿಲ್ಲ. ನನ್ನಲ್ಲಿ ಯೋಗ್ಯತೆಯೂ ಪ್ರಾಮಾಣಿಕತೆಯೂ ಎಷ್ಟರವುಟ್ಟಿಗೆ ಇದೆಯೆಂದು ನಂಬುವುದು? ಅವರು ನನ್ನ ಮೇಲೆ ಕಣ್ಣಿಟ್ಟಿರಲೋಸುಗ ಪ್ರಿಟೋರಿಯಾ (ಟ್ರಾನ್ಸ್‌ವಾಲಿನ ರಾಜಧಾನಿ) ದಲ್ಲಿ ಇರಲು ಸಾಧ್ಯವಿರಲಿಲ್ಲ. ಪ್ರತಿವಾದಿಗಳು ಪ್ರಿಟೋರಿಯಾದಲ್ಲಿಯೇ ಇದ್ದರು. ಈ ಸಂದರ್ಭದಲ್ಲಿ ಅವರು ಒಳಗೇ ನನ್ನನ್ನು ತಮ್ಮ ಕಡೆ ಮಾಡಿಕೊಂಡರೋ? ಈ ಮೊಕದ್ದಮೆಯ ಕೆಲಸವನ್ನು ನನಗೆ ವಹಿಸದಿದ್ದರೆ ನನಗೆ ಬೇರೆ ಯಾವ ಕೆಲಸವನ್ನು ಕೊಡುವುದು? ಇತರ ಕೆಲಸಗಳನ್ನೆಲ್ಲಾ ಗುಮಾಸ್ತರು ನನಗಿಂತ ಎಷ್ಟೋ ಚೆನ್ನಾಗಿ ಮಾಡಬಲ್ಲವರಾಗಿದ್ದರು. ಗುಮಾಸ್ತರು ಒಂದುವೇಳೆ ತಪ್ಪುಮಾಡಿದರೆ ಅವರನ್ನು ಶಿಕ್ಷಿಸಬಹುದಾಗಿದ್ದಿತು. ಆದರೆ ನಾನು ಮಾಡಿದರೋ? ಹೀಗಿದ್ದುದರಿಂದ ನನಗೆ ಮೊಕದ್ದಮೆಗೆ ಸಂಬಂಧಪಟ್ಟ ಕೆಲಸವನ್ನು ಕೊಡದಿದ್ದರೆ ಯಾವ ಪ್ರಯೋಜನವೂ ಇಲ್ಲದೆ ನನ್ನನ್ನು ಇಟ್ಟುಕೊಂಡಿರಬೇಕಾಗಿದ್ದಿತು.

ಅಬ್ದುಲ್ಲಾ ಸೇಠರಿಗೆ ಅಕ್ಷರಜ್ಞಾನವಿರಲಿಲ್ಲವೆಂದು ಹೇಳಬಹುದಾಗಿದ್ದರೂ ಅವರಿಗೆ ಅನುಭವಜ್ಞಾನವು ಬೇಕಾದಹಾಗಿದ್ದಿತು. ಅವರ ಬುದ್ಧಿಯು ತೀಕ್ಷ್ಣವಾದುದು. ಅದು ಅವರಿಗೂ ಗೊತ್ತಿದ್ದಿತು. ಅಭ್ಯಾಸಬಲದಿಂದ ಅವರು ಮಾತುಕತೆಯಾಡಲು ಸಾಕಾದಷ್ಟು ಇಂಗ್ಲಿಷನ್ನು ಕಲಿತಿದ್ದರು. ಆದರೆ ಈ ಜ್ಞಾನದ ಸಹಾಯದಿಂದ ತಮ್ಮ ಕೆಲಸವೆಲ್ಲವನ್ನೂ—ಬ್ಯಾಂಕ್ ಮ್ಯಾನೇಜರುಗಳೊಡನೆ ಲೇವಾದೇವಿ ನಡೆಸುವುದಾಗಲಿ, ಐರೋಪ್ಯ ವರ್ತಕರೊಡನೆ ವ್ಯಾಪಾರವಾಡುವುದಾಗಲಿ ಅಥವಾ ವಕೀಲರಿಗೆ ಮೊಕದ್ದಮೆಯ ವಿಷಯಗಳನ್ನು ತಿಳಿಸುವುದಾಗಲಿ—ನಡೆಸುತ್ತಿದ್ದರು. ಭಾರತೀಯರು ಅವರನ್ನು ಬಹು ಮನ್ನಣೆಯಿಂದ ಕಾಣುತ್ತಿದ್ದರು. ಅವರ ಅಂಗಡಿಯು ಭಾರತೀಯರ ಅಂಗಡಿಗಳಲ್ಲಿ ಎಲ್ಲಕ್ಕಿಂತ ದೊಡ್ಡದಾಗಿದ್ದಿತು—ಅಥವಾ ಎಲ್ಲಕ್ಕಿಂತ ದೊಡ್ಡ

ಅಂಗಡಿಗಳಲ್ಲಿ ಒಂದಾಗಿದ್ದಿತು. ಇಷ್ಟೆಲ್ಲಾ ಅನುಕೂಲಗಳ ಮಧ್ಯೆ ಸೇಠರಲ್ಲಿ ಒಂದು ಕುಂದಕವಿದ್ದಿತು—ಅವರು ಸಂಶಯಪಡುವ ಸ್ವಭಾವದವ ರಾಗಿದ್ದರು.

ಅವರು ಇಸ್ಲಾಮ್ ಧರ್ಮಕ್ಕಾಗಿ ಅಭಿಮಾನಪಡುತ್ತಿದ್ದರು. ಆ ಧರ್ಮದ ತಪ್ಪುಗಳ ವಿಚಾರವಾಗಿ ಮಾತನಾಡಲು ಅವರಿಗೆ ಬಹು ಇಷ್ಟ. ಅವರಿಗೆ ಅರಬ್ಬಿಭಾಷೆಯು ಬರದಿದ್ದರೂ ಅವರಿಗೆ ಕುರಾನಿನಲ್ಲಿ ಮತ್ತು ಸಾಮಾನ್ಯವಾಗಿ ಇಸ್ಲಾಮ್ ಧರ್ಮಕ್ಕೆ ಸಂಬಂಧಪಟ್ಟ ಸಾಹಿತ್ಯದಲ್ಲಿ ಒಳ್ಳೆಯ ಪರಿಶ್ರಮವಿದ್ದಿತು. ದೃಷ್ಟಾಂತಗಳಂತೂ ಅವರ ನಾಲಿಗೆಯಲ್ಲಿಯೇ ನಾಟ್ಯವಾಡುತ್ತಿದ್ದುವು. ಅವರ ಸಹವಾಸದಿಂದ ನಾನು ಇಸ್ಲಾಮಿನ ವ್ಯಾವಹಾರಿಕ ಜ್ಞಾನವನ್ನು ತಕ್ಕಮಟ್ಟಿಗೆ ಸಂಪಾದಿಸಿದೆನು.

ನಮ್ಮಿಬ್ಬರಿಗೂ ಹೆಚ್ಚು ಪರಿಚಯವುಂಟಾದಮೇಲೆ ಧರ್ಮಸಂಬಂಧವಾಗಿ ನಮ್ಮ ಮಧ್ಯೆ ದೀರ್ಘವಾದ ಚರ್ಚೆಗಳು ನಡೆಯುತ್ತಿದ್ದುವು.

ನಾನು ಅಲ್ಲಿಗೆ ತಲಪಿದ ಎರಡನೆಯ ಅಥವಾ ಮೂರನೆಯ ದಿನ ಅವರು ನನ್ನನ್ನು ಡರ್ಬನಿನ ನ್ಯಾಯಸ್ಥಾನಕ್ಕೆ ಕರೆದುಕೊಂಡುಹೋದರು. ಅಲ್ಲಿ ಅವರು ನನಗೆ ಕೆಲವು ಮಂದಿಗು ಪರಿಚಯಮಾಡಿಕೊಟ್ಟು ನನ್ನನ್ನು ಅವರ ವಕೀಲರ ಬಳಿ ಕೂಡಿಸಿದರು. ನ್ಯಾಯಾಧಿಪತಿಯು ನನ್ನ ಕಡೆಯೇ ನೋಡುತ್ತಿದ್ದು ಕಡೆಗೆ ನನಗೆ ರುಮಾಲನ್ನು ತೆಗೆಯಬೇಕೆಂದು ಹೇಳಿದರು. ನಾನು ಇದಕ್ಕೆ ಒಪ್ಪದೆ ನ್ಯಾಯಸ್ಥಾನವನ್ನು ಬಿಟ್ಟು ಹೊರಟುಹೋದೆನು.

ನನ್ನ ಹಣೆಯಲ್ಲಿ ಇಲ್ಲಿಯೂ ಜಗಳವಾಡುವುದು ಬರೆದಿದ್ದಿತು. ಕೆಲವು ಭಾರತೀಯರಿಗೆ ರುಮಾಲನ್ನು ತೆಗೆಯಬೇಕೆಂದು ಏಕೆ ಹೇಳುವರೆಂಬುದನ್ನು ಅಬ್ದುಲ್ಲಾಸೇಠರು ನನಗೆ ತಿಳಿಸಿದರು. ಮುಸಲ್ಮಾನರ ಉಡುಪನ್ನು ತೊಟ್ಟಿರುವವರು ಮುಸಲ್ಮಾನೀ ರುಮಾಲನ್ನು ಇಟ್ಟುಕೊಂಡಿರಬಹುದು, ಆದರೆ ಇತರ ಭಾರತೀಯರು ನ್ಯಾಯಸ್ಥಾನದೊಳಕ್ಕೆ ಬಂದೊಡನೆಯೇ ರುಮಾಲನ್ನು ತೆಗೆಯಲೇಬೇಕಾಗಿದ್ದಿತು.

ಈ ಸೂಕ್ಷ್ಮ ಭೇದವನ್ನು ತಿಳಿಸಬೇಕಾದರೆ ಕೆಲವು ವಿಷಯಗಳನ್ನು ವಿವರವಾಗಿ ಹೇಳಬೇಕು. ಅಲ್ಲಿನ ಭಾರತೀಯರಲ್ಲಿ ಬೇರೆ ಬೇರೆ ಪಂಗಡಗಳಿದ್ದುವೆನ್ನುವುದು ನನಗೆ ಈ ಎರಡು ಮೂರು ದಿವಸಗಳಲ್ಲಿ ಕಂಡು

ಬಂದಿತು. ಮುಸಲ್ಮಾನ ವರ್ತಕರದೊಂದು ಗುಂಪು. ಇವರು ತಮ್ಮನ್ನು ಅರಬ್ಬಿಯವರೆಂದು ಕರೆದುಕೊಳ್ಳುತ್ತಿದ್ದರು. ಇನ್ನೊಂದು ಗುಮಾಸ್ತರ ಪಂಗಡ; ಪಾರಸೀ ಗುಮಾಸ್ತರದು ಮತ್ತೊಂದು. ಹಿಂದೂ ಗುಮಾಸ್ತರು ತಾವು 'ಅರಬ್ಬಿ'ಯವರ ಜೊತೆಗೆ ಸೇರಿದಹೊರತು ಅಲ್ಲಿಯೂ ಇಲ್ಲ ಇಲ್ಲಿಯೂ ಇಲ್ಲವಾಗಿದ್ದಿತು. ಪಾರಸೀ ಗುಮಾಸ್ತರು ತಮ್ಮನ್ನು ತಾವು 'ಪರ್ಶಿಯನ'ರೆಂದು ಕರೆದುಕೊಳ್ಳುತ್ತಿದ್ದರು. ಈ ಮೂರು ಪಂಗಡದವರೂ ಒಬ್ಬರಲ್ಲೊಬ್ಬರು ತಕ್ಕಮಟ್ಟಿಗೆ ಬಳಕೆಯುಳ್ಳವರಾಗಿದ್ದರು. ಈ ಮೂರು ಪಂಗಡಗಳಿಗಿಂತಲೂ ಬಹಳ ದೊಡ್ಡದಾದ ಪಂಗಡದಲ್ಲಿ ತಮಿಳು, ತೆಲುಗು ಮತ್ತು ಉತ್ತರ ಹಿಂದೂಸ್ಥಾನದ ಕರಾರಿನ ಕೆಲಸಗಾರರೂ ಕರಾರಿನಿಂದ ಬಿಡುಗಡೆ ಹೊಂದಿದ ಕೆಲಸಗಾರರೂ ಇದ್ದರು. ಕರಾರಿನ ಕೂಲಿಗಾರರೆಂದರೆ ಐದುವರ್ಷ ಕೂಲಿ ಕೆಲಸ ಮಾಡಲು ಒಪ್ಪಂದ (ಅಗ್ರೀಮೆಂಟ್) ಮಾಡಿಕೊಂಡು ನೇಟಾಲಿಗೆ ಹೋದವರು. 'ಅಗ್ರೀಮೆಂಟ್' ಎಂಬ ಇಂಗ್ಲಿಷ್ ಪದವು ಕೆಟ್ಟುಹೋಗಿ 'ಗಿರ್ಮಿಟ್' ಎಂದಾಗಿ ಅದರಿಂದ ಈ ಜನರಿಗೆ 'ಗಿರ್ಮಿಟಿಯ'ರು ಎಂಬ ಹೆಸರುಬಂದಿತು. ಈ ಸಮೂಹದೊಡನೆ ಹಿಂದೆ ಹೇಳಿದ ಮೂರು ಪಂಗಡದವರೂ ಉದ್ಯೋಗದ ಸಲುವಾಗಿ ಹೊರತು ಬೇರೆ ವಿಧವಾಗ ಸಂಬಂಧವನ್ನು ಬೆಳೆಸುತ್ತಿರಲಿಲ್ಲ. ಈ ಕೆಲಸಗಾರರನ್ನು ಫರಂಗಿಯವರು 'ಕೂಲಿ' ಗಳೆಂದು ಕರೆಯುತ್ತಿದ್ದರು. ಮತ್ತು ಇವರ ಸಂಖ್ಯೆಯು ಇತರ ಭಾರತೀಯರ ಸಂಖ್ಯೆಗಿಂತ ಹೆಚ್ಚಾಗಿದ್ದುದರಿಂದ ಎಲ್ಲಾ ಭಾರತೀಯರನ್ನೂ 'ಕೂಲಿ' ಗಳೆಂದೂ 'ಸಾಮಿ'ಗಳೆಂದೂ ಕರೆಯುತ್ತಿದ್ದರು. ಅನೇಕ ತಮಿಳು ಹೆಸರುಗಳ ಕೊನೆಯಲ್ಲಿ 'ಸಾಮಿ' ಎನ್ನುವುದು ಇರುವುದೇ ಇದಕ್ಕೆ ಕಾರಣ. ಈ 'ಸಾಮಿ' ಎನ್ನುವುದು ಸಂಸ್ಕೃತದ 'ಸ್ವಾಮಿ' ಎನ್ನುವುದರ ರೂಪಾಂತರ. 'ಸ್ವಾಮಿ' ಎನ್ನುವುದರ ಅರ್ಥವು ಮಾಲಿಕನೆಂದು. ಹೀಗೆ ಕರೆದಾಗ ಯಾವ ಭಾರತೀಯನಿಗಾದರೂ ಸಿಟ್ಟುಬಂದರೆ, ಅವನಿಗೆ ಸಾಕಾದಷ್ಟು ಚಾತುರ್ಯವಿದ್ದರೆ, "ನೀವು ನನ್ನನ್ನು 'ಸಾಮಿ' ಎಂದು ಕರೆಯುತ್ತೀರಿ. ಆದರೆ ಇದಕ್ಕೆ ಯಜಮಾನನೆಂದು ಅರ್ಥವೆಂಬುದನ್ನೇಕೆ ಮರೆತಿರಿ? ನಾನೇನೂ ನಿಮ್ಮ ಯಜಮಾನನಲ್ಲವಲ್ಲ!" ಎಂದು ಹೇಳು

ತ್ತಿದ್ದನು. ಇದನ್ನು ಕೇಳಿ ಕೆಲವು ಐರೋಪ್ಯರಿಗೆ ಅಳುಕುತ್ತಿದ್ದಿತು. ಕೆಲವರು ಇದರಿಂದ ಸಿಟ್ಟಿಗೆದ್ದು ಚೆನ್ನಾಗಿ ಬಯ್ಯುತ್ತಿದ್ದರು. ಇನ್ನು ಕೆಲವರು ಸಾಧ್ಯವಿದ್ದರೆ ಹೊಡೆದೂ ಹೊಡೆಯುತ್ತಿದ್ದರು. ಏಕೆಂದರೆ 'ಸಾಮಿ' ಎನ್ನುವುದು ಇವರ ಅಭಿಪ್ರಾಯದಲ್ಲಿ ಕೇವಲ ತಿರಸ್ಕಾರದ ಶಬ್ದವಾಗಿದ್ದಿತು. ಇದರ ಅರ್ಥವನ್ನು ಯಜಮಾನನೆಂದು ಮಾಡಿದರೆ ಹಾಗೆ ಕರೆದವರನ್ನು ಅವಮಾನಪಡಿಸಿದಂತಾಗಲಿಲ್ಲವೆ !

ಹೀಗಿದ್ದುದರಿಂದ ನನಗೆ 'ಕೂಲಿ ಬ್ಯಾರಿಸ್ಟರ್' ಎಂದು ಹೆಸರಾಯಿತು. ವರ್ತಕರೆಲ್ಲರನ್ನೂ 'ಕೂಲಿ ವರ್ತಕ'ರೆಂದು ಕರೆಯುತ್ತಿದ್ದರು. ಹೀಗೆ 'ಕೂಲಿ' ಎಂಬ ಮಾತಿನ ಮೂಲ ಅರ್ಥವು ಮಾಯವಾಗಿ ಅದು ಅಲ್ಲಿದ್ದ ಹಿಂದೂಸ್ಥಾನದವರೆಲ್ಲರನ್ನೂ ಕರೆಯುವ ಹೆಸರಾಯಿತು. ಯಾವನಾದರೂ ಮುಸಲ್ಮಾನ ವರ್ತಕನನ್ನು ಹೀಗೆ ಕರೆದರೆ ಆತನು ಸಿಟ್ಟಿಗೆದ್ದು "ನಾನು ಕೂಲಿಯಲ್ಲ. ನಾನು ಅರಬ್ಬಿಯವನು." ಅಥವಾ "ನಾನು ವರ್ತಕನು." ಎಂದು ಹೇಳುತ್ತಿದ್ದನು. ಫರಂಗಿಯವನು ವಿನಯವುಳ್ಳವನಾಗಿದ್ದರೆ ಹಾಗೆ ಕರೆದುದಕ್ಕಾಗಿ ಕ್ಷಮೆ ಬೇಡುತ್ತಿದ್ದನು. ರುಮಾಲನ್ನು ಹಾಕಿಕೊಳ್ಳುವ ಪ್ರಶ್ನೆಯು ಈ ಪರಿಸ್ಥಿತಿಯಲ್ಲಿ ಬಹು ಮಹತ್ವವುಳ್ಳದಾಗಿದ್ದಿತು. ರುಮಾಲನ್ನು ತೆಗೆಯುವದೆಂದರೆ ಮಾನಭಂಗವನ್ನು ಸಹಿಸಿದಂತಾಗುತ್ತಿದ್ದಿತು. ಆದುದರಿಂದ ದೇಶೀಯ ರುಮಾಲಿಗೆ ನಮಸ್ಕಾರ ಹಾಕಿ ಫರಂಗಿ ಟೋಪಿ (ಹ್ಯಾಟ್) ಯನ್ನು ಹಾಕಿಕೊಂಡರೆ ಮಾನಭಂಗವನ್ನು ಸಹಿಸುವ ಪ್ರಸಂಗವು ಒದಗದಿರುವುದೇ ಅಲ್ಲದೆ ಈ ಜಗಳವನ್ನೂ ಚರ್ಚೆಯನ್ನೂ ತಪ್ಪಿಸಿಕೊಳ್ಳಬಹುದೆಂದು ನಾನು ಯೋಚಿಸಿದೆನು.

ಆದರೆ ಅಬ್ದುಲ್ಲಾ ಸೇಠರಿಗೆ ಈ ಆಲೋಚನೆಯು ಸರಿಬೀಳಲಿಲ್ಲ. ಅವರು, "ನೀವು ಹಾಗೇನಾದರೂ ಮಾಡಿದರೆ ಅದರಿಂದ ಅನರ್ಥಕ್ಕೆ ಕಾರಣವಾಗುತ್ತದೆ. ದೇಶೀಯ ರುಮಾಲನ್ನೇ ಹಾಕಿಕೊಂಡಿರಬೇಕೆಂದು ಮನಸ್ಸುಮಾಡಿರುವವರ ಪಾಡು ಇದರಿಂದ ಕಷ್ಟವಾಗುತ್ತದೆ. ನಿಮಗೆ ರುಮಾಲು ಒಪ್ಪುತ್ತದೆ. ಫರಂಗಿ ಟೋಪಿಯನ್ನು ನೀವು ಹಾಕಿಕೊಂಡರೆ ನೋಡಿದವರೆಲ್ಲರೂ ನಿಮ್ಮನ್ನು "ವೇಟರ್" [ಫರಂಗಿಯವರ ಹೋಟಲಿನಲ್ಲಿರುವ ಪರಿಚಾರಕ] ಎಂದು ತಿಳಿದುಕೊಳ್ಳುತ್ತಾರೆ" ಎಂದು ಹೇಳಿದರು.

ಈ ಸಲಹೆಯಲ್ಲಿ ಪ್ರಪಂಚಜ್ಞಾನವೂ ಸ್ವದೇಶಾಭಿಮಾನವೂ ಸ್ವಲ್ಪಮಟ್ಟಿಗೆ ಸಂಕುಚಿತ ದೃಷ್ಟಿಯೂ ಕಾಣಬರುತ್ತಿದ್ದಿತು. ಇದರಲ್ಲಿಯ ಪ್ರಪಂಚ ಜ್ಞಾನವು ಸುಲಭವಾಗಿಯೇ ಕಾಣುತ್ತದೆ. ದೇಶಾಭಿಮಾನವಿಲ್ಲದೆ ಇಷ್ಟು ಆಗ್ರಹದಿಂದ ದೇಶೀಯ ರುಮಾಲನ್ನು ಹಾಕಿಕೊಳ್ಳಬೇಕೆಂದು ಅವರು ಹೇಳುತ್ತಿರಲಿಲ್ಲ. 'ವೆಯ್ಟರು'ಗಳ ವಿಚಾರವಾಗಿ ತಿರಸ್ಕಾರ ದಿಂದ ಮಾತನಾಡಿದುದರಿಂದ ಅವರು ಅಷ್ಟೇನೂ ವಿಶಾಲಹೃದಯರಲ್ಲ ವೆನ್ನುವುದು ವ್ಯಕ್ತಪಟ್ಟಿತು. ಭಾರತೀಯ 'ಗಿರ್ಮಿಟಿಯ'ರಲ್ಲಿ ಹಿಂದೂ, ಮುಸಲ್ಮಾನ ಮತ್ತು ಈಸಾಯಿಮಾ, ಈ ರೀತಿಯಾಗಿ ಮೂರು ವಿಭಾಗ ಗಳಿದ್ದುವು. 'ಗಿರ್ಮಿಟಿಯ'ರಲ್ಲಿ ಈಸಾಯಿಮಾ ಮತವನ್ನು ಅವಲಂಬಿಸಿದ ವರ ಮಕ್ಕಳು ಈ ಕಡೆಯ ಪಂಗಡಕ್ಕೆ ಸೇರಿದ್ದರು. ೧೮೯೩ನೆಯ ಇಸವಿ ಯಲ್ಲಿ ಕೂಡ ಇವರ ಸಂಖ್ಯೆಯು ಹೆಚ್ಚಾಗಿದ್ದಿತು. ಇವರೆಲ್ಲರೂ ಆಂಗ್ಲರೀತಿಯ ಪೋಷಾಕನ್ನೇ ಹಾಕುತ್ತಿದ್ದರು. ಇವರಲ್ಲಿ ಹೆಚ್ಚುಮಂದಿ ಹೋಟಲುಗಳಲ್ಲಿ ಸೇವಕರಾಗಿದ್ದು ಹೊಟ್ಟೆಹೊರೆಯುತ್ತಿದ್ದರು. ಇವರನ್ನು ಮನಸ್ಸಿನಲ್ಲಿಟ್ಟುಕೊಂಡೇ ಅಬ್ದುಲ್ಲಾ ಸೇಠರು ಫರಂಗಿ ಟೋ ಪಿಯ ವಿಚಾರವಾಗಿ ಟೀಕೆಮಾಡಿದುದು. ಹೋಟಲಿನಲ್ಲಿ ಊಳಿಗದವ ನಾಗಿರುವುದು ಮಾನಕ್ಕೆ ಕಡಿಮೆಯೆಂದು ಎಣಿಸುತ್ತಿದ್ದರು. ಈಗಲೂ ಅನೇಕ ಜನರ ಮನಸ್ಸಿನಲ್ಲಿ ಈ ಅಭಿಪ್ರಾಯವು ನೆಲೆಸಿದೆ.

ಒಟ್ಟಿನಮೇಲೆ ಅಬ್ದುಲ್ಲಾ ಸೇಠರ ಬುದ್ಧಿವಾದವು ನನ್ನ ಮನಸ್ಸಿಗೆ ಒಪ್ಪಿತು. ನನ್ನ ರುಮಾಲಿನ ವಿಷಯವಾಗಿ ಕೋರ್ಟಿನಲ್ಲಿ ನಡೆದ ಘಟ ನೆಯ ವಿಚಾರವಾಗಿ ವೃತ್ತಪತ್ರಿಕೆಗಳಿಗೆ ಬರೆದು ಆ ಸಂದರ್ಭದಲ್ಲಿ ನನ್ನ ತಪ್ಪೇನೂ ಇಲ್ಲವೆಂದು ಸಾಧಿಸಿದೆನು. ಅವುಗಳಲ್ಲಿ ಈ ಪ್ರಶ್ನೆಯು ಬಹು ವಾಗಿ ಚರ್ಚಿಸಲ್ಪಟ್ಟಿತು. ವೃತ್ತಪತ್ರಿಕೆಗಳು ನನ್ನನ್ನು 'ಅನಿಷ್ಟನಾದ ಆಗಂತುಕ' ಎಂದು ಕರೆದರು. ಹೀಗೆ ಅನಿರೀಕ್ಷಿತವಾಗಿ ನಾನು ದಕ್ಷಿಣ ಆಫ್ರಿಕಕ್ಕೆ ಬಂದಿಳಿದ ಅಲ್ಪಕಾಲದಲ್ಲಿಯೇ ಅಲ್ಲಿ ಪ್ರಸಿದ್ಧನಾದೆನು. ಕೆಲವರು ನನ್ನ ಪಕ್ಷವನ್ನು ವಹಿಸಿದರು. ಇನ್ನು ಕೆಲವರು ನನ್ನನ್ನು ಧೂರ್ತನೆಂದು ಬಲವಾಗಿ ನಿಂದಿಸಿದರು.

ನನ್ನ ರುಮಾಲು ಸ್ವಲ್ಪ ಹೆಚ್ಚು ಕಡಿಮೆ ನಾನು ದಕ್ಷಿಣ ಆಫ್ರಿಕ ದಲ್ಲಿರುವವರೆಗೂ ನನ್ನ ಜೊತೆಯಲ್ಲಿಯೇ ಇದ್ದಿತು. ಯಾವಾಗ ಮತ್ತು ಏಕೆ ಅದನ್ನು ಆ ದೇಶದಲ್ಲಿ ಹಾಕಿಕೊಳ್ಳುವುದನ್ನು ಬಿಟ್ಟೆನು ಎಂಬುದು ಮುಂದೆ ಗೊತ್ತಾಗುವುದು.



೮

# ಪ್ರಿಟೋರಿಯಾಕ್ಕೆ ಹೋಗುವಾಗ

ಡರ್ಬನಿನಲ್ಲಿದ್ದ ಭಾರತೀಯ ಈಸಾಯಿಗಳೊಡನೆ ನನಗೆ ಜಾಗ್ರತೆಯಾಗಿಯೇ ಪರಿಚಯವಾಯಿತು. ಅಲ್ಲಿನ ನ್ಯಾಯಸ್ಥಾನದಲ್ಲಿ ದ್ವಿಭಾಷಿಗಳಾಗಿದ್ದ ಮ॥ ಪಾಲರು ರೋಮನ್ ಕ್ಯಾಥೊಲಿಕ್ ಸಂಪ್ರದಾಯದವರಾಗಿದ್ದರು. ಇವರ ಪರಿಚಯವನ್ನೂ ಮತ್ತು ಪ್ರಾಟೆಸ್ಟೆಂಟ್ ಮಿಷನಿನ ಶಿಕ್ಷಕರಾಗಿದ್ದ ದಿವಂ. ಸುಭಾನ್ ಗಾಡ್‌ಫ್ರೆಯವರ ಪರಿಚಯವನ್ನೂ ನಾನು ಮಾಡಿಕೊಂಡೆನು. ಇವರ ಪುತ್ರರಾದ ಮ॥ ಜೇಮ್ಸ್ ಗಾಡ್‌ಫ್ರೆಯವರು ಹಿಂದಿನ ವರ್ಷ ಹಿಂದೂಸ್ಥಾನಕ್ಕೆ ಬಂದು ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಪ್ರತಿನಿಧಿಗಳಲ್ಲಿ (ಉ) ಒಬ್ಬರಾಗಿದ್ದರು. ಹೀಗೆಯೇ ಇದೇ ಸಮಯದಲ್ಲಿ ದಿವಂ. ಪಾರ್ಸಿ ರುಸ್ತುಮ್‌ಜಿ ಮತ್ತು ದಿವಂ. ಆದಮ್‌ಜಿ ಮಿಯಾ ಖಾನ್ ಇವರ ಗುರುತೂ ಆಯಿತು. ಈ ಮಿತ್ರರೆಲ್ಲಾ ಉದ್ಯೋಗದ ಸಲುವಾಗಿ ಹೊರತು ಒಬ್ಬರನ್ನೊಬ್ಬರು ಇದುವರೆಗೂ ಕಂಡಿರಲಿಲ್ಲ. ಆಮೇಲೆ ಇವರು ಒಟ್ಟಿಗೆ ಸೇರಿದರೆನ್ನುವುದು ಮುಂದೆ ಕಂಡು ಬರುತ್ತದೆ.

ಹಾಗೆ ನಾನು ನನ್ನ ಪರಿಚಯವನ್ನು ಬೆಳೆಸುತ್ತಿರುವಷ್ಟರಲ್ಲಿ ದಾದಾ ಅಬ್ದುಲ್ಲಾ ಕಂಪೆನಿಯವರಿಗೆ ಅವರ ವಕೀಲರಿಂದ ಮೊಕದ್ದಮೆಗೆ ಸಿದ್ಧಪಡಿಸಿಕೊಳ್ಳಬೇಕೆಂದೂ ಸ್ವತಃ ಅಬ್ದುಲ್ಲಾ ಸೇಠರಾಗಲಿ ಅವರ ಪ್ರತಿನಿಧಿಯಾಗಲಿ ಪ್ರಿಟೋರಿಯಾಕ್ಕೆ ಬರಬೇಕೆಂದೂ ಕಾಗದ ಬಂದಿತು.

ಅಬ್ದುಲ್ಲಾ ಸೇಠರು ನನಗೆ ಈ ಕಾಗದವನ್ನು ಓದಲು ಕೊಟ್ಟು "ನೀವು ಪ್ರಿಟೋರಿಯಾಕ್ಕೆ ಹೋಗುವಿರಾ?" ಎಂದು ಕೇಳಿದರು. "ನಿಮ್ಮಿಂದ ಮೊಕದ್ದಮೆಯ ವಿಷಯವನ್ನು ತಿಳಿದುಕೊಂಡಮೇಲೆ ಮಾತ್ರ ಹೇಳಬಲ್ಲೆನು. ಅಲ್ಲಿ ಹೋಗಿ ಏನು ಮಾಡಬೇಕೆನ್ನುವುದು ಈಗ ನನಗೆ ಗೊತ್ತಿಲ್ಲ." ಎಂದು ನಾನು ಉತ್ತರ ಕೊಟ್ಟೆನು. ಆಗ ಅವರು

ನನಗೆ ಮೊಕದ್ದಮೆಯನ್ನು ವಿವರಿಸಬೇಕೆಂದು ಅವರ ಗುಮಾಸ್ತರಿಗೆ ಹೇಳಿದರು.

ಮೊಕದ್ದಮೆಯನ್ನು ತಿಳಿದುಕೊಳ್ಳುವುದಕ್ಕೆ ಪ್ರಾರಂಭಿಸುತ್ತಲೂ "ಶ್ರೀ ಗಣೇಶಾಯ ನಮಃ" ದಿಂದ ನೊದಲುಮಾಡಬೇಕೆಂದು ನನಗೆ ಗೊತ್ತಾಯಿತು. ನಾನು ಜಾಂಜಿಬಾರಿನಲ್ಲಿದ್ದ ಅಲ್ಪಕಾಲದಲ್ಲಿ ಒಂದು ದಿನ ಅಲ್ಲಿನ ನ್ಯಾಯಸ್ಥಾನದ ಕೆಲಸವನ್ನು ನೋಡುವುದಕ್ಕೆ ಹೋಗಿದ್ದೆನು. ಒಬ್ಬ ಪಾರಸಿ ವಕೀಲನು ಸಾಕ್ಷಿಯನ್ನು ಪಾಟಿಸವಾಲು ಮಾಡುವಾಗ ಜಮಾ ಖರ್ಚಿನ ವಿಚಾರವಾಗಿ ಪ್ರಶ್ನೆಗಳನ್ನು ಕೇಳುತ್ತಿದ್ದನು. ಅದೊಂದೂ ನನಗೆ ಅರ್ಥವಾಗಲಿಲ್ಲ. ಜಮಾ ಖರ್ಚಿನ ಕೆಲಸವನ್ನು ನಾನು ಶಾಲೆಯಲ್ಲಾಗಲಿ ವಿಲಾಯತಿಯಲ್ಲಿದ್ದಾಗಲಾಗಲಿ ಕಲಿತಿರಲಿಲ್ಲ.

ನಾನು ಮಾಡುವುದಕ್ಕಾಗಿ ದಕ್ಷಿಣ ಆಫ್ರಿಕಕ್ಕೆ ಬಂದ ಈ ಮೊಕದ್ದಮೆಯ ಕೆಲಸವೆಲ್ಲವೂ ಜಮಾಖರ್ಚಿನದಾಗಿದ್ದಿತು. ಜಮಾಖರ್ಚಿನ ವಿಚಾರ ಗೊತ್ತಿರುವವರಿಗೆ ಮಾತ್ರ ಈ ಮೊಕದ್ದಮೆಯನ್ನು ತಿಳಿದುಕೊಳ್ಳುವುದೂ ತಿಳಿಯ ಹೇಳುವುದೂ ಸಾಧ್ಯವಾಗಿದ್ದಿತು. ಗುಮಾಸ್ತನು ಇದು ಜಮಾ, ಅದು ಖರ್ಚು ಎಂದು ಹೇಳುತ್ತಾ ಹೋದ ಹಾಗೆಲ್ಲಾ ನನ್ನ ಬುದ್ಧಿಭ್ರಮೆಯು ಹೆಚ್ಚಾಗುತ್ತ ಬಂದಿತು. 'ಪಿ. ನೋಟ್' ಎಂದರೇನೆಂದು ನನಗೆ ಗೊತ್ತಿರಲಿಲ್ಲ. ಶಬ್ದಕೋಶದಲ್ಲಿ ಈ ಮಾತು ನನಗೆ ಸಿಕ್ಕಲೇ ಇಲ್ಲ. ಗುಮಾಸ್ತನಿಗೆ ನನ್ನ ಅಜ್ಞಾನವನ್ನು ತಿಳಿಸಿ ಆತನಿಂದ 'ಪಿ. ನೋಟ್' ಎಂದರೆ ಪ್ರಾಮಿಸರಿನೋಟು (ವಾಗ್ದಾನ ಪತ್ರ) ಎಂದು ತಿಳಿದುಕೊಂಡೆನು. ಜಮಾಖರ್ಚಿನ ವಿಷಯಗಳನ್ನೊಳಗೊಂಡ ಒಂದು ಪುಸ್ತಕವನ್ನು ಕೊಂಡು ಕೊಂಡು ಓದಿದೆನು. ಇದರಿಂದ ನನಗೆ ಸ್ವಲ್ಪ ಭರವಸೆಯುಂಟಾಯಿತು. ಮೊಕದ್ದಮೆಯನ್ನು ತಿಳಿದುಕೊಂಡೆನು ಅಬ್ದುಲ್ಲಾ ಶೇಠರಿಗೆ ಲೆಕ್ಕವನ್ನಿಡುವುದು ಗೊತ್ತಿಲ್ಲದಿದ್ದರೂ ಅವರು ತಮ್ಮ ಅತಿಶಯ ವ್ಯಾವಹಾರಿಕಜ್ಞಾನದಿಂದ ಜಮಾ ಖರ್ಚಿನ ತೊಡಕುಗಳನ್ನು ಶೀಘ್ರವಾಗಿ ಬಿಡಿಸುತ್ತಿದ್ದರೆಂಬುದನ್ನು ನಾನು ಕಂಡೆನು. ನಾನು ಪ್ರಿಟೋರಿಯಾಕ್ಕೆ ಹೋಗಲು ಸಿದ್ಧನಾಗಿರುವೆನೆಂದು ಅವರಿಗೆ ಹೇಳಿದೆನು

"ನೀವು ಅಲ್ಲಿ ಎಲ್ಲಿರುತ್ತೀರಿ?" ಎಂದು ಸೇಠರು ಕೇಳಿದರು.

"ನೀವುಎಲ್ಲಿ ಇರುವಂತೆ ಹೇಳುತ್ತೀರೋ ಅಲ್ಲಿ."

"ಹಾಗಾದರೆ ನಾನು ನಮ್ಮ ವಕೀಲರಿಗೆ ಬರೆಯುತ್ತೇನೆ. ನೀವು ಅಲ್ಲಿರುವುದಕ್ಕೆ ಅವರು ಏರ್ಪಾಡು ಮಾಡುತ್ತಾರೆ. ಪ್ರಿಟೋರಿಯಾದಲ್ಲಿ ನನ್ನ ಮೆಮನ್ ಸ್ನೇಹಿತರಿಗೂ ಬರೆಯುತ್ತೇನೆ. ಆದರೆ ನೀವು ಅವರ ಜೊತೆಯಲ್ಲಿರುವುದು ಅನುಚಿತವೆಂದು ನನಗೆ ತೋರುತ್ತದೆ. ಇದಿರು ಪಕ್ಷದವರು ಪ್ರಿಟೋರಿಯಾದಲ್ಲಿ ಬಹಳ ಪ್ರಬಲರಾಗಿದ್ದಾರೆ. ಅವರಲ್ಲಿ ಯಾರಾದರೂ ನಮ್ಮ ಏಕಾಂತವಾದ ಕಾಗದ ಪತ್ರಗಳನ್ನು ಓದಿದ್ದೇ ಆದರೆ ಅದರಿಂದ ನಮಗೆ ಮೊಕದ್ದಮೆಯಲ್ಲಿ ಬಹಳ ಕೇಡುಂಟಾಗಬಹುದು. ನೀವು ಅವರ ಹತ್ತಿರ ಸಲಿಗೆಯಿಂದಿರುವುದನ್ನು ಎಷ್ಟು ತಪ್ಪಿಸಿಕೊಂಡರೆ ಅಷ್ಟು ಒಳ್ಳೆಯದು."

"ನಿಮ್ಮ ವಕೀಲರು ಎಲ್ಲಿ ಸ್ಥಳವನ್ನು ಗೊತ್ತುಮಾಡುತ್ತಾರೋ ಅಲ್ಲಿರುತ್ತೇನೆ. ಇಲ್ಲದಿದ್ದರೆ ನಾನೇ ಸ್ವತಂತ್ರವಾದ ಸ್ಥಳವನ್ನು ಹುಡುಕಿಕೊಳ್ಳುತ್ತೇನೆ. ನೀವು ನಿಶ್ಚಿಂತರಾಗಿರಿ. ನಮ್ಮಿಬ್ಬರಲ್ಲಿರುವ ಯಾವ ಗುಟ್ಟನ್ನೂ ಒಂದು ಪ್ರಾಣಿಗೂ ಬಿಟ್ಟುಕೊಡುವುದಿಲ್ಲ. ಆದರೆ ನಾನು ಪ್ರತಿಪಕ್ಷದವರ ಪರಿಚಯವನ್ನುಂಟುಮಾಡಿಕೊಳ್ಳಬೇಕೆಂದಿರುವುದೇನೋ ನಿಜ. ಅವರೊಡನೆ ಮೈತ್ರಿಯನ್ನು ಬೆಳೆಸಬೇಕೆಂದು ನನಗೆ ಇಷ್ಟ. ಸಾಧ್ಯವಾದರೆ ನ್ಯಾಯಸ್ಥಾನಕ್ಕೆ ಹೋಗದೆಯೇ ಮೊಕದ್ದಮೆಯನ್ನು ಸರಿಪಡಿಸುವುದಕ್ಕೂ ಪ್ರಯತ್ನಪಡುತ್ತೇನೆ. ಎಷ್ಟೇ ಆಗಲಿ ತಯ್ಯಬ್ ಸೇಠರು ನಿಮ್ಮ ನೆಂಟರಲ್ಲವೆ?"

ಪ್ರತಿವಾದಿಯಾದ ದಿವಂ. ಸೇಠ್ ತಯ್ಯಬ್ ಹಾಜೀ ಖಾನ್ ಮಹಮ್ಮದರವರು ಅಬ್ದುಲ್ಲಾ ಸೇಠರಿಗೆ ಹತ್ತಿರದ ಸಂಬಂಧಿಗಳಾಗಿದ್ದರು.

ರಾಜಿ ಮಾಡಿಕೊಳ್ಳಬಹುದೆನ್ನುವುದನ್ನು ಕೇಳುತ್ತಲೂ ಸೇಠರು ಸ್ವಲ್ಪ ಗಾಬರಿಯಾದರೆಂದು ನನಗೆ ಗೊತ್ತಾಯಿತು. ಆದರೆ ನಾನು ಡರ್ಬನಿಗೆ ಬಂದು ಆಗಲೆ ಆರೇಳು ದಿವಸಗಳಾಗಿದ್ದುದರಿಂದ ಒಬ್ಬರ ಸ್ವಭಾವವು ಇನ್ನೊಬ್ಬರಿಗೆ ಗೊತ್ತಾಗುತ್ತಾ ಬಂದಿದ್ದಿತು. ಈಗ ನಾನು 'ಅಲಂಕಾರದ ಆನೆ' ಯಾಗಿರಲಿಲ್ಲ. ಸೇಠರು,

"ಹೌ...........ದು. ರಾಜಿಮಾಡಿಕೊಳ್ಳುವುದರಷ್ಟು ಒಳ್ಳೆಯದಾವುದೂ ಇಲ್ಲ. ಆದರೆ ನಾವು ಹತ್ತಿರದ ನೆಂಟರಾಗಿರುವುದರಿಂದ ಒಬ್ಬರಿಗೊಬ್ಬರು ತುಂಬ ಚೆನ್ನಾಗಿ ಗೊತ್ತು. ತಯ್ಯಬ್ ಸೇಠರು ಸುಲಭವಾಗಿ ರಾಜಿಗೆ ಒಪ್ಪಿಕೊಳ್ಳುವ ಮನುಷ್ಯರಲ್ಲ. ನಾವು ಸ್ವಲ್ಪ ಎಚ್ಚರಗೇಡಿತನದಿಂದಿದ್ದರೆ ನಮ್ಮನ್ನು ಎಲ್ಲಾ ರೀತಿಯ ವಿಷಯಗಳಿಗೂ ಒಪ್ಪಿಸಿ ಕಡೆಗೆ ನಮಗೇ ಚೊಳ್ಳೆ ಹಣ್ಣನ್ನು ತಿನ್ನಿಸಬಹುದು. ಆದುದರಿಂದ ನೀವು ಏನು ಮಾಡಿದರೂ ಎರಡುಸಲ ಯೋಚನೆಮಾಡಿ ಮಾಡಬೇಕು." ಎಂದರು.

"ಆ ವಿಷಯದಲ್ಲಿ ನೀವು ಏನೂ ಯೋಚನೆ ಮಾಡಬೇಡಿರಿ. ಮೊಕದ್ದಮೆಯ ವಿಚಾರವಾಗಿ ತಯ್ಯಬ್ ಸೇಠರೊಂದಿಗಾಗಲಿ ಅಥವಾ ಇನ್ನಾರ ಕೈಯಲ್ಲಾಗಲಿ ನಾನು ಮಾತನಾಡಬೇಕಾದುದಿಲ್ಲ. ನಾನು ಅವರಿಗೆ ಇಷ್ಟುಮಾತ್ರ ಹೇಳುತ್ತೇನೆ—'ನೀವು ನೀವೇ ಕೂಡಿ ರಾಜಿಮಾಡಿಕೊಂಡು ವಕೀಲರ ಬಾಯಿಗೆ ಹಣ ಸುರಿಯುವುದರಿಂದ ತಪ್ಪಿಸಿಕೊಳ್ಳಿ.' ಎಂದು." ಎಂದು ನಾನು ಉತ್ತರಕೊಟ್ಟೆನು.

ನಾನು ಡರ್ಬನಿಗೆ ಬಂದ ಏಳನೆಯ ದಿನವೋ ಎಂಟನೆಯ ದಿನವೋ ಅಲ್ಲಿಂದ ಹೊರಟೆನು. ಮೊದಲನೆಯ ದರ್ಜೆಯ ಟಿಕೆಟನ್ನು ನನಗಾಗಿ ಆಗಲೇ ಕೊಂಡುಕೊಂಡಿದ್ದರು. ಹಾಸಿಗೆ ಬೇಕಾಗಿದ್ದರೆ ಐದು ಷಿಲಿಂಗ್ (ಸುಮಾರು ೩||| ರೂ.) ಕೊಟ್ಟು ಇನ್ನೊಂದು ಟಿಕೆಟ್ ತೆಗೆದುಕೊಳ್ಳಬೇಕಾಗಿದ್ದಿತು. ಅಬ್ದುಲ್ಲಾ ಸೇಠರು ಈ ಟಿಕೆಟನ್ನು ತೆಗೆದುಕೊಳ್ಳಬೇಕೆಂದು ಒತ್ತಾಯಮಾಡಿದರು. ಆದರೆ ನಾನು ಹಟದಿಂದಲೂ ಜಂಭದಿಂದಲೂ ಐದು ಷಿಲಿಂಗನ್ನು ಮಿಗಿಸುವ ಉದ್ದೇಶದಿಂದಲೂ ಇದಕ್ಕೆ ಒಪ್ಪಲಿಲ್ಲ. ಸೇಠರು ನನಗೆ ಈ ರೀತಿಯಾಗಿ ಎಚ್ಚರಿಕೆ ಕೊಟ್ಟರು. "ಇಲ್ಲಿ ನೋಡಿ. ಇದು ಹಿಂದುಸ್ಥಾನವಲ್ಲ. ಈ ದೇಶದ ರೀತಿಯೇ ಬೇರೆ. ದೇವರು ನಮಗೆ ಬೇಕಾದಷ್ಟು ಕೊಟ್ಟಿರುವಾಗ ನೀವು ಜಿಪುಣರಂತಿರಬಾರದು. ನಿಮಗೆ ಏನು ಬೇಕಾದರೂ ಕೊರತೆ ಮಾಡಿಕೊಳ್ಳಬೇಡಿ."

ನಾನು ಅವರಿಗೆ ನನ್ನ ಕೃತಜ್ಞತೆಯನ್ನು ತೋರ್ಪಡಿಸಿ ಯೋಚನೆ ಮಾಡಬೇಡಿರೆಂದು ಹೇಳಿದೆನು.

ರೈಲು ನೇಟಾಲಿನ ರಾಜಧಾನಿಯಾದ ಮ್ಯಾರಿಟ್ಸ್‌ಬರ್ಗನ್ನು ಸುಮಾರು ರಾತ್ರಿ ೯ ಗಂಟೆಗೆ ತಲಪಿತು. ಈ ಸ್ಥಳದಲ್ಲಿ ಹಾಸಿಗೆಯನ್ನು ಕೊಡುತ್ತಿದ್ದರು. ಒಬ್ಬ ರೈಲ್ವೆ ನೌಕರನು ಬಂದು "ನಿಮಗೆ ಹಾಸಿಗೆ ಬೇಕೆ?" ಎಂದು ಕೇಳಿದನು. "ಬೇಡ. ನನ್ನ ಹತ್ತಿರಲೇ ಇದೆ." ಎಂದು ನಾನು ಹೇಳಿದೆನು. ಅವನು ಹೊರಟುಹೋದನು. ಇಷ್ಟರಲ್ಲಿ ಒಬ್ಬ ಪ್ರಯಾಣಿಕನು ಬಂದು ನನ್ನಕಡೆ ದುರಗುಟ್ಟಿಕೊಂಡು ನೋಡಿದನು. ನಾನು 'ಬಣ್ಣದ' ಮನುಷ್ಯನೆಂದು ಗೊತ್ತಾಗುತ್ತಲು ಆತನಿಗೆ ಅಸಮಾಧಾನವಾಯಿತು. ಆತನು ಹೊರಗೆ ಹೋಗಿ ಒಬ್ಬರು ಇಬ್ಬರು ಅಧಿಕಾರಿಗಳನ್ನು ಕರೆದುಕೊಂಡು ಬಂದನು. ಇವರಲ್ಲಿ ಒಬ್ಬರೂ ನನ್ನೊಡನೆ ಮಾತನಾಡಲಿಲ್ಲ. ಇನ್ನೊಬ್ಬ ಅಧಿಕಾರಿಯು ನನ್ನ ಬಳಿಗೆ ಬಂದು "ಹೊರಕ್ಕೆ ಬಾ. ನೀನು ಕಡೆಯ ಗಾಡಿಗೆ ಹೋಗಬೇಕು." ಎಂದು ಹೇಳಿದನು.

"ನನ್ನ ಹತ್ತಿರ ಮೊದಲನೆಯ ದರ್ಜೆಯ ಟಿಕೆಟ್ ಇದೆ." ಎಂದು ನಾನು ಹೇಳಿದೆನು.

"ಇದ್ದರೆ ಇರಲಿ. ನೀನು ಹಿಂದಿನ ಗಾಡಿಗೆ ಹೋಗಬೇಕು." ಎಂದು ಆತನು ಹೇಳಿದನು.

"ನಾನು ಡರ್ಬನಿನಲ್ಲಿ ಈ ಗಾಡಿಯನ್ನು ಹತ್ತಿದಾಗ ಯಾರೂ ಅಡ್ಡಿಮಾಡಲಿಲ್ಲ. ನಾನು ಈ ಗಾಡಿಯಲ್ಲಿಯೇ ಹೋಗಬೇಕು."

"ಅದೆಲ್ಲಾ ನಡೆಯುವುದಿಲ್ಲ. ನೀನು ಈ ಗಾಡಿಯಿಂದ ಇಳಿಯಬೇಕು. ತಂಟೆಮಾಡಿದರೆ ಪೋಲೀಸಿನವನನ್ನು ಕರೆದು ಇಳಿಸಬೇಕಾಗುತ್ತದೆ." ಎಂದು ಅಧಿಕಾರಿಯು ಹೇಳಿದನು.

"ಹಾಗಾದರೆ ಅವನನ್ನು ಕರೆಯಿರಿ. ನಾನಾಗಿ ನಾನೇ ಇಳಿಯುವುದಿಲ್ಲ." ಪೋಲೀಸಿನವನು ಬಂದನು. ಅವನು ನನ್ನ ಕೈ ಹಿಡಿದುಕೊಂಡು ಎಳೆದು ನನ್ನನ್ನು ಹೊರಕ್ಕೆ ತಳ್ಳಿದನು. ನನ್ನ ಸಾಮಾನನ್ನು

ಕೂಡ ಹೊರಕ್ಕೆ ಹಾಕಿದರು. ನಾನು ಬೇರೆ ಗಾಡಿಗೆ ಹೊಗುವುದಿಲ್ಲವೆಂದು ಹೇಳಿದೆನು. ರೈಲು ಹೊರಟುಹೋಯಿತು. ನಾನು ವೆಯ್ಟಿಂಗ್ ರೂಮಿಗೆ (ಪ್ರಯಾಣಿಕರು ರೈಲ್ ಬರುವುದಕ್ಕಿಂತ ಮುಂಚೆ ಕಾದುಕೊಂಡಿರುವುದಕ್ಕಾಗಿ ಇರುವ ಸ್ಥಳ) ಹೋಗಿ ಕುಳಿತುಕೊಂಡೆನು. ನನ್ನ ಕೈಚೀಲವು ನನ್ನಬಳಿಯೇ ಇದ್ದಿತು. ಉಳಿದ ಸಾಮಾನುಗಳನ್ನು ನಾನು ಮುಟ್ಟಲಿಲ್ಲ. ರೈಲಿನವರು ಅವುಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡಿದ್ದರು.

ಆಗ ಚಳಿಗಾಲ. ದಕ್ಷಿಣ ಆಫ್ರಿಕದ ಎತ್ತರವಾದ ಪ್ರದೇಶಗಳಲ್ಲಿ ಚಳಿಗಾಲದಲ್ಲಿ ಚಳಿಯು ಬಹು ತೀಕ್ಷ್ಣವಾಗಿರುತ್ತದೆ. ಮ್ಯಾರಿಟ್ಸ್‌ಬರ್ಗ್ ಪಟ್ಟಣವು ಎತ್ತರವಾದ ಪ್ರದೇಶದಲ್ಲಿರುವುದರಿಂದ ಅಲ್ಲಿ ಚಳಿಯನ್ನು ಸಹಿಸುವುದು ಅತಿಕಷ್ಟವಾಗಿದ್ದಿತು. ನನ್ನ ನಿಲುವಂಗಿಯು ಉಳಿದ ಸಾಮಾನುಗಳ ಜೊತೆಯಲ್ಲಿದ್ದಿತು. ಅದನ್ನು ಕೇಳುವುದಕ್ಕೆ ನನಗೆ ಧೈರ್ಯವಿರಲಿಲ್ಲ. ಎಲ್ಲಿ ಪುನಃ ಅಪಮಾನಮಾಡುವರೋ ಎಂದು ಹೆದರಿಕೆ. ಆದುದರಿಂದ ನಾನು ಚಳಿಯಲ್ಲಿ ನಡಗುತ್ತಾ ಕುಳಿತುಕೊಂಡೆನು ಆ ಕೊಠಡಿಯಲ್ಲಿ ದೀಪವಿರಲಿಲ್ಲ. ಅರ್ಧರಾತ್ರಿಯಲ್ಲಿ ಒಬ್ಬ ಪ್ರಯಾಣಿಕನು ಬಂದನು. ಆತನಿಗೆ ನನ್ನೊಡನೆ ಮಾತನಾಡಲು ಅಭಿಲಾಷೆಯಿದ್ದಿರಬಹುದು. ಆದರೆ ನನ್ನ ಮನಸ್ಸಿನ ಪರಿಸ್ಥಿತಿಯು ಮಾತನಾಡಲೆಡೆಗೊಡುವಂತಿರಲಿಲ್ಲ.

ನಾನು ನನ್ನ ಕರ್ತವ್ಯವೇನೆಂದು ಯೋಚಿಸತೊಡಗಿದೆನು. ನನ್ನ ಹಕ್ಕುಗಳಿಗಾಗಿ ಹೊಡೆದಾಡಲೊ? ಅಥವಾ ಹಿಂದೂಸ್ಥಾನಕ್ಕೆ ಹಿಂದಿರುಗಲೊ? ಅಥವಾ ಎಷ್ಟು ಅವಮಾನವಾದರೂ ಸಹಿಸಿಕೊಂಡು ಪ್ರಿಟೋರಿಯಾಕ್ಕೆ ಹೋಗಿ ಮೊಕದ್ದಮೆಯ ಕೆಲಸವು ಮುಗಿದಮೇಲೆ ನನ್ನದೇಶಕ್ಕೆ ವಾಪಸು ಹೋಗಲೊ? ಮೊಕದ್ದಮೆಯ ಕೆಲಸವನ್ನು ಬಿಟ್ಟು ಬಿಟ್ಟು ಓಡಿಹೋಗುವುದು ಹೇಡಿತನವೆನಿಸುವುದು. ನನಗೆ ಉಂಟಾದ ತೊಂದರೆಯೆಲ್ಲವೂ ಹೊರಗಿನ ಹುಣ್ಣಾಗಿದ್ದಿತು. ವಾಸ್ತವಿಕವಾಗಿ ಅದು ಆಳದಲ್ಲಿ ಅಡಗಿಕೊಂಡಿರುವ ವರ್ಣ ದ್ವೇಷವ್ಯಾಧಿಯ ಬಾಹ್ಯ ಲಕ್ಷಣವಾಗಿದ್ದಿತು. ಈ ವರ್ಣದ್ವೇಷವನ್ನು ಅಳಿಸುವುದಕ್ಕೆ ನನ್ನಲ್ಲಿ ಏನಾದರೂ

ಶಕ್ತಿಯಿದ್ದರೆ ಶಕ್ತಿಯನ್ನು ಉಪಯೋಗಿಸಬೇಕು. ಈ ಪ್ರಯತ್ನದಿಂದ ನನಗೆ ಕಷ್ಟವೊದಗಿದರೆ ಅದನ್ನು ಸಹಿಸಬೇಕು. ಈ ವ್ಯಾಧಿಯನ್ನು ತೊಲಗಿಸಲು ಎಷ್ಟುಮಟ್ಟಿಗೆ ಆವಶ್ಯಕವೋ ಅಷ್ಟುಮಟ್ಟಿಗೆ ಮಾತ್ರ ನಾನು ಅನ್ಯಾಯಗಳಿಗೆ ಪರಿಹಾರವನ್ನು ಹೊಂದಲು ಯತ್ನಿಸಬೇಕು.

ಆದುದರಿಂದ ನಾನು ಮುಂದಿನ ರೈಲಿನಲ್ಲಿ ಪ್ರಿಟೋರಿಯಾಕ್ಕೆ ಪ್ರಯಾಣವನ್ನು ಬೆಳೆಸಬೇಕೆಂದು ನಿಶ್ಚಯಿಸಿದೆನು.

ಮರುಬೆಳಿಗ್ಗೆ ರೈಲ್ವೆಯ ಜನರಲ್ ಮ್ಯಾನೇಜರಿಗೆ (ರೈಲ್ವೆ ಆಡಳಿತವನ್ನು ನೋಡಿಕೊಳ್ಳುವ ಮುಖ್ಯ ಅಧಿಕಾರಿ) ದೊಡ್ಡದಾಗಿ ತಾರನ್ನು (ತಂತಿ ಸಮಾಚಾರ) ಕಳುಹಿಸಿದೆನು. ಅಬ್ದುಲ್ಲಾ ಸೇಠರಿಗೂ ತಂತಿಯ ಮೂಲಕ ಸಮಾಚಾರವನ್ನು ತಿಳಿಸಿದೆನು. ಅವರು ಒಡನೆಯೇ ಮುಖ್ಯಾಧಿಕಾರಿಯನ್ನು ಹೋಗಿ ನೋಡಿದರು. ಆತನು ರೈಲ್ವೆ ನೌಕರರ ಪಕ್ಷವನ್ನು ಸಾಧಿಸಿದನು. ಆದರೆ ನಾನು ಹೋಗಬೇಕಾದ ಸ್ಥಳವನ್ನು ತೊಂದರೆಯಿಲ್ಲದೆ ತಲುಪುವುದಕ್ಕೆ ಏರ್ಪಾಡು ಮಾಡಬೇಕೆಂದು ಸ್ಟೇಷನ್ ಮಾಸ್ಟರಿಗೆ ಆಗಲೇ ಅಪ್ಪಣೆ ಮಾಡಿರುವೆನೆಂದೂ ಹೇಳಿದನು. ಅಬ್ದುಲ್ಲಾ ಸೇಠರು ಮ್ಯಾರಿಟ್ಸ್‌ಬರ್ಗಿನ ಭಾರತೀಯ ವರ್ತಕರಿಗೂ ಇತರ ಸ್ಥಳಗಳಲ್ಲಿನ ಮಿತ್ರರಿಗೂ ನನ್ನನ್ನು ಕಂಡು ಸರಿಯಾಗಿ ನೋಡಿಕೊಳ್ಳಬೇಕೆಂದು ತಾರು ಕೊಟ್ಟರು. ಮ್ಯಾರಿಟ್ಸ್‌ಬರ್ಗಿನ ವರ್ತಕರು ನಿಲ್ದಾಣದ ಬಳಿಗೆ ಬಂದು ನನ್ನನ್ನು ನೋಡಿದರು. ಅವರು ತಮ್ಮ ಕಷ್ಟಗಳನ್ನೆಲ್ಲ ವರ್ಣಿಸಿ ನನಗೆ ಆದೇನೂ ಆಶ್ಚರ್ಯದ ವಿಷಯವಲ್ಲವೆಂದು ಹೇಳಿ ನನ್ನನ್ನು ಸಂತಯಿಸಲು ಯತ್ನಿಸಿದರು. ಮೊದಲನೆಯ ಮತ್ತು ಎರಡನೆಯ ತರಗತಿಯಲ್ಲಿ ಪ್ರಯಾಣಮಾಡುವ ಭಾರತೀಯರು ರೈಲ್ವೇ ನೌಕರರಿಂದಲೂ ಬಿಳಿಯ ಪ್ರಯಾಣಿಕರಿಂದಲೂ ತೊಂದರೆಯನ್ನು ನಿರೀಕ್ಷಿಸತಕ್ಕುದೇ ಎಂದೂ ತಿಳಿಸಿದರು. ಹೀಗೆ ಈ ಗೋಳಿನ ಹಾಡನ್ನು ಕೇಳುವುದರಲ್ಲಿಯೇ ಹಗಲು ಕಳೆದುಹೋಯಿತು. ಸಂಜೆಯ ರೈಲುಗಾಡಿಯು ಬಂದಿತು. ಅದರಲ್ಲಿ ನನಗಾಗಿ ಒಂದು ಸ್ಥಳವು ಗೊತ್ತಾಗಿದ್ದಿತು. ಡರ್ಬನಿನಿಂದ ಹೊರಡುವಾಗ ಹಾಸಿಗೆಯ ಟಿಕೆಟನ್ನು ಕೊಂಡುಕೊಳ್ಳುವುದಿಲ್ಲವೆಂದು ಹೇಳಿದ ನಾನೇ ಈಗ ಅದನ್ನು ಕೊಂಡುಕೊಂಡೆನು. ರೈಲು ಗಾಡಿಯು ನನ್ನನ್ನು ಚಾರ್ಲ್ಸ್‌ಟೌನಿಗೆ ಕೊಂಡೊಯ್ದಿತು.

೯

# ಇನ್ನೂ ಹೆಚ್ಚಾದ ತೊಂದರೆಗಳು

ರೈಲುಗಾಡಿಯು ಚಾರ್ಲ್ಸ್‌ಟೌನಿಗೆ ಬೆಳಿಗ್ಗೆ ತಲಪುತ್ತಿದ್ದಿತು. ಆ ಕಾಲದಲ್ಲಿ ಚಾರ್ಲ್ಸ್‌ಟೌನಿಗೂ ಜೋಹಾನ್ಸ್‌ಬರ್ಗಿಗೂ ಮಧ್ಯೆ ರೈಲಿರಲಿಲ್ಲ. ಟಪ್ಪಾಲು ಬಂಡಿ ಮಾತ್ರ ಇದ್ದಿತು. ಬಂಡಿಯು ದಾರಿಯಲ್ಲಿ ರಾತ್ರಿ ಸ್ಟ್ಯಾಂಡರ್‌ಟನಿನಲ್ಲಿ ನಿಲ್ಲುತ್ತಿದ್ದಿತು. ನನ್ನ ಬಳಿಯಲ್ಲಿ ಟಪ್ಪಾಲುಬಂಡಿಯ ಟಿಕೆಟಿದ್ದಿತು. ಮಾರಿಟ್ಸ್‌ಬರ್ಗಿನಲ್ಲಿ ಪ್ರಯಾಣವು ಒಂದು ದಿನ ಸಾವಕಾಶವಾದುದರಿಂದ ಅದೇನೂ ರದ್ದಾಗಿರಲಿಲ್ಲ. ಅದೂ ಅಲ್ಲದೆ ಅಬ್ದುಲ್ಲಾ ಸೇಠರು ಚಾರ್ಲ್ಸ್‌ಟೌನಿನಲ್ಲಿದ್ದ ಟಪ್ಪಾಲುಬಂಡಿಗಳ ಅಧಿಕಾರಿಗೆ ತಂತಿಯನ್ನು ಕೊಟ್ಟಿದ್ದರು.

ಆದರೆ ಆ ಅಧಿಕಾರಿಗೆ ನನ್ನನ್ನು ಹೊರಡಿಸಲೊಂದು ನೆಪವು ಬೇಕಾಗಿದ್ದಿತು. ಆದುದರಿಂದ ನಾನೊಬ್ಬ ಅಪರಿಚಿತನೆಂದು ಗೊತ್ತಾಗುತ್ತಲೂ ಆತನು ನನಗೆ "ನಿನ್ನ ಟಿಕೆಟು ರದ್ದಾಗಿಹೋಗಿದೆ." ಎಂದು ಹೇಳಿದನು. ನಾನು ಆತನಿಗೆ ಸರಿಯಾದ ಉತ್ತರವನ್ನು ಕೊಟ್ಟೆನು. ಆತನ ಮನಸ್ಸಿನಲ್ಲಿದ್ದ ಕಾರಣವು ಬಂಡಿಯಲ್ಲಿ ಸ್ಥಳವಿಲ್ಲವೆಂದಲ್ಲ. ನನ್ನ ಟಿಕೆಟು ರದ್ದಾಗಿದೆಯೆಂದು ಹೇಳುವುದರಲ್ಲಿ ಆತನ ಅಭಿಪ್ರಾಯವು ಬೇರೆಯಾಗಿದ್ದಿತು. ಪ್ರಯಾಣಿಕರೆಲ್ಲರಿಗೂ ಗಾಡಿಯೊಳಗೇ ಸ್ಥಳ ಕೊಡಬೇಕಾಗಿದ್ದಿತು. ಆದರೆ ನನ್ನನ್ನು 'ಕೂಲಿ'ಯೆಂದೂ ಅಪರಿಚಿತನೆಂದೂ ಎಣಿಸಿದ್ದುದರಿಂದ ಬಿಳಿಯ ಪ್ರಯಾಣಿಕರೊಡನೆ ಬಂಡಿಯೊಳಗೆ ಕುಳಿತುಕೊಳ್ಳುವುದಕ್ಕೆ ನನ್ನನ್ನು ಬಿಡಬಾರದೆಂದು ಬಂಡಿಯ ನೌಕರನು ಯೋಚಿಸಿದನು. [ಈ ಅಧಿಕಾರಿಗೆ 'ಮುಂದಾಳು' ಎಂದು ಹೆಸರು. ಪ್ರಯಾಣದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದೇ ಇವನ ಕೆಲಸ.] ಗಾಡಿ ಹೊಡೆಯುವನ ಅಕ್ಕಪಕ್ಕದಲ್ಲಿ ಇಬ್ಬರಿಗೆ ಕುಳಿತುಕೊಳ್ಳಲು ಸ್ಥಳವಿದ್ದಿತು. ಇವುಗಳಲ್ಲಿ ಒಂದರಲ್ಲಿ ಈ ಅಧಿಕಾರಿಯು ಕುಳಿತುಕೊಳ್ಳುವ ಕಟ್ಟಳೆ

ಯಿದ್ದಿತು. ಆ ದಿನ ಅವನು ಒಳಗೆ ಕುಳಿತುಕೊಂಡು ನನಗೆ ತನ್ನ ಸ್ಥಳ ವನ್ನು ಕೊಟ್ಟನು. ಇದು ಕೇವಲ ಅನ್ಯಾಯವೆಂದೂ ಅವಮಾನದ ವಿಷಯವೆಂದೂ ನನಗೆ ಗೊತ್ತಿದ್ದಿತು. ಆಗರೆ ಈ ಅವಮಾನವನ್ನು ಸಹಿಸಿ ಕೊಂಡಿರುವುದೇ ಒಳ್ಳೆಯದೆಂದುಕೊಂಡೆನು. ನಾನು ಜೋರುಮಾಡಿ ಒಳಗೆ ಹೋಗುವ ಹಾಗಿರಲಿಲ್ಲ. ನಾನು ಜಗಳಕ್ಕೇನಾದರೂ ನಿಂತಿ ದ್ದರೆ ಬಂಡಿಯು ನನ್ನನ್ನು ಬಿಟ್ಟುಬಿಟ್ಟೇ ಹೊರಟುಹೋಗುತ್ತಿದ್ದಿತು. ಇದರಿಂದ ಇನ್ನೊಂದು ದಿನ ವ್ಯರ್ಥವಾಗುತ್ತಿದ್ದಿತು. ಮಾರನೆಯ ದಿನ ಏನು ಸಂಭವಿಸುವುದೋ ಭಗವಂತನಿಗೇ ಗೊತ್ತು. ಹೀಗೆ ಯೋಚಿಸಿ ನಾನು ನನ್ನ ಎದೆಯಲ್ಲಿ ಬೆಂಕಿಯೇಳುತ್ತಿದ್ದಿತಾದರೂ ವಿವೇಕವುಳ್ಳ ಮನುಷ್ಯನಂತೆ ಬಂಡಿ ಹೊಡೆಯುವವನ ಪಕ್ಕದಲ್ಲಿ ಕುಳಿತುಕೊಂಡೆನು.

ಮೂರು ಗಂಟೆಯ ಸಮಯಕ್ಕೆ ಗಾಡಿಯು ಪರ್ಡೆಕೋಫನ್ನು ತಲಪಿತು. ಈಗ ಆ 'ಮುಂದಾಳಿ'ಗೆ ನಾನು ಕುಳಿತುಕೊಂಡಿದ್ದ ಸ್ಥಳ ದಲ್ಲಿ ತಾನು ಕುಳಿತುಕೊಳ್ಳಬೇಕೆಂಬ ಇಷ್ಟವುಂಟಾಯಿತು. ಅವನು ಸಿಗರೇಟ್ ಕುಡಿಯಬೇಕೆಂದು ಇಚ್ಛಿಸಿದನು. ಬಹುಶಃ ಅವನಿಗೆ ಒಳ್ಳೆಯ ಗಾಳಿಯು ಬೇಕಾಗಿಯೂ ಇದ್ದಿರಬಹುದು. ಆದುದರಿಂದ ಅವನು ಬಂಡಿ ಹೊಡೆಯುವವನಿಂದ ಒಂದು ಕೊಳೆಯಾದ ಗೋಣಿಯ ಪಟ್ಟನ್ನು ತೆಗೆದು ಕೊಂಡು ಕಾಲಿಡುವ ಹಲಗೆಯ ಮೇಲೆ ಹಾಸಿ, "ಸಾಮಿ, ನೀನು ಇದರಮೇಲೆ ಕುಳಿತುಕೋ. ನಾನು ಗಾಡಿ ಹೊಡೆಯುವವನ ಹತ್ತಿರ ಕುಳಿತುಕೊಳ್ಳಬೇಕು." ಎಂದು ಹೇಳಿದನು. ಈ ಅಪಮಾನವನ್ನು ನಾನು ಸಹಿಸಲಾಗಲಿಲ್ಲ. ನಾನು ಹೆದರಿಕೆಯಿಂದ ನಡುಗುತ್ತಾ ಅವ ನೊಡನೆ "ನೀನೇ ನನ್ನನ್ನು ಇಲ್ಲಿ ಕೂಡಿಸಿದುದು. ನನಗೆ ನ್ಯಾಯವಾಗಿ ಒಳಗೆ ಸ್ಥಳ ಕೊಡಬೇಕಾಗಿದ್ದಿತು. ನಾನು ಈ ಅವಮಾನವನ್ನು ಸಹಿಸಿ ಕೊಂಡಿದ್ದೆನು. ಈಗ ನೀನು ಹೊರಗೆ ಕುಳಿತುಕೊಂಡು ಸಿಗರೇಟ್ ಕುಡಿಯಬೇಕೆಂದು ಇಚ್ಛಿಸುವುದರಿಂದ ನಾನು ನಿನ್ನ ಕಾಲಿನ ಬಳಿ ಕುಳಿ ತುಕೊಳ್ಳಬೇಕೆನ್ನುತ್ತೀಯೆ. ಅದೆಲ್ಲಾ ಆಗುವುದಿಲ್ಲ. ಬೇಕಾದರೆ ಒಳಗೆ ಕುಳಿತುಕೊಳ್ಳುತ್ತೇನೆ." ಎಂದು ಹೇಳಿದೆನು.

ಈ ಮಾತುಗಳನ್ನು ನಾನು ಮುಗಿಸುವಷ್ಟರಲ್ಲಿಯೇ ಅವನು ನನ್ನ ಹತ್ತಿರಕ್ಕೆ ಬಂದು ಕೆನ್ನೆಗೆ ಬಲವಾಗಿ ಹೊಡೆಯಲು ಮೊದಲುಮಾಡಿ ನನ್ನನ್ನು ಕೈಹಿಡಿದುಕೊಂಡು ಕೆಳಕ್ಕೆ ತಳ್ಳಲು ಪ್ರಯತ್ನಪಟ್ಟನು. ನಾನು ಕುಳಿತುಕೊಳ್ಳುವ ಸ್ಥಳದ ಹತ್ತಿರ ಇದ್ದ ಹಿತ್ತಾಳೆಯ ಕಂಬಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡೆನು. ನನ್ನ ಕೈಮೂಳೆಗಳು ಮುರಿದು ಹೋದರೂ ಹಿಡಿತವನ್ನು ಬಿಡುವುದಿಲ್ಲವೆಂದು ಮನಸ್ಸುಮಾಡಿದ್ದೆನು. ಉಳಿದ ಪ್ರಯಾಣಿಕರು ಈ ನೋಟವನ್ನು ನೋಡುತ್ತಿದ್ದರು. ಅವನು ನನ್ನನ್ನು ಬಯ್ಯುತ್ತಲೂ, ಎಳೆಯುತ್ತಲೂ, ಹೊಡೆಯುತ್ತಲೂ ಇದ್ದನು. ನಾನು ಮಾತ್ರ ಸುಮ್ಮನಿದ್ದೆನು. ಅವನು ಬಲವುಳ್ಳವನಾಗಿದ್ದನು. ನಾನು ಬಲಹೀನನಾಗಿದ್ದೆನು. ಪ್ರಯಾಣಿಕರಲ್ಲಿ ಕೆಲವರಿಗೆ ಕನಿಕರ ಹುಟ್ಟಿ ಅವರು ಅವನಿಗೆ "ಪಾಪ, ಅವನನ್ನು ಬಿಟ್ಟುಬಿಡು. ಅವನದೇನೂ ತಪ್ಪಿಲ್ಲ. ಅವನು ಹೇಳುವುದು ನಿಜ. ಅವನು ಅಲ್ಲಿ ಇರುವುದಕ್ಕಾಗದಿದ್ದರೆ ನಮ್ಮ ಬಳಿಯಲ್ಲಿ ಬಂದು ಕುಳಿತುಕೊಳ್ಳಲಿ." ಎಂದು ಹೇಳಿದರು. "ಅದೆಲ್ಲಾ ಆಗುವುದಿಲ್ಲ!" ಎಂದು ಅವನು ಕೂಗಿದನು. ಆದರೂ ಅವನಿಗೆ ಸ್ವಲ್ಪ ಮೊಗಮುರಿದಂತೆ ತೋರಿತು. ನನ್ನನ್ನು ಹೊಡೆಯುವುದನ್ನು ನಿಲ್ಲಿಸಿ ನನ್ನ ಕೈಯನ್ನು ಬಿಟ್ಟುಬಿಟ್ಟನು. ಆದರೆ ಇನ್ನೂ ಸ್ವಲ್ಪ ನನ್ನನ್ನು ಬೈದು ಮತ್ತೊಂದು ಪಕ್ಕದಲ್ಲಿ ಕುಳಿತಿದ್ದ ಹಾಟೆಂಟಾಟ್ (ನೀಗ್ರೋ ಜನ) ಆಳನ್ನು ಕಾಲಿಡುವ ಸ್ಥಳದಲ್ಲಿ ಕುಳಿತುಕೊಳ್ಳುವಂತೆ ಹೇಳಿ ಅವನ ಜಾಗದಲ್ಲಿ ತಾನು ಕುಳಿತುಕೊಂಡನು.

ಪ್ರಯಾಣಿಕರು ಒಳಗೆ ಕುಳಿತುಕೊಂಡರು. ಸೀಟಿಯಾಯಿತು. ಗಾಡಿಯು ಸದ್ದುಮಾಡುತ್ತಾ ಹೊರಟಿತು. ನನ್ನ ಎದೆಯು ಢಬ್‌ಢಬಾ ಎಂದು ಹೊಡೆಯುತ್ತಿದ್ದಿತು. ನನ್ನ ಮನಸ್ಸಿನಲ್ಲಿ ನಾನು ಹೋಗಬೇಕೆಂದಿರುವ ಸ್ಥಳಕ್ಕೆ ನಿಜವಾಗಿಯೂ ಜೀವದೊಡನೆ ಹೋಗುತ್ತೇನೆಯೇ ಎಂದುಕೊಳ್ಳುತ್ತಿದ್ದೆನು. ಆ ಮನುಷ್ಯನು ಆಗಾಗ ನನ್ನ ಕಡೆಗೆ ಕೋಪದ ದೃಷ್ಟಿಯನ್ನು ಬೀರುತ್ತಾ ತನ್ನ ಬೆರಳನ್ನು ನನ್ನ ಕಡೆಗೆ ತೋರಿಸಿ, "ಜೋಪಾನ! ಸ್ಟ್ಯಾಂಡರ್ಟನನ್ನು ತಲಪಿದುದಾಗಲಿ. ನಿನಗೇನು ಮಾಡುತ್ತೇನೆಂಬುದನ್ನು ತೋರಿಸುತ್ತೇನೆ" ಎಂದು ಗದರಿಸುತ್ತಿದ್ದನು. ನಾನು

ಮಾತನಾಡದೆ ಕುಳಿತು ನನ್ನನ್ನು ಕಾಪಾಡಬೇಕೆಂದು ಪರಮಾತ್ಮನನ್ನ ಪ್ರಾರ್ಥಿಸುತ್ತಿದ್ದೆನು.

ಕತ್ತಲಾದಮೇಲೆ ನಾವು ಸ್ಟ್ಯಾಂಡರ್‌ಟನನ್ನು ತಲಪಿದೆವು. ಕೆಲವು ಜನ ಭಾರತೀಯರ ಮುಖವನ್ನು ನೋಡುತ್ತಲೂ ನನಗೆ ಸ್ವಲ್ಪ ಧೈರ್ಯ ಬಂದು ನಿಟ್ಟುಸಿರನ್ನು ಬಿಟ್ಟೆನು. ನಾನು ಕೆಳಕ್ಕೆ ಇಳಿಯುತ್ತಲೂ ಈ ಮಿತ್ರರು "ನಾವು ನಿಮ್ಮನ್ನು ಈಸಾ ಸೇಠರ ಅಂಗಡಿಗೆ ಕರೆದು ಕೊಂಡು ಹೋಗಲು ಬಂದಿದ್ದೇವೆ. ಅಬ್ದುಲ್ಲಾ ಸೇಠರಿಂದ ನಮಗೆ ತಾರು ಬಂದಿತು." ಎಂದು ಹೇಳಿದರು. ನನಗೆ ಬಹಳ ಸಂತೋಷವಾಯಿತು. ನಾವು ಸೇಠ್ ಈಸಾ ಹಾಜೀ ಸುಮಾರರ ಅಂಗಡಿಗೆ ಹೋದೆವು. ಸೇಠರೂ ಅವರ ಗುಮಾಸ್ತರೂ ನನ್ನ ಸುತ್ತಲೂ ಮುತ್ತಿಕೊಂಡರು. ನಾನು ಅನುಭವಿಸಿದುದೆಲ್ಲವನ್ನೂ ಅವರಿಗೆ ಹೇಳಿದೆನು. ಅದನ್ನು ಕೇಳಿ ಅವರು ಬಹು ವ್ಯಸನಪಟ್ಟರು. ತಾವು ಅನುಭವಿಸಿದ ಸಂಕಟಗಳನ್ನು ತಿಳಿಸಿ ನನ್ನನ್ನು ಸಮಾಧಾನಪಡಿಸಿದರು.

ಅಲ್ಲಿದ್ದ ಟಪಾಲು ಬಂಡಿ ಕಂಪೆನಿಯ ಅಧಿಕಾರಿಗೆ ನಡೆದುದೆಲ್ಲವನ್ನೂ ತಿಳಿಸಬೇಕೆಂದು ಇಚ್ಛಿಸಿ ನಾನು ಅದೆಲ್ಲವನ್ನೂ ವಿವರಿಸಿ ಅವರ ನೌಕರನು ನನ್ನನ್ನು ಹೆದರಿಸಿದುದನ್ನು ತಿಳಿಸಿ ಮಾರನೆಯ ದಿನ ಬೆಳಿಗ್ಗೆ ಹೊರಟಾಗ ಬಂಡಿಯೊಳಗೆ ಇತರ ಪ್ರಯಾಣಿಕರೊಂದಿಗೆ ನನ್ನನ್ನು ಕುಳ್ಳಿರಿಸುವುದಕ್ಕೆ ಮಾತುಕೊಡಬೇಕೆಂದು ಆತನಿಗೆ ಒಂದು ಪತ್ರವನ್ನು ಬರೆದೆನು. ಇದಕ್ಕೆ ಆ ಅಧಿಕಾರಿಯು "ಸ್ಟ್ಯಾಂಡರ್ಟನಿನಿಂದ ದೊಡ್ಡ ಗಾಡಿಯು ಹೊರಡುತ್ತದೆ. ಗಾಡಿ ಹೊಡೆಯುವವನು ಮುಂತಾದವರೆಲ್ಲಾ ಬೇರೆ. ನೀವು ನಡತೆಯು ಸಮರ್ಪಕವಾಗಿಲ್ಲವೆಂದು ಬರೆದಿರುವ ನೌಕರನು ನಾಳೆ ಇರುವುದಿಲ್ಲ. ನೀವು ಇತರ ಪ್ರಯಾಣಿಕರೊಂದಿಗೆ ಕುಳಿತುಕೊಳ್ಳಲು ಏರ್ಪಾಡುಮಾಡಿದೆ." ಎಂದು ಉತ್ತರಕೊಟ್ಟರು. ಇದನ್ನು ನೋಡಿ ನನ್ನ ಚಿಂತೆಯು ಸ್ವಲ್ಪ ಕಡಿಮೆಯಾಯಿತು. ನನ್ನ ಮೇಲೆ ಬಿದ್ದ ಆ ಘರಂಗಿಯವನ ಮೇಲೆ ಕಟ್ಟಳೆ ನಡೆಸಬೇಕೆಂಬ ಉದ್ದೇಶವೇನೂ ನನಗಿರಲಿಲ್ಲ. ಆದುದರಿಂದ ಈ ಜಗಳದ ಅಧ್ಯಾಯವು ಇಲ್ಲಿಗೆ ಮುಗಿಯಿತು.

ಬೆಳಿಗ್ಗೆ ಈಸಾ ಸೇಠರ ಕಡೆಯವನು ನನ್ನನ್ನು ಬಾಡಿಯ ಬಳಿಗೆ ಕರೆದುಕೊಂಡು ಹೋದನು. ನನಗೆ ಒಳ್ಳೆಯ ಸ್ಥಳವು ಸಿಕ್ಕಿತು. ನಾನು ಸುರಕ್ಷಿತವಾಗಿ ಆ ರಾತ್ರಿ ಜೋಹಾನ್ಸ್‌ಬರ್ಗನ್ನು ತಲುಪಿದೆನು.

ಸ್ಟ್ಯಾಂಡರ್‌ಟನ್ ಒಂದು ಸಣ್ಣ ಹಳ್ಳಿ. ಜೋಹಾನ್ಸ್‌ಬರ್ಗ್ ಒಂದು ದೊಡ್ಡ ನಗರ. ಅಬ್ದುಲ್ಲಾ ಸೇಠರು ಜೋಹಾನ್ಸ್‌ಬರ್ಗಿಗೂ ತಂತಿಯನ್ನು ಕಳುಹಿಸಿದ್ದರು. ಮತ್ತು ನನಗೆ ಅಲ್ಲಿಯ ಮುಹಮ್ಮದ್ ಕಾಸಿಮ್ ಕಮ್ರುದ್ದೀನರ ಅಂಗಡಿಯ ಹೆಸರನ್ನೂ ವಿಳಾಸವನ್ನೂ ಕೊಟ್ಟಿದ್ದರು. ನನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ಅವರ ಕಡೆಯವನು ಗಾಡಿ ನಿಲ್ಲುವ ಸ್ಥಳಕ್ಕೆ ಬಂದಿದ್ದನು- ಆದರೆ ನಾನು ಅವನನ್ನು ನೋಡಲಿಲ್ಲ. ಅವನೂ ನನ್ನನ್ನು ಗುರುತುಹಿಡಿಯಲಿಲ್ಲ. ಆದುದರಿಂದ ನಾನು ಹೋಟಲಿಗೆ ಹೋಗಬೇಕೆಂದು ನಿಶ್ಚಯಿಸಿದೆನು. ನಾಲ್ಕಾರು ಹೋಟಲುಗಳ ಹೆಸರನ್ನೂ ತಿಳಿದುಕೊಂಡಿದ್ದೆನು. ಒಂದು ಗಾಡಿಯನ್ನು ಗೊತ್ತುಮಾಡಿ 'ಗ್ರ್ಯಾಂಡ್ ನ್ಯಾಷನಲ್ ಹೊಟೇಲ್' ಗೆ ಹೊಡೆಯುವಂತೆ ಹೇಳಿದೆನು. ಅದನ್ನು ತಲುಪಿದಮೇಲೆ ಅಲ್ಲಿಯ ವ್ಯವಸ್ಥಾಪಕ (ಮ್ಯಾನೇಜರ್) ನನ್ನು ಕಂಡು ಇರುವುದಕ್ಕೆ ಸ್ಥಳವನ್ನು ಕೊಡಬೇಕೆಂದು ಕೇಳಿದೆನು. ಆತನು ಒಂದು ಕ್ಷಣ ನನ್ನನ್ನು ದೃಷ್ಟಿಸಿ "ಏನು ಮಾಡುವುದು! ಇಲ್ಲಿನ ಕೊಠಡಿಗಳೆಲ್ಲಾ ತುಂಬಿಹೋಗಿವೆ." ಎಂದು ವಿನಯದಿಂದ ಹೇಳಿ ನನ್ನನ್ನು ಬೀಳ್ಕೊಟ್ಟನು. ನಾನು ಗಾಡಿಯವನಿಗೆ ಮುಹಮುದ್ ಕಾಸಿಮ್ ಕಮ್ರುದ್ದೀನರ ಅಂಗಡಿಗೆ ಹೊಡೆಯುವಂತೆ ಹೇಳಿದೆನು. ಅಲ್ಲಿ ಅಬ್ದುಲ್ ಗನೀ ಸೇಠರು ನಾನು ಬರುವುದನ್ನೇ ಇದಿರುನೋಡುತ್ತಿದ್ದರು. ಅವರು ನಾನು ಬಂದುದಕ್ಕೆ ತಮ್ಮ ಮನಃಪೂರ್ವಕವಾದ ಸಂತೋಷವನ್ನು ವ್ಯಕ್ತಪಡಿಸಿದರು. ಹೋಟಲಿನಲ್ಲಿ ನನಗುಂಟಾದ ಅನುಭವದ ಕತೆಯನ್ನು ಕೇಳಿ ಅವರು ಬಹಳ ನಕ್ಕು ನಿಮ್ಮನ್ನು ಹೋಟಲಿಗೆ ಸೇರಿಸುವರೆಂದು ಹೇಗೆ ತಾನೆ ನಿರೀಕ್ಷಿಸಿದಿರಿ?" ಎಂದರು.

"ಏಕೆ ಕೂಡದು?" ಎಂದು ನಾನು ಕೇಳಿದೆನು.

"ಇಲ್ಲಿ ನೀವು ನಾಲ್ಕು ದಿವಸ ಇದ್ದರೆ ಗೊತ್ತಾಗುತ್ತದೆ. ಈ ದೇಶದಲ್ಲಿ ನಮ್ಮಂತಹರು ಮಾತ್ರ ಇರುವುದು ಸಾಧ್ಯ. ಏಕೆಂದರೆ

ನಾವಿರುವುದು ಹಣ ಸಂಪಾದಿಸುವುದಕ್ಕೆ. ಅದರ ಸಲುವಾಗಿ ಹೆಚ್ಚು ಅಪಮಾನ ಸಹಿಸಬೇಕಾದರೂ ಸುಮ್ಮನಿರುತ್ತೇವೆ.'' ಎಂದು ಹೇಳಿ ಅವರು ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಕಷ್ಟಗಳ ಇತಿಹಾಸವನ್ನು ಹೇಳಿದರು.

ಮುಂದೆ ಹೊಗುತ್ತಾ ನಮಗೆ ಅಬ್ದುಲ್ ಗನೀ ಸೇಠರ ಪರಿಚಯವನ್ನು ಇನ್ನೂ ಚೆನ್ನಾಗಿ ಮಾಡಿಕೊಳ್ಳುವೆವು.

ಅವರು ''ಈ ದೇಶವು ನಿಮ್ಮಂತಹರಿಗೆ ತಕ್ಕುದಲ್ಲ. ನೋಡಿ, ನೀವು ನಾಳೆ ಪ್ರಿಟೋರಿಯಾಕ್ಕೆ ಹೋಗಬೇಕು. ನೀವು ಮೂರನೆಯ ತರಗತಿಯಲ್ಲಿಯೇ ಪ್ರಯಾಣ ಮಾಡಬೇಕಾಗುತ್ತದೆ. ನೇಟಾಲಿಗಿಂತ ಟ್ರಾನ್ಸ್‌ವಾಲಿನ ಪರಿಸ್ಥಿತಿಯು ಇನ್ನೂ ಕೇಡು. ಇಲ್ಲಂತೂ ಭಾರತೀಯರಿಗೆ ಒಂದನೆಯ ಎರಡನೆಯ ತರಗತಿಯ ಟಿಕೆಟುಗಳನ್ನು ಕೊಡುವುದೇ ಇಲ್ಲ.'' ಎಂದರು.

''ನೀವು ಇದಕ್ಕಾಗಿ ಸಾಕಾದಷ್ಟು ಪ್ರಯತ್ನವನ್ನು ಮಾಡಿರಲಾರಿರಿ.''

''ನಾವು ಪತ್ರವ್ಯವಹಾರವನ್ನೇನೋ ನಡೆಸಿದ್ದೇವೆ. ಆದರೆ ನಮ್ಮವರು ಸಾಧಾರಣವಾಗಿ ಮೊದಲನೆಯ ಎರಡನೆಯ ತರಗತಿಗಳಲ್ಲಿ ಪ್ರಯಾಣ ಮಾಡಲಿಷ್ಟಪಡುವುದೇ ಇಲ್ಲ.''

ನಾನು ರೈಲ್ವೆಯ ನಿಯಮಗಳಿರುವ ಪುಸ್ತಕವನ್ನು ತರಿಸಿ ಓದಿದೆನು. ಅದರಲ್ಲಿ ತಪ್ಪಿಸಿಕೊಳ್ಳಲು ದಾರಿಯಿದ್ದಿತು. ಟ್ರಾನ್ಸ್‌ವಾಲಿನ ಹಿಂದಿನ ಕಾನೂನುಗಳು ಸೂಕ್ಷ್ಮ ವಿಚಾರದಿಂದ ತಯಾರಾದುವಾಗಿರಲಿಲ್ಲ. ರೈಲ್ವೆಯ ನಿಯಮಗಳ ವಿಚಾರವಂತು ಕೇಳಬೇಕಾದುದೇನಿದೆ?

ನಾನು ಸೇಠರಿಗೆ ''ಮೊದಲನೆಯ ದರ್ಜೆಯಲ್ಲಿ ಹೋಗಬೇಕೆಂದೇ ನನ್ನ ಇಚ್ಛೆ. ಇದು ಸಾಧ್ಯವಿಲ್ಲದಿದ್ದರೆ ಇಲ್ಲಿಂದ ಪ್ರಿಟೋರಿಯಾಕ್ಕೆ ೩೭ ಮೈಲಿ ತಾನೆ. ಕುದುರೆಯ ಗಾಡಿಯಲ್ಲಿ ಹೋಗುತ್ತೇನೆ.'' ಎಂದು ಹೇಳಿದೆನು.

ಸೇಠರು ಇದರಿಂದ ಹೊತ್ತೂ ಹಣವೂ ನಷ್ಟವಾಗುವದೆಂದು ತೋರಿಸಿದರು. ಆದರೆ ಇವರು ನಾನು ಮೊದಲನೆಯ ತರಗತಿಯಲ್ಲಿ ಪ್ರಯಾಣ ಮಾಡಬೇಕೆಂಬ ನನ್ನ ಸೂಚನೆಗೆ ಒಪ್ಪಿದರು. ಆದುದರಿಂದ ನಾವು ಸ್ಟೇಷನ್ ಮಾಸ್ಟರಿಗೆ ಒಂದು ಕಾಗದವನ್ನು ಬರೆದು ಕಳುಹಿಸಿ ಕೊಟ್ಟೆವು. ಅದರಲ್ಲಿ ನಾನು ಬ್ಯಾರಿಸ್ಟರೆಂದೂ ಯಾವಾಗಲೂ ಮೊದಲನೆಯ ದರ್ಜೆಯಲ್ಲಿಯೇ ನಾನು ಪ್ರಯಾಣಮಾಡುವುದೆಂದೂ ತಿಳಿಸಿದ್ದೆನು. ಇದಲ್ಲದೆ ನಾನು ಪ್ರಿಟೋರಿಯಾವನ್ನು ಆದಷ್ಟು ಜಾಗ್ರತೆ ಸೇರಬೇಕಾಗಿರುವುದೆಂದೂ ಅವರ (ಸ್ಟೇಷನ್‌ಮಾಸ್ಟರ)ಉತ್ತರವನ್ನು ಎದುರು ನೋಡಲು ಸಮಯವಿಲ್ಲದುದರಿಂದ ನಾನೇ ಸ್ವತಃ ಸ್ಟೇಷನಿಗೆ ಬಂದು ಉತ್ತರವನ್ನು ಪಡೆಯುವೆನೆಂದೂ ಮತ್ತು ಮೊದಲನೆಯ ದರ್ಜೆಯ ಟಿಕೆಟು ಸಿಕ್ಕುವುದೆಂದು ನಿರಿಕ್ಷಿಸುತ್ತೇನೆಂದೂತಿಳಿಸಿದ್ದೆನು. ಮುಖತಃ ಉತ್ತರವನ್ನು ಪಡೆಯುವೆನೆಂದು ಬರೆಯುವದರಲ್ಲಿ ಉದ್ದೇಶವಿದ್ದಿತೆಂದು ಹೇಳಬೇಕಾಗಿಲ್ಲ. "ಸ್ಟೇಷನ್‌ಮಾಸ್ಟರು ಉತ್ತರವನ್ನು ಬರೆದು ಕಳುಹಿಸಿದರೆ ಖಂಡಿತವಾಗಿ ಮೊದಲನೆಯ ದರ್ಜೆಯ ಟಿಕೆಟನ್ನು ಕೊಡಲಾಗುವುದಿಲ್ಲವೆಂದು ಬರೆಯುವರು. ಮತ್ತು ಆತನು 'ಕೂಲೀ' ಬ್ಯಾರಿಸ್ಟರ್ ಎಂದರೆ ತನ್ನ ಮನಸ್ಸಿನಲ್ಲಿ ಏನೋ ಅಭಿಪ್ರಾಯವನ್ನಿಟ್ಟುಕೊಂಡಿರುತ್ತಾರೆ. ಆದುದರಿಂದ ನಾನು ಇನಿಸುಕುಂದಿಲ್ಲದ ಆಂಗ್ಲವೋಷಾಕಿನಿಂದ ಭೂಷಿತನಾಗಿ ಆತನಿದಿರಿಗೆ ಹೋಗಿ ಮಾತನಾಡುವೆನು. ಆಗ ಬಹುಶಃ ಆತನನ್ನು ಮೊದಲನೆಯ ದರ್ಜೆಯ ಟಿಕೆಟನ್ನು ಕೊಡಲು ಒಪ್ಪಿಸಬಹುದು." ಎಂದು ಯೋಚಿಸಿ ಮೋಟುಅಂಗಿ (ಫ್ರಾಕ್ ಕೋಟ್), ಕಂಠಗ್ರಂಥಿ (ನೆಕ್‌ಟೈ) ಮೊದಲಾದುವುಗಳನ್ನು ಧರಿಸಿಕೊಂಡು ಸ್ಟೇಷನನ್ನು ತಲಪಿದೆನು. ಆತನ (ಸ್ಟೇಷನ್ ಮಾಸ್ಟರ) ಮುಂದೆ ಒಂದು ಪೌಂಡನ್ನು (ಸುಮಾರು ೧೫ ರೂಪಾಯಿ ಬೆಲೆಯುಳ್ಳ ಚಿನ್ನದ ನಾಣ್ಯ, 'ಸವರನು') ಇಟ್ಟು ಒಂದು ಮೊದಲನೆಯ ತರಗತಿಯ ಟಿಕೆಟನ್ನು ಕೊಡಬೇಕೆಂದು ಕೇಳಿದೆನು.

"ನೀವೇನೋ ನನಗೆ ಈ ಕಾಗದವನ್ನು ಕಳುಹಿಸಿದುದು?" ಎಂದು ಆತನು ನನ್ನನ್ನು ಕೇಳಿದನು.

"ಹೌದು, ನಾನೇ. ನೀವು ಟಿಕೆಟನ್ನು ಕೊಟ್ಟರೆ ಉಪಕಾರ ಮಾಡಿದಂತಾಗುತ್ತದೆ. ನಾನು ಈ ದಿನವೇ ಪ್ರಿಟೋರಿಯಾವನ್ನು ತಲಪಬೇಕು."

ಆತನು ನಸುನಕ್ಕನು. ಆತನಿಗೆ ಕನಿಕರ ಹುಟ್ಟಿ "ನಾನು ಟ್ರಾನ್ಸ್‌ವಾಲಿನವನಲ್ಲ, ಹಾಲೆಂಡಿನವನು (ಊ). ನಿಮ್ಮ ಮನಸ್ಸಿನಲ್ಲಿರುವ ಭಾವವು ನನಗೆ ಗೊತ್ತಾಗುತ್ತದೆ. ನಿಮ್ಮ ವಿಷಯದಲ್ಲಿ ನನಗೆ ಸಹಾನುಭೂತಿಯಿದೆ. ನಿಮಗೆ ಟಿಕೆಟ್ ಕೊಡಬೇಕೆಂದೇ ನನಗೆ ಇಷ್ಟ. ಆದರೆ ಒಂದು ಶರತ್ತಿನ ಮೇಲೆ–ದಾರಿಯಲ್ಲಿ ಗಾರ್ಡ್(ರೈಲ್ ಗಾಡಿಯ ಮೇಲ್ವಿಚಾರಣೆಯನ್ನು ನೋಡಿಕೊಂಡಿರುವ ಅಧಿಕಾರಿ) ನಿಮ್ಮನ್ನು ಇಳಿಸಿ ಮೂರನೆಯ ತರಗತಿಯಲ್ಲಿ ಕೂಡಿಸಿದರೆ ನನ್ನನ್ನು ಇದರ ಮಧ್ಯೆ ಸಿಕ್ಕಿಸಕೂಡದು—ಎಂದರೆ ರೈಲ್ವೆ ಕಂಪನಿಯವರ ಮೇಲೆ ದಾವಾ ಮಾಡಕೂಡದು. ನಿಮ್ಮ ಪ್ರಯಾಣವು ನಿರ್ವಿಘ್ನವಾಗಿ ಮುಗಿಯಲೆಂದು ನನ್ನ ಹಾರೈಕೆ. ನೀವು ದೊಡ್ಡ ಮನುಷ್ಯರೆಂದು ನನಗೆ ಗೊತ್ತಾಗುತ್ತದೆ." ಎಂದು ಹೇಳಿ ನನಗೆ ಟಿಕೆಟನ್ನು ಕೊಟ್ಟನು. ನಾನು ಆತನಿಗೆ ಧನ್ಯವಾದವನ್ನು ಹೇಳಿ ಆತನ ಹೇಳಿಕೆಯಂತೆ ನಡೆದುಕೊಳ್ಳುವೆನೆಂದು ಆತನಿಗೆ ಮಾತುಕೊಟ್ಟೆನು.

ಅಬ್ದುಲ್‌ಗನೀ ಸೇಠರು ನನ್ನನ್ನು ಬೀಳ್ಕೊಡಲು ನಿಲ್ದಾಣಕ್ಕೆ ಬಂದಿದ್ದರು. ಈ ಘಟನೆಯನ್ನು ನೋಡಿ ಅವರಿಗೆ ಸಂತೋಷವೂ ಆಶ್ಚರ್ಯವೂ ಉಂಟಾಯಿತು. ಆದರೆ ಅವರು "ನೀವು ಪ್ರಿಟೋರಿಯಾವನ್ನು ತಲಪಿದರೆ ನಾನು ನಿಶ್ಚಿಂತನಾಗುವೆನು. ಗಾರ್ಡ್ ನಿಮ್ಮನ್ನು ಮೊದಲನೆಯ ದರ್ಜೆಯಲ್ಲಿ ಆರಾಮವಾಗಿ ಕುಳಿತುಕೊಳ್ಳಲು ಬಿಡುವುದಿಲ್ಲವೆಂದು ನನಗೆ ಹೆದರಿಕೆ. ಒಂದು ವೇಳೆ ಅವನು ಬಿಟ್ಟರೂ ಪ್ರಯಾಣಿಕರು ಬಿಡುವುದಿಲ್ಲ." ಎಂದು ಎಚ್ಚರಿಕೆ ಕೊಟ್ಟರು.

ನಾನು ಮೊದಲನೆಯ ತರಗತಿಯ ಗಾಡಿಯಲ್ಲಿ ಕುಳಿತುಕೊಂಡೆನು. ರೈಲು ಹೊರಟಿತು. ಜರ್ಮಿಸ್ಟನಿನಲ್ಲಿ ಗಾರ್ಡ್ ಟಿಕೆಟನ್ನು ನೋಡಲು ಬಂದನು. ನನ್ನನ್ನು ನೋಡುತ್ತಲೂ ಅವನು ಸಿಟ್ಟಾಗಿ "ಮೂರನೆಯ ದರ್ಜೆಗೆ ಹೊರಟುಹೋಗು." ಎಂದು ಕೈಬೆರಳಿನಲ್ಲಿ ಸಂಜ್ಞೆಮಾಡಿದನು.

ನಾನು ನನ್ನ ಬಳಿಯಿದ್ದ ಮೊದಲನೆಯ ತರಗತಿಯ ಟಿಕೆಟನ್ನು ತೋರಿಸಿದೆನು. ಅವನು "ಚಿಂತೆಯಿಲ್ಲ! ಮೂರನೆಯ ತರಗತಿಗೆ ನಡೆ." ಎಂದನು

ಈ ಗಾಡಿಯಲ್ಲಿ ಒಬ್ಬನೇ ಒಬ್ಬ ಆಂಗ್ಲ ಪ್ರಯಾಣಿಕನಿದ್ದನು. ಆತನು ಗಾರ್ಡಿಗೆ "ನೀನು ಈ ಸದ್ಗೃಹಸ್ಥನನ್ನು ಏಕೆ ತೊಂದರೆಪಡಿಸುತ್ತೀಯೆ? ಈತನ ಹತ್ತಿರ ಮೊದಲನೆಯ ದರ್ಜೆಯ ಟಿಕೆಟ್ ಇರುವುದು ಕಾಣುವುದಿಲ್ಲವೇನು? ಈತನು ಇಲ್ಲಿ ಕುಳಿತುಕೊಂಡಿರುವುದಕ್ಕೆ ನನಗೆ ಎಳ್ಳಷ್ಟೂ ಅಭ್ಯಂತರವಿಲ್ಲ." ಎಂದು ಹೇಳಿ ನನ್ನಕಡೆ ನೋಡಿ, "ನೀವು ಆರಾಮವಾಗಿ ಕುಳಿತುಕೊಳ್ಳಿರಿ." ಎಂದನು.

ಗಾರ್ಡು "ನಿಮಗೆ ಕೂಲಿಯ ಜೊತೆಗೆ ಕುಳಿತುಕೊಂಡಿರಬೇಕೆಂಬ ಇಚ್ಛೆಯಿದ್ದರೆ ನನಗೇನು?" ಎಂದುಕೊಳ್ಳುತ್ತಾ ಹೊರಟುಹೋದನು.

ರಾತ್ರಿ ಎಂಟುಗಂಟೆಯ ಹೊತ್ತಿಗೆ ರೈಲು ಪ್ರಿಟೋರಿಯಾವನ್ನು ಸೇರಿತು.



## ೧೦

# ಪ್ರಿಟೋರಿಯಾದಲ್ಲಿ ಮೊದಲನೆಯ ದಿನ

ನಾನು ಪ್ರಿಟೋರಿಯಾ ನಿಲ್ದಾಣದಲ್ಲಿ ದಾದಾ ಅಬ್ದುಲ್ಲಾರವರ ವಕೀಲರ ಕಡೆಯಿಂದ ಯಾರಾದರೂ ನನ್ನನ್ನಿದಿರುಗೊಳ್ಳಲು ಬಂದಿರ ಬಹುದೆಂದುಕೊಂಡಿದ್ದೆನು. ಇದಕ್ಕಾಗಿ ಭಾರತೀಯರಾರೂ ಬಂದಿರ ಲಾರರೆಂದು ನನಗೆ ಗೊತ್ತಿದ್ದಿತು. ಏಕೆಂದರೆ ನಾನು ಯಾವ ಭಾರತೀ ಯನ ಮನೆಯಲ್ಲಿಯೂ ಇಳಿದುಕೊಳ್ಳುವುದಿಲ್ಲವೆಂದು ಮಾತುಕೊಟ್ಟಿ ದ್ದೆನು. ಆದರೆ ವಕೀಲರು ಯಾರನ್ನೂ ಕಳುಹಿಸಿರಲಿಲ್ಲ. ಆ ದಿನ ಭಾನು ವಾರವಾದುದರಿಂದ ಬಹಳ ತೊಂದರೆಯಿಲ್ಲದ ಯಾರನ್ನೂ ಕಳುಹಿಸುವು ದಕ್ಕಾಗುತ್ತಿರಲಿಲ್ಲವೆಂದು ಆಮೇಲೆ ನನಗೆ ಗೊತ್ತಾಯಿತು. ನನಗೆ ಏನೂ ತೋಚಲಿಲ್ಲ. ಎಲ್ಲಿಗೆ ಹೋಗುವುದು ಎಂದು ಯೋಚಿಸುತ್ತಾ ನಿಂತೆನು. ಯಾವ ಹೋಟಲಿನವರೂ ನನ್ನನ್ನು ಸೇರಿಸುವುದಿಲ್ಲವೆಂದು ನಾನು ಶಂಕಿಸಿದೆನು.

ಪ್ರಿಟೋರಿಯಾ ನಿಲ್ದಾಣವು ೧೮೯೩ ರಲ್ಲಿದ್ದುದಕ್ಕೂ ೧೯೧೪ ರಲ್ಲಿದ್ದುದಕ್ಕೂ ಬಹು ವ್ಯತ್ಯಾಸವಿದ್ದಿತು. ದೀಪಗಳು ಮಂಕಾಗಿ ಉರಿ ಯುತ್ತಿದ್ದುವು. ಪ್ರಯಾಣಿಕರ ಸಂಖ್ಯೆ ಬಹುಕಡಿಮೆ. ಪ್ರಯಾಣಿಕ ರೆಲ್ಲರೂ ಹೋಗುವವರೆಗೂ ಸುಮ್ಮನಿದ್ದೆನು. ಟಿಕೆಟ್ ಕಲೆಕ್ಟರಿಗೆ (ಟಿಕೆಟುಗಳನ್ನು ಒಟ್ಟುಗೂಡಿಸುವವನು) ತಕ್ಕಮಟ್ಟಿಗೆ ಬಿಡುವಾದ ಮೇಲೆ ನನ್ನ ಟಿಕೆಟನ್ನು ಕೊಟ್ಟು ಆತನನ್ನು ನಾನು ಇರಬಹುದಾದ ಯಾವುದಾದರೂ ಸಣ್ಣ ಭೋಜನ ಶಾಲೆಯಾಗಲಿ ಇನ್ನಾವಸ್ಥಳವಾಗಲಿ ಇದೆಯೇ ಎಂದು ಕೇಳಿ ಆತನು ತೋರಿಸಿದರೆ ಅಲ್ಲಿಗೆ ಹೋಗೋಣ, ಇಲ್ಲದಿದ್ದರೆ ರಾತ್ರಿಯನ್ನು ನಿಲ್ದಾಣದಲ್ಲಿಯೇ ಕಳೆಯೋಣ ಎಂದು ಕೊಂಡೆನು. ಹೀಗೆ ಕೇಳುವುದಕ್ಕೆ ಕೂಡ ನಾನು ಹಿಂಜರಿದೆನೆಂದು ಹೇಳಬೇಕು—ಎಲ್ಲಿ ಅಪಮಾನವಾಗುವುದೋ ಎಂಬ ಭಯ.

ನಿಲ್ದಾಣದಿಂದ ಪ್ರಯಾಣಿಕರೆಲ್ಲರೂ ಹೊರಟುಹೋದರು. ನಾನು ಟಿಕೆಟ್ ಕಲೆಕ್ಟರಿಗೆ ನನ್ನ ಟಿಕೆಟನ್ನು ಕೊಟ್ಟು ಪ್ರಶ್ನೆ ಮಾಡಲು ಪ್ರಾರಂಭಿಸಿದೆನು. ಆತನು ಈ ಪ್ರಶ್ನೆಗಳಿಗೆ ವಿನಯದಿಂದ ಉತ್ತರ ಕೊಟ್ಟನು. ಆದರೆ ಆತನಿಂದ ಹೆಚ್ಚು ಸಹಾಯವೇನೂ ಆಗಲಾರದೆಂದು ನನಗೆ ಗೊತ್ತಾಯಿತು. ಆತನ ಹತ್ತಿರದಲ್ಲಿಯೇ ಅಮೇರಿಕದ ನೀಗ್ರೋ (ಜು) ಮನುಷ್ಯನೊಬ್ಬನು ನಿಂತಿದ್ದನು ಆತನು ನನ್ನೊಡನೆ ಮಾತುಕತೆ ಯಾಡಲು ಪ್ರಾರಂಭಿಸಿದನು.

ಆತನು "ನೀವು ಇಲ್ಲಿ ಮಿತ್ರರಾರೂ ಇಲ್ಲದ ಹೊರಗಿನವರಂತೆ ಕಾಣುತ್ತೀರಿ. ನನ್ನ ಜೊತೆಗೆ ಬಂದರೆ ನಿಮ್ಮನ್ನು ಒಂದು ಸಣ್ಣ ಭೋಜನಶಾಲೆಗೆ ಕರೆದುಕೊಂಡು ಹೋಗುತ್ತೇನೆ. ಅದರ ಮಾಲಿಕನು ಅಮೇರಿಕದವನು. ನನಗೆ ಚೆನ್ನಾಗಿ ತಿಳಿದವನು. ಆತನು ನಿಮ್ಮನ್ನು ಸೇರಿಸಿಕೊಳ್ಳಬಹುದೆಂದು ತೋರುತ್ತದೆ." ಎಂದನು.

ಹೀಗೆ ಸಹಾಯಮಾಡುವ ವಿಷಯದಲ್ಲಿ ನನಗೇನೋ ಸಂಶಯ ಎದ್ದಿತು. ಆದರೂ ನಾನು ಆತನಿಗೆ ಕೃತಜ್ಞತೆಯನ್ನು ತೋರ್ಪಡಿಸಿ ಆತನ ಸೂಚನೆಗೆ ಒಪ್ಪಿದೆನು. ಆತನು ನನ್ನನ್ನು ಜಾನ್‌ಸ್ಟನಿನ 'ಫ್ಯಾಮಿಲಿ ಹೊಟೆಲ್'ಗೆ ಕರೆದುಕೊಂಡು ಹೋದನು. ಆತನು ಜಾನ್‌ಸ್ಟನನ್ನು ಒಂದು ಕಡೆಗೆ ಕರೆದು ಮಾತನಾಡಿದನು. ನಾನು ಇಳಿದಿರುವ ಕೊಠಡಿಯಲ್ಲೇ ಊಟಮಾಡುವ ಕರಾರಿನಮೇಲೆ ಜಾನ್‌ಸ್ಟನು ನನ್ನನ್ನು ಒಂದು ರಾತ್ರಿ ಇರಿಸಿಕೊಳ್ಳಲು ಒಪ್ಪಿದನು.

ಆತನು "ನನಗೆ ಬಿಳಿಯ ಜನ ಕಪ್ಪು ಜನ ಎಂಬ ಭೇದವು ಸ್ವಲ್ಪವೂ ಇಲ್ಲ. ಆದರೆ ನನ್ನ ಗಿರಾಕಿಗಳೆಲ್ಲಾ ಐರೋಪ್ಯರು. ನಿಮಗೆ ಭೋಜನ ಶಾಲೆಯಲ್ಲಿ ಊಟಕ್ಕೆ ಬಡಿಸಿದರೆ ಅವರು ಸಿಟ್ಟುಕೊಳ್ಳಬಹುದು ; ಒಂದು ವೇಳೆ ಇಲ್ಲಿಂದ ಹೊರಟು ಹೋದರೂ ಹೋಗಬಹುದು." ಎಂದನು.

ನಾನು "ನನಗೆ ಇಲ್ಲಿ ಈ ರಾತ್ರಿ ಸ್ಥಳ ಕೊಡಲು ಒಪ್ಪಿದ್ದೀರಿ. ಇದು ಕೂಡ ನನಗೆ ಉಪಕಾರವೇ. ನನಗೆ ಇಲ್ಲಿನ ಪರಿಸ್ಥಿತಿಯು ಗೊತ್ತಾಗುತ್ತಾ ಬಂದಿದೆ. ನಿಮ್ಮ ಕಷ್ಟವು ನನಗೆ ತಿಳಿಯುತ್ತದೆ. ನನ್ನ ಕೋಣೆಯಲ್ಲೇ ನನಗೆ ಊಟಕ್ಕೆ ಬಡಿಸುವ ವಿಚಾರವಾಗಿ

ನಾನೇನೂ ತಿಳಿದುಕೊಳ್ಳುವುದಿಲ್ಲ. ನಾಳೆ ಬೆಳಿಗ್ಗೆ ಇನ್ನೆಲ್ಲಿಯಾದರೂ ಏರ್ಪಾಡು ಮಾಡಿಕೊಳ್ಳಬಹುದೆಂಬ ಆಸೆಯಿಟ್ಟುಕೊಂಡಿದ್ದೇನೆ." ಎಂದು ಉತ್ತರ ಕೊಟ್ಟೆನು.

ನನಗೆ ಒಂದು ಕೊಠಡಿಯನ್ನು ಕೊಟ್ಟರು. ನಾನು ಅಲ್ಲಿ ಊಟಕ್ಕಾಗಿ ಕಾದುಕೊಂಡು ಕುಳಿತೆನು. ನಾನೊಬ್ಬನೇ ಇದ್ದುದರಿಂದ ಆಲೋಚನಾಪರನಾದೆನು. ಹೋಟಲಿನಲ್ಲಿ ಬಹುಮಂದಿ ಗಿರಾಕಿಗಳಿರಲಿಲ್ಲ. ಆದುದರಿಂದ ಸೇವಕನು ಜಾಗ್ರತೆಯಾಗಿಯೇ ಊಟವನ್ನು ತೆಗೆದುಕೊಂಡು ಬರುವನೆಂದು ನಿರೀಕ್ಷಿಸುತ್ತಿದ್ದೆನು. ಅವನ ಬದಲು ಜಾನ್‌ಸ್ಟನರೇ ಬಂದರು. ಅವರು "ನೀವು ಈ ಕೊಠಡಿಯಲ್ಲಿ ಊಟ ಮಾಡಿರೆಂದು ಹೇಳಿದುದಕ್ಕೆ ನನಗೇ ನಾಚಿಕೆಯಾಯಿತು. ಆದುದರಿಂದ ನಾನು ಇತರ ಗಿರಾಕಿಗಳಿಗೆ ಈ ವಿಚಾರವನ್ನು ಹೇಳಿ 'ಅವರು ಭೋಜನ ಗೃಹದಲ್ಲಿ ಊಟ ಮಾಡಿದರೆ ನೀವು ಏನಾದರೂ ತಿಳಿದುಕೊಳ್ಳುವಿರಾ?' ಎಂದು ಅವರನ್ನು ಕೇಳಿದೆನು. ಅದಕ್ಕೆ ಅವರು ತಮ್ಮದೇನೂ ಅಭ್ಯಂತರ ವಿಲ್ಲವೆಂದೂ ನೀವು ಇಲ್ಲಿ ಇಷ್ಟವಿದ್ದಷ್ಟು ದಿನವಿರಬಹುದೆಂದೂ ಹೇಳಿದರು. ಆದುದರಿಂದ ನೀವು ದಯೆಯಿಟ್ಟು ಊಟದ ಮನೆಗೆ ಬನ್ನಿ. ನೀವು ಇಷ್ಟವಿದ್ದಷ್ಟು ದಿನ ಇಲ್ಲಿರಬಹುದು." ಎಂದರು.

ನಾನು ಆತನಿಗೆ ಪುನಃ ನನ್ನ ಕೃತಜ್ಞತೆಯನ್ನು ತಿಳಿಸಿ ಊಟದ ಮನೆಗೆ ಹೋಗಿ ಊಟಮಾಡಿದೆನು.

ಮಾರನೆಯದಿನ ಬೆಳಿಗ್ಗೆ ನಾನು ವಕೀಲರ ಮನೆಗೆ ಹೋದೆನು. ಅವರ ಹೆಸರು ಎ. ಡಬ್ಲ್ಯು. ಬೇಕರ್ ಎಂದು. ಅಬ್ದುಲ್ಲಾ ಸೇಠರು ಅವರ ವಿಚಾರವನ್ನು ನನಗೆ ತಕ್ಕಮಟ್ಟಿಗೆ ತಿಳಿಸಿದ್ದುದರಿಂದ ಅವರು ಮನಃಪೂರ್ವಕವಾಗಿ ನನ್ನನ್ನು ಉಪಚರಿಸಿದುದು ನನಗೇನೂ ಆಶ್ಚರ್ಯ ವನ್ನುಂಟುಮಾಡಲಿಲ್ಲ. ಅವರು ನನ್ನನ್ನು ಬಹಳ ಆದರದಿಂದ ಕಂಡು ನನ್ನ ಯೋಗಕ್ಷೇಮವನ್ನು ವಿಚಾರಿಸಿದರು. ನಾನು ನನ್ನ ವಿಚಾರ ವನ್ನೆಲ್ಲಾ ಅವರಿಗೆ ತಿಳಿಸಿದೆನು. ಆಗ ಅವರು "ಬ್ಯಾರಿಸ್ಟರಾಗಿ ಇಲ್ಲಿ ನೀವು ಮಾಡತಕ್ಕ ಕೆಲಸವೇನೂ ಇಲ್ಲ. ಈ ಮೊಕದ್ದಮೆಗಾಗಿ ನಾವು ಅತ್ಯುತ್ತಮರಾದ ವಕೀಲರನ್ನು ಗೊತ್ತುಮಾಡಿದ್ದೇವೆ. ಈ ಮೊಕದ

ಮೆಯು ದೀರ್ಘಕಾಲದ್ದು ಮತ್ತು ತೊಡಕಾದುದು. ಆದುದರಿಂದ ಆವಶ್ಯಕವಾದ ವಿಚಾರಗಳನ್ನು ತಿಳಿಸುವ ಕೆಲಸಕ್ಕೆ ಮಾತ್ರ ನಿಮ್ಮನ್ನು ಇಟ್ಟುಕೊಳ್ಳುತ್ತೇನೆ. ನಮ್ಮ ಕಕ್ಷಿಗಾರರೊಡನೆ ಪತ್ರವ್ಯವಹಾರ ನಡೆಸುವುದಕ್ಕೆ ಈಗ ಅನುಕೂಲವೇ ಆಯಿತು. ಇನ್ನು ಅವರಿಂದ ತಿಳಿದು ಕೊಳ್ಳಬೇಕಾದ ವಿಷಯಗಳನ್ನೆಲ್ಲಾ ನಿಮ್ಮ ಮೂಲಕವೇ ತರಿಸಿಕೊಳ್ಳು ತ್ತೇನೆ. ನಾನು ನಿಮಗೆ ಇನ್ನೂ ಸ್ಥಳವನ್ನು ಹುಡುಕಿಲ್ಲ. ನಿಮ್ಮನ್ನು ನೋಡಿದಮೇಲೆ ಹುಡುಕುವುದೊಳ್ಳೆಯದೆಂದುಕೊಂಡಿದ್ದೆನು. ಇಲ್ಲಿ ವರ್ಣ ದ್ವೇಷವು ಅತ್ಯಧಿಕವಾಗಿದೆ. ಆದುದರಿಂದ ನಿಮ್ಮಂತಹವರಿಗೆ ಸ್ಥಳವನ್ನು ಹುಡುಕುವುದು ಸುಲಭವಾದ ಕೆಲಸವಲ್ಲ. ಆದರೆ ನನಗೆ ಒಬ್ಬ ಬಡ ಹೆಂಗಸು ಗೊತ್ತು. ಆಕೆಯು ಒಬ್ಬ ರೊಟ್ಟಿಗಾರನ ಹೆಂಡತಿ. ಆಕೆಯು ತನ್ನ ಮನೆಯಲ್ಲಿ ನೀವು ಇರುವುದಕ್ಕೆ ಒಪ್ಪಬಹುದು. ಇದರಿಂದ ಆಕೆಯ ವರಮಾನವೂ ಹೆಚ್ಚಾಗುವುದು. ಬನ್ನಿ, ಆಕೆಯ ಮನೆಗೆ ಹೋಗೋಣ.'' ಎಂದು ಹೇಳಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು. ಅಲ್ಲಿ ಅವರು ಆಕೆಯೊಡನೆ ಏಕಾಂತದಲ್ಲಿ ನನ್ನ ವಿಷಯವಾಗಿ ಸ್ವಲ್ಪ ಹೊತ್ತು ಮಾತ ನಾಡಿದರು. ನಾನು ವಾರಕ್ಕೆ ೩೫ ಷಿಲಿಂಗ್ (ಸುಮಾರು ೨೬।ರೂ.) ಕೊಟ್ಟು ಊಟಮಾಡಿಕೊಂಡು ಆಕೆಯ ಮನೆಯಲ್ಲಿ ವಾಸಿಸುವುದಕ್ಕೆ ಆಕೆಯು ಒಪ್ಪಿದಳು.

ಬೇಕರರು ವಕೀಲರಾಗಿದ್ದುದಲ್ಲದೆ ಶ್ರದ್ಧಾಯುತರಾದ ಲೌಕಿಕ ಧರ್ಮೋಪದೇಶಕರಾಗಿಯೂ ಇದ್ದರು. [ಧರ್ಮೋಪದೇಶವನ್ನೇ ತಮ್ಮ ಮುಖ್ಯ ವೃತ್ತಿಯನ್ನಾಗಿ ಉಳ್ಳವರನ್ನು ವೈದಿಕರೆನ್ನಬಹುದು. ಉದಾ: ಪಾದ್ರಿಗಳು.] ಅವರು ಈಗಲೂ ಜೀವಂತರಾಗಿದ್ದಾರೆ. ವಕೀಲಿಯ ಕೆಲಸವನ್ನು ಬಿಟ್ಟು ಅವರು ಈಸಾಯಿ ಧರ್ಮವನ್ನು ಬೋಧಿಸುವ ಕೆಲಸದಲ್ಲಿ ಮಾತ್ರ ತೊಡಗಿದ್ದಾರೆ. ಹಣಕಾಸು ಇಟ್ಟುಕೊಂಡು ಸುಖವಾಗಿದ್ದಾರೆ. ಅವರು ಈಗ ಕೂಡ ನನ್ನೊಡನೆ ಪತ್ರವ್ಯವಹಾರ ವನ್ನು ನಡೆಸುತ್ತಾರೆ. ಅವರು ಕಾಗದಗಳಲ್ಲಿ ಪ್ರಸ್ತಾಪಿಸುವ ವಿಷಯವು ಯಾವಾಗಲೂ ಒಂದೇ: ಅವರು ಈಸಾಯಿಧರ್ಮವೇ ಪರಮೋತ್ತಮ ವಾದ ಧರ್ಮವೆಂದು ಅನೇಕ ದೃಷ್ಟಿಗಳಿಂದ ಆಧಾರವನ್ನು ಕೊಟ್ಟು

ಯೇಸುವು ದೇವರ ಏಕಮಾತ್ರ ಪುತ್ರನೆಂದೂ ಮಾನವಜಾತಿಯ ರಕ್ಷಕನೆಂದೂ ನಂಬುವವರಿಗೂ ಶಾಶ್ವತವಾದ ಶಾಂತಿಯು ಯಾರಿಗೂ ಸಾಧ್ಯವಲ್ಲವೆಂದು ಪ್ರತಿಪಾದಿಸುತ್ತಾರೆ.

ಮೊದಲನೆಯ ಸಲ ನಮ್ಮಿಬ್ಬರಿಗೂ ಭೆಟ್ಟಿಯಾದಾಗಲೇ ಬೇಕರರು ನನ್ನಿಂದ ನಾನು ಧರ್ಮದ ಸಂಬಂಧವಾಗಿ ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ತಿಳಿದುಕೊಂಡರು. ನಾನು ಅವರಿಗೆ "ನಾನು ಹಿಂದೂ ಧರ್ಮದಲ್ಲಿ ಹುಟ್ಟಿದವನು ; ಆದರೂ ಆ ಧರ್ಮದ ಜ್ಞಾನವು ನನಗೆ ಹೆಚ್ಚಾಗಿಲ್ಲ. ಇತರ ಧರ್ಮಗಳ ಜ್ಞಾನವಂತು ಇನ್ನೂ ಕಡಿಮೆ. ಧರ್ಮ ಸಂಬಂಧವಾಗಿ ನನ್ನ ಪರಿಸ್ಥಿತಿಯೇನು? ನನ್ನ ನಂಬಿಕೆಯೇನು? ನಾನು ನಂಬತಕ್ಕುದೇನು? ಇದಾವುದೂ ನನಗೆ ಸ್ವಲ್ಪವೂ ಗೊತ್ತಿಲ್ಲ. ನನಗೆ ನನ್ನ ಸ್ವಂತ ಧರ್ಮವನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂಬ ಉದ್ದೇಶವಿದೆ. ಸಾಧ್ಯವಾದ ಮಟ್ಟಿಗೆ ಇತರ ಧರ್ಮಗಳ ವಿಚಾರವನ್ನೂ ತಿಳಿದುಕೊಳ್ಳಬೇಕೆಂದಿದ್ದೇನೆ." ಎಂದು ಹೇಳಿದೆನು.

ಬೇಕರರು ಇದನ್ನೆಲ್ಲಾ ಕೇಳಿ ಬಹಳ ಸಂತೋಷಪಟ್ಟು "ಸೌತ್ ಆಫ್ರಿಕಾ ಜನರಲ್ ಮಿಷನ್" [ದಕ್ಷಿಣ ಆಫ್ರಿಕದ ಸುವಾರ್ತಾಪ್ರಚಾರಕ ಸಭೆ—ಅಲ್ಲಿ ಈಸಾಯಿಮತವನ್ನು ಹರಡಲೋಸುಗ ಸ್ಥಾಪಿತವಾದ ಸಂಸ್ಥೆ] ನ ಮೇಲ್ವಿಚಾರಕರಲ್ಲಿ ನಾನೊಬ್ಬನು. ನನ್ನ ಸ್ವಂತ ಖರ್ಚಿನಿಂದ ನಾನು ಒಂದು ಚರ್ಚನ್ನು (ಈಸಾಯಿಯಾ ದೇವಾಲಯ) ಕಟ್ಟಿಸಿದ್ದೇನೆ. ನಾನು ಅಲ್ಲಿ ಆಗಾಗ ತಪ್ಪದೆ ಧರ್ಮದ ವಿಷಯವಾಗಿ ವ್ಯಾಖ್ಯಾನಗಳನ್ನು ಕೊಡುತ್ತೇನೆ. ನನಗೆ ವರ್ಣಭೇದವಿಲ್ಲ. ನನ್ನ ಜೊತೆಗೆ ಇತರ ಮಿತ್ರರೂ ಕೆಲಸ ಮಾಡುತ್ತಿದ್ದಾರೆ. ನಾವು ಪ್ರತಿ ಮಧ್ಯಾಹ್ನವೂ ಒಂದು ಗಂಟೆಗೆ ಒಟ್ಟಿಗೆ ಸೇರಿ ಸ್ವಲ್ಪಹೊತ್ತು ದೇವರನ್ನು ಕುರಿತು ಆತ್ಮಕ್ಕೆ ಶಾಂತಿಯನ್ನೂ ಬೆಳಕನ್ನೂ ಕೊಡಬೇಕೆಂದು ಪ್ರಾರ್ಥಿಸುತ್ತೇವೆ. ನೀವೂ ಅಲ್ಲಿಗೆ ಬಂದರೆ ಸಂತೋಷ. ನಾನು ನಿಮಗೆ ಅವರನ್ನು ಗುರುತು ಮಾಡಿಕೊಡುತ್ತೇನೆ. ನಿಮ್ಮೊಡನೆ ಸೇರುವುದರಿಂದ ಅವರು ಸಂತೋಷಪಡುತ್ತಾರೆ. ಅವರ ಸಮಾಗಮದಿಂದ ನೀವೂ ಪ್ರೀತರಾಗುತ್ತೀರೆಂದು ನನಗೆ ವಿಶ್ವಾಸವಿದೆ. ಮತ್ತು ನಾನು ನಿಮಗೆ ಕೆಲವು ಧರ್ಮಸಂಬಂಧ

ವಾದ ಪುಸ್ತಕಗಳನ್ನು ಓದುವುದಕ್ಕೆ ಕೊಡುತ್ತೇನೆ. ಎಲ್ಲಕ್ಕಿಂತ ಉತ್ತಮವಾದ ಪುಸ್ತಕವು ಪವಿತ್ರವಾದ ಬೈಬಲ್ ಎಂಬುವುದನ್ನು 'ನಾನು ಹೇಳಬೇಕಾದುದೇ ಇಲ್ಲ. ಅದನ್ನು ಓದಬೇಕೆಂದು ನಾನು ನಿಮಗೆ ಆಗ್ರಹಪೂರ್ವಕವಾಗಿ ಹೇಳುತ್ತೇನೆ.'' ಎಂದರು.

ನಾನು ಬೇಕರರನ್ನು ವಂದಿಸಿ ಸಾಧ್ಯವಾದಮಟ್ಟಿಗೂ ತಪ್ಪದೆ ಪ್ರಾರ್ಥನೆಗಾಗಿ ಅವರ ಮಂಡಲಿಯೊಡನೆ ಪ್ರತಿದಿನವೂ ಸೇರಲು ಒಪ್ಪಿದೆನು.

ಬೇಕರರು ''ಹಾಗಾದರೆ ನಾನು ಇಲ್ಲಿ ನಾಳೆ ಒಂದು ಗಂಟೆಗೆ ನಿಮ್ಮನ್ನು ನಿರೀಕ್ಷಿಸುತ್ತೇನೆ. ಒಟ್ಟಿಗೆ ಪ್ರಾರ್ಥನಾಮಂದಿರಕ್ಕೆ ಹೋಗೋಣ'' ಎಂದು ಹೇಳಿದರು. ಒಬ್ಬರನ್ನೊಬ್ಬರು ವಂದಿಸಿ ನಾವು ಬೇರೆಯಾದೆವು.

ದೀರ್ಘವಿಚಾರ ಮಾಡಲು ನನಗೆ ಹೊತ್ತಿರಲಿಲ್ಲ. ನಾನು ಜಾನ್ಸ್ಟನರ ಬಳಿಗೆ ಹೋಗಿ ಕೊಡಬೇಕಾದ ದುಡ್ಡನ್ನು ಕೊಟ್ಟು ಹೊಸಮನೆಗೆ ಬಂದು ಊಟಮಾಡಿದೆನು. ಮನೆಯ ಯಜಮಾನಿಯು ಬಹಳ ಒಳ್ಳೆಯ ಹೆಂಗಸಾಗಿದ್ದಳು. ಆಕೆಯು ನನಗಾಗಿ ಶಾಕಾಹಾರದ ಅಡಿಗೆಯನ್ನು ಮಾಡಿದ್ದಳು. ಈ ಕುಟುಂಬದೊಡನೆ ಹೊಂದಿಕೆಯಿಂದಿರಲು ನನಗೆ ಬಹುಕಾಲ ಹಿಡಿಯಲಿಲ್ಲ.

ದಾದಾ ಅಬ್ದುಲ್ಲಾರವರು ಒಬ್ಬ ಮಿತ್ರರಿಗೆ ಕಾಗದವನ್ನು ಬರೆದು ಕೊಟ್ಟಿದ್ದರು. ನಾನು ಊಟಮಾಡಿ ಅವರನ್ನು ನೋಡುವುದಕ್ಕೆ ಹೋದೆನು. ಅವರಿಂದ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಕಷ್ಟಗಳ ವಿಷಯವು ಇನ್ನೂ ಹೆಚ್ಚಾಗಿ ತಿಳಿಯಬಂದಿತು. ತಮ್ಮ ಜೊತೆಯಲ್ಲಿಯೇ ಇರಬೇಕೆಂದು ಅವರು ಬಲಾತ್ಕಾರ ಮಾಡಿದರು. ನಾನು ಅವರಿಗೆ ನನ್ನ ಕೃತಜ್ಞತೆಯನ್ನು ಹೇಳಿ ನಾನು ಆಗಲೇ ಬೇರೆ ಏರ್ಪಾಡು ಮಾಡಿಕೊಂಡಿರುವೆನೆಂದು ತಿಳಿಸಿದೆನು. ಅವರು ಏನು ಬೇಕಾದರೂ ತಮ್ಮನ್ನು ಕೇಳಲು ಸಂಕೋಚಪಟ್ಟುಕೊಳ್ಳಕೂಡದೆಂದು ಆಗ್ರಹಪೂರ್ವಕವಾಗಿ ಹೇಳಿದರು.

ಅಷ್ಟರಲ್ಲಿ ಕತ್ತಲಾಯಿತು. ಊಟಮಾಡಿಕೊಂಡು ನನ್ನ ಕೋಣೆಗೆ ಹೋಗಿ ಕುಳಿತುಕೊಂಡು ವಿಚಾರಸಾಗರದಲ್ಲಿ ಮುಳುಗಿದೆನು. ಸದ್ಯ

ದಲ್ಲಿಯೇ ಮಾಡಬೇಕಾದ ಕೆಲಸವಾವುದೂ ಕಾಣಲಿಲ್ಲ. ನಾನು
ಅಬ್ದುಲ್ಲಾ ಸೇಠರಿಗೆ ಈ ವಿಷಯವನ್ನು ತಿಳಿಸಿದೆನು. ಬೇಕರರ ಗೆಳೆತನದ
ಅರ್ಥವೇನಿರಬಹುದು ? ಅವರ ಧರ್ಮಬಂಧುಗಳಿಂದ ನನಗೆ ಬರುವ ಲಾಭ
ವೇನು ? ಈಸಾಯೀ ಧರ್ಮದ ಅಧ್ಯಯನವನ್ನು ಎಲ್ಲಿಯವರೆಗೆ ಮಾಡ
ಬೇಕು ? ಹಿಂದೂ ಧರ್ಮದ ಸಾಹಿತ್ಯವನ್ನು ದೊರಕಿಸುವುದೆಲ್ಲಿಂದ ? ನನ್ನ
ಸ್ವಂತ ಧರ್ಮವನ್ನು ಚೆನ್ನಾಗಿ ತಿಳಿದುಕೊಂಡ ಹೊರತು ಈಸಾಯೀ
ಧರ್ಮದ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳಲಾದೀತೆ ? ಈ ಪ್ರಶ್ನೆ
ಗಳೆಲ್ಲಾ ನನ್ನ ಮನಸಿನಲ್ಲಿ ಮೂಡಿದುವು. ಒಂದೇ ಒಂದು ನಿಷ್ಕರ್ಷೆಯು
ಸಾಧ್ಯವಾಗಿದ್ದಿತು. ನಾನು ಈ ಸಂಬಂಧವಾಗಿ ಅಧ್ಯಯನ ಮಾಡಬೇಕಾ
ದುದನ್ನೆಲ್ಲಾ ನಿಷ್ಪಕ್ಷಪಾತವಾಗಿ ಮಾಡಬೇಕು. ಆಮೇಲೆ ಪರಮಾತ್ಮನು
ನನಗೆ ಪ್ರೇರಿಸಿದಂತೆ ಬೇಕರರ ಸಮುದಾಯದೊಡನೆ ನಡೆಯಬೇಕು.
ನನ್ನ ಸ್ವಂತ ಧರ್ಮದ ವಿಚಾರವನ್ನು ಸಂಪೂರ್ಣವಾಗಿ ತಿಳಿದುಕೊಂಡ
ಹೊರತು ಬೇರೆ ಧರ್ಮವನ್ನು ಸ್ವೀಕರಿಸುವ ವಿಷಯವಾಗಿ ಯೋಚನೆ
ಯನ್ನು ಕೂಡ ಮಾಡಕೂಡದು.

ಹೀಗೆ ವಿಚಾರ ಮಾಡುತ್ತಾ ಮಾಡುತ್ತಾ ನಾನು ನಿದ್ರಾವಶ
ನಾದೆನು.



## ೧೧

## ಈಸಾಯಿಾ ಮತದ ಸಂಪರ್ಕ

ನಾನು ಮರುದಿನ ಒಂದು ಗಂಟೆಯ ಹೊತ್ತಿಗೆ ಬೇಕರರ ಪ್ರಾರ್ಥನಾ ಸಭೆಗೆ ಹೋದೆನು. ಅಲ್ಲಿ ನನಗೆ ಮಿಸ್ ಹ್ಯಾರಿಸ್, ಮಿಸ್ ಗ್ಯಾಬ್, ಮಿ. ಕೋಟ್ಸ್ ಮುಂತಾದವರ ಪರಿಚಯವಾಯಿತು. ಪ್ರತಿಯೊಬ್ಬರೂ ಪ್ರಾರ್ಥಿಸಲು ಮೊಣಕಾಲೂರಿ ಕುಳಿತರು. ನಾನೂ ಅವರನ್ನು ಅನುಕರಿಸಿದೆನು. ಪ್ರಾರ್ಥನೆಯಲ್ಲಿ ತಮ್ಮ ತಮ್ಮ ಇಷ್ಟಾರ್ಥಕ್ಕಾಗಿ ದೇವರನ್ನು ಬೇಡುತ್ತಿದ್ದರು. "ಈ ದಿನವು ಶಾಂತತೆಯಿಂದ ಕಳೆಯಲಿ. ದೇವರು ನಮ್ಮ ಅಂತಃಕರಣಗಳ ಬಾಗಿಲನ್ನು ತೆರೆಯಲಿ."— ಈ ರೀತಿಯಾಗಿ ಪ್ರಾರ್ಥಿಸುವುದು ವಾಡಿಕೆಯಾಗಿದ್ದಿತು.

ಈಗ ನನ್ನ ಕ್ಷೇಮಲಾಭಕ್ಕಾಗಿ "ನಮ್ಮೊಡನೆ ಒಂದು ಸೇರುವ ಈ ಸಹೋದರನಿಗೆ ಸನ್ಮಾರ್ಗವನ್ನು ತೋರಿಸು. ನಮಗೆ ಕೊಟ್ಟಿರುವ ಶಾಂತಿಯನ್ನು ಈತನಿಗೂ ಕೊಡು. ನಮ್ಮನ್ನು ಉದ್ಧರಿಸಿರುವ ಯೇಸುವು ಈತನನ್ನೂ ಉದ್ಧರಿಸಲು ನಾವು ಇದೆಲ್ಲವನ್ನೂ ಯೇಸುವಿನಲ್ಲಿ ಬೇಡುತ್ತೇವೆ." ಎಂಬ ಪ್ರಾರ್ಥನೆಯನ್ನು ಸೇರಿಸಿದರು. ಈ ಸಭೆಗಳಲ್ಲಿ ಭಜನೆ ಕೀರ್ತನೆಗಳಾವುವೂ ಇರುತ್ತಿರಲಿಲ್ಲ. ಪ್ರತಿದಿನವೂ ಏನಾದರೊಂದನ್ನು ವಿಶೇಷ ಭಾವದಿಂದ ಬೇಡಿಕೊಂಡಮೇಲೆ ಆಗ ಮಧ್ಯಾಹ್ನದ ಉಪಾಹಾರದ ಸಮಯವಾಗಿರುತ್ತಿದ್ದುದರಿಂದ ಅದನ್ನು ತೆಗೆದುಕೊಳ್ಳಲು ಚದರುತ್ತಿದ್ದೆವು. ಪ್ರಾರ್ಥನೆಯು ಸಾಮಾನ್ಯವಾಗಿ ಐದುನಿಮಿಷಕ್ಕಿಂತ ಹೆಚ್ಚಾಗಿ ಹಿಡಿಯುತ್ತಿರಲಿಲ್ಲ.

ಮಿಸ್ ಹ್ಯಾರಿಸ್, ಮಿಸ್ ಗ್ಯಾಬ್ ಇವರಿಬ್ಬರೂ ಮದುವೆಯಾಗದ ವಸ್ಸಾದ ಹೆಂಗಸರಾಗಿದ್ದರು. ಮಿ. ಕೋಟ್ಸರು ಕ್ವೇಕರ್ (ಈಸಾಯಿಾ ಮತದ ಒಂದು ಗುಂಪು) ಪಂಗಡಕ್ಕೆ ಸೇರಿದವರಾಗಿದ್ದರು. ಆ ಹೆಂಗಸರಿಬ್ಬರೂ ಒಟ್ಟಿಗೆ ವಾಸಿಸುತ್ತಿದ್ದರು. ಅವರು ನನಗೆ ಪ್ರತಿ

ಭಾನುವಾರ ನಾಲ್ಕು ಗಂಟೆಗೆ ಚಹಾ ಕುಡಿಯಲಿಕ್ಕೆ ಬರಬೇಕೆಂದು ಹೇಳಿದ್ದರು.

ಪ್ರತಿ ಭಾನುವಾರವೂ ನಾನೂ ಕೋಟ್ಸರೂ ಸೇರಿದಾಗ ಧರ್ಮ ಸಂಬಂಧವಾಗಿ ಆ ವಾರದ ನನ್ನ ದಿನಚರಿಯನ್ನು ಅವರಿಗೆ ತಿಳಿಸುತ್ತಿದ್ದೆನು. ಯಾವಯಾವ ಪುಸ್ತಕಗಳನ್ನೋದಿದೆನು, ನನ್ನ ಮನಸ್ಸಿಗೆ ಅವು ಹೇಗೆ ಹೊಳೆದುವು ಈ ವಿಚಾರವಾಗಿ ನಾವು ಚರ್ಚಿಸುತ್ತಿದ್ದೆವು. ಆ ಭಗಿನಿಯರು ತಮ್ಮ ಆನಂದದ ಅನುಭವಗಳನ್ನು ಹೇಳಿ ತಾವು ಪಡೆದ ಶಾಂತಿಯ ವಿಚಾರ ವನ್ನು ತಿಳಿಸುತ್ತಿದ್ದರು.

ಕೋಟ್ಸರು ಸರಳಹೃದಯದ ದೃಢಮನಸ್ಸಿನ ಯುವಕರಾಗಿದ್ದರು. ನಾವಿಬ್ಬರೂ ಒಟ್ಟಿಗೆ ತಿರುಗಾಡುವುದಕ್ಕೆ ಹೋಗುತ್ತಿದ್ದೆವು. ಅವರು ಆಗಾಗ ನನ್ನನ್ನು ತಮ್ಮ ಈಸಾಯಿಸಾ ಮಿತ್ರರ ಬಳಿಗೆ ಕರೆದುಕೊಂಡು ಹೋಗುತ್ತಲೂ ಇದ್ದರು.

ನಮ್ಮ ಸ್ನೇಹವು ಗಾಢವಾಗುತ್ತಾ ಬಂದಂತೆಲ್ಲಾ ಅವರು ಪುಸ್ತಕ ಗಳನ್ನು ಆರಿಸಿ ಕಳುಹಿಸತೊಡಗಿದರು. ಇವುಗಳಿಂದ ನನ್ನ ಅಲಮಾರವು ತುಂಬಿಹೋಯಿತು. ಅವರು ನನ್ನಮೇಲೆ ಪುಸ್ತಕದ ಹೊರೆಯನ್ನು ಹೊರಿಸಿದರೆನ್ನಬಹುದು. ನಾನು ಕೇವಲ ಶ್ರದ್ಧೆಯಿಂದ ಆ ಪುಸ್ತಕಗಳನ್ನು ಓದುವೆನೆಂದು ಒಪ್ಪಿದೆನು. ಅವನ್ನು ಓದಿದ ಹಾಗೆಲ್ಲ ಅವುಗಳ ವಿಷಯ ವಾಗಿ ಚರ್ಚೆಮಾಡುತ್ತಿದ್ದೆವು.

ನಾನು ಸನ್ ೧೮೯೩ ರಲ್ಲಿ ಇಂತಹ ಅನೇಕ ಪುಸ್ತಕಗಳನ್ನು ಓದಿ ದೆನು. ನನಗೆ ಆ ಎಲ್ಲ ಪುಸ್ತಕಗಳ ಹೆಸರೂ ನೆನಪಿಲ್ಲ. ಆದರೆ ಅವುಗ ಳಲ್ಲಿ 'ಸಿಟಿ ಟೆಂಪಲ್' [ಈಸಾಯಿಯಾ ದೇವಾಲಯದ ಹೆಸರು] ನ ಡಾ॥ ಪಾರ್ಕ ರರ 'ವ್ಯಾಖ್ಯಾನ' (ಕಾಮೆಂಟರಿ), ಪಿಯರ್ಸನರ 'ಅನೇಕ ಸ್ವತಸಿದ್ಧ ಪ್ರಮಾಣಗಳು' (ಮೆನಿ ಇನ್ ಫಾಲ್ಲಿಬ್ಲ್ ಪ್ರೂಫ್ಸ್) ಮತ್ತು ಬಟ್ಲರರ 'ಸಾಮ್ಯ' (ಅನಾಲಜಿ) ಈ ಪುಸ್ತಕಗಳಿದ್ದುವು. ನನಗೆ ಇವುಗಳಲ್ಲಿ ಕೆಲವು ಭಾಗ ತಿಳಿಯುತ್ತಿರಲಿಲ್ಲ. ಕೆಲವು ಭಾಗಗಳು ಸರಿದೋರುತ್ತಿರ ಲಿಲ್ಲ. ಕೆಲವು ಭಾಗಗಳು ನನ್ನ ಮನಸ್ಸಿಗೆ ಒಪ್ಪುತ್ತಿದ್ದುವು. ನನ್ನ ಅಭಿಪ್ರಾ ಯಗಳನ್ನು ನಾನು ಮರೆಮಾಚದೆ ಕೋಟ್ಸರಿಗೆ ತಿಳಿಸುತ್ತಿದ್ದೆನು.

'ಮೆನಿ ಇನ್ಫ್ಯಾಲ್ಲಿಬ್ಲ್ ಪ್ರೂಫ್ಸ್' ಎನ್ನುವುದರಲ್ಲಿ ಗ್ರಂಥ ಕರ್ತನ ತಿಳಿವಿನ ಮೇರೆಗೆ ಬೈಬಲಿನ ಧರ್ಮದ ಸಮರ್ಥನಕ್ಕೆ ಪ್ರಮಾಣಗಳು ಕೊಡ ಲ್ಪಟ್ಟಿದ್ದವು. ಈ ಪುಸ್ತಕದಿಂದ ನನ್ನ ಮನಸ್ಸಿನ ಮೇಲೆ ಯಾವ ಪರಿ ಣಾಮವೂ ಉಂಟಾಗಲಿಲ್ಲ. ಪಾರ್ಕರರ 'ವ್ಯಾಖ್ಯಾನ'ವು ನೀತಿಪೋಷಕ ವೆಂದು ಹೇಳಬಹುದಾದರೂ ಪ್ರಚಲಿತ ಈಸಾಯಿ ಮತದಲ್ಲಿ ನಂಬಿಕೆ ಯಿಲ್ಲದವನಿಗೆ ಅದರಿಂದ ಯಾವ ಲಾಭವೂ ಉಂಟಾಗುವಂತಿರಲಿಲ್ಲ. ಬಟ್ಲರರ 'ಅನಾಲಜಿ' ಯು ಬಹಳ ಗಂಭೀರವಾದ ಮತ್ತು ಕಠಿಣವಾದ ಪುಸ್ತಕವೆಂದು ನನಗೆ ತೋರಿತು. ಅದನ್ನು ಸರಿಯಾಗಿ ತಿಳಿದುಕೊಳ್ಳಲು ನಾಲ್ಕೈದು ಸಲ ಓದಬೇಕಾಗಿದ್ದಿತು. ನನಗೆ ಈ ಪುಸ್ತಕವು ನಾಸ್ತಿಕ ನನ್ನು ಆಸ್ತಿಕನನ್ನಾಗಿ ಮಾಡಲು ಬರೆದಿರುವಂತೆ ತೋರಿತು. ಈಶ್ವರನ ಅಸ್ತಿತ್ವವನ್ನು ಸಮರ್ಥಿಸಲು ಇದರಲ್ಲಿ ಕೊಟ್ಟಿರುವ ಪ್ರಮಾಣಗಳು ನನಗೆ ಅನಾವಶ್ಯಕವಾಗಿದ್ದುವು. ಏಕೆಂದರೆ ಆಗ ನನ್ನ ನಾಸ್ತಿಕತೆಯು ಕಳೆದಿದ್ದಿತು. ಆದರೆ ಯೇಸುವೊಬ್ಬನೇ ದೇವರ ಅವತಾರವೆಂದೂ ಅವ ನನ್ನು ಮರೆಹೊಗುವುದರಿಂದಲೇ ದೇವರ ಸಾನ್ನಿಧ್ಯವನ್ನೈದುವುದು ಸಾಧ್ಯ ವೆಂದೂ ಪ್ರತಿಪಾದಿಸಲು ಅದರಲ್ಲಿ ಕೊಟ್ಟಿರುವ ಸಮರ್ಥನೆಗಳು ನನ್ನ ಮನಸ್ಸಿಗೆ ಹಿಡಿಯಲೇ ಇಲ್ಲ.

ಆದರೆ ಕೋಟ್ಸರು ಸುಲಭವಾಗಿ ಅಪಜಯವನ್ನು ಒಪ್ಪಿಕೊಳ್ಳುವ ಮನುಷ್ಯರಾಗಿರಲಿಲ್ಲ. ಅವರಿಗೆ ನನ್ನಲ್ಲಿ ಅತಿಶಯವಾದ ಪ್ರೇಮವಿದ್ದಿತು. ಅವರು ನನ್ನ ಕತ್ತಿನಲ್ಲಿದ್ದ ತುಳಸೀಮಣಿಯ (ವೈಷ್ಣವರು ಹಾಕಿಕೊಳ್ಳುವ) ಹಾರವನ್ನು ನೋಡಿದರು. ಇದು ಅವರಿಗೆ ಮೂಢಭಕ್ತಿಯ ಚಿಹ್ನೆ ಯೆಂದು ತೋರಿ ಅವರು ಮನನೊಂದು "ಈ ಮೂಢಭಕ್ತಿಯು ನಿಮಗೆ ತಕ್ಕುದಲ್ಲ. ಎಲ್ಲಿ, ಈ ಕಂಠಿಯನ್ನು ಕಿತ್ತುಬಿಡೋಣ." ಎಂದರು.

ನಾನು, "ಅದಾಗುವುದಿಲ್ಲ. ಅದು ನಮ್ಮ ತಾಯಿಯು ಕೊಟ್ಟ ಪವಿತ್ರವಸ್ತು." ಎಂದೆನು.

"ಹಾಗಾದರೆ ನಿಮಗೆ ಅದರಲ್ಲಿ ನಂಬಿಕೆಯಿದೆಯೇನು?"

"ನನಗೆ ಇದರ ಗೂಢಾರ್ಥವು ಗೊತ್ತಿಲ್ಲ. ಅದನ್ನು ಹಾಕಿಕೊಂಡಿ ರದಿದ್ದರೆ ಕೇಡುಂಟಾಗುವುದೆಂದು ನಾನು ಎಣಿಸುವುದಿಲ್ಲ. ಆದರೆ

ಪ್ರೇಮಪೂರ್ವಕವಾಗಿಯೂ ನನಗೆ ಹಿತವುಂಟಾಗುವುದೆಂಬ ನಂಬಿಕೆಯಿಂದಲೂ ನಮ್ಮ ತಾಯಿಯು ನನಗೆ ಇದನ್ನು ಹಾಕಿಕೊಳ್ಳಲು ಕೊಟ್ಟಿರಾದುದರಿಂದ ಕಾರಣವಿಲ್ಲದೆ ನಾನು ಇದನ್ನು ತೆಗೆಯಲಾಗುವದಿಲ್ಲ. ನಾಳೆ ಇದು ಜೀರ್ಣವಾಗಿ ಹರಿದುಹೋದಮೇಲೆ ಇನ್ನೊಂದು ಹಾರವನ್ನು ಹಾಕಿಕೊಳ್ಳಬೇಕೆಂಬ ಲೋಭವು ನನಗುಂಟಾಗುವದಿಲ್ಲ. ಆದರೆ ಈ ಕಂಠಿಯನ್ನು ಕಿತ್ತುಹಾಕಲಾಗುವುದಿಲ್ಲ.''

ನಮ್ಮ ಧರ್ಮದಲ್ಲಿ ಕೋಟ್ಸರಿಗೆ ಮನ್ನಣೆಯಿಲ್ಲದಿದ್ದುದರಿಂದ ನನ್ನ ತರ್ಕವು ಅವರ ಒಪ್ಪಿಗೆಗೆ ಬರಲಿಲ್ಲ. ಅವರು ನನ್ನನ್ನು ಅಜ್ಞಾನಕೂಪದಿಂದ ಎತ್ತಬೇಕೆಂಬ ಆಸೆಯನ್ನಿಟ್ಟುಕೊಂಡಿದ್ದರು. ''ಇತರ ಮತಗಳಲ್ಲಿ ಅಷ್ಟು ಇಷ್ಟು ಸತ್ಯವಿದ್ದರೆ ಕೂಡ ಏನು? ನೀವು ಪೂರ್ಣ ಸತ್ಯವನ್ನೊಳಗೊಂಡಿರುವ ಈಸಾಯಿಾ ಧರ್ಮವನ್ನು ಸ್ವೀಕರಿಸಿದ ಹೊರತು ನಿಮಗೆ ಮೋಕ್ಷವನ್ನು ಪಡೆಯುವುದು ಸಾಧ್ಯವಲ್ಲ. ಮತ್ತು ಯೇಸುವಿನ ಮಧ್ಯಸ್ಥಿಕೆಯಿಲ್ಲದೆ ಪಾಪಗಳನ್ನು ಕಳೆದುಕೊಳ್ಳಲಾಗುವುದಿಲ್ಲ. ಸತ್ಕರ್ಮಗಳು ನಿರರ್ಥಕ.'' ಎಂಬುದನ್ನು ನನ್ನ ಮನಸ್ಸಿಗೆ ಒಪ್ಪಿಸಬೇಕೆಂದು ಅವರು ಅಪೇಕ್ಷಿಸುತ್ತಿದ್ದರು.

ಕೋಟ್ಸರು ನನಗೆ ಅನೇಕ ಪುಸ್ತಕಗಳ ಪರಿಚಯವನ್ನು ಮಾಡಿಕೊಟ್ಟಂತೆಯೇ ತಮ್ಮ ಗಣನೆಯಲ್ಲಿ ಕ್ರೈಸ್ತಮತದಲ್ಲಿ ದೃಢ ನಂಬಿಕೆಯನ್ನಿಟ್ಟಿದ್ದ ಕೆಲವು ಮಿತ್ರರ ಗುರುತನ್ನೂ ಮಾಡಿಕೊಟ್ಟರು: ಹೀಗೆ ಗುರುತಾದವರಲ್ಲಿ ''ಪ್ಲಿಮತ್ ಬ್ರದರ್ನ್''(೩೨)(ಒಂದು ಕ್ರೈಸ್ತಪಂಗಡ) ಸಂಪ್ರದಾಯಕ್ಕೆ ಸೇರಿದ ಒಂದು ಕುಟುಂಬವಿದ್ದಿತು.

ಕೋಟ್ಸರವರು ಪರಿಚಯ ಮಾಡಿಕೊಟ್ಟವರಲ್ಲಿ ಅನೇಕರು ಸದ್ಗೃಹಸ್ಥರಾಗಿದ್ದರು. ಅವರಲ್ಲಿ ಹೆಚ್ಚುಮಂದಿ ನನಗೆ ದೇವರಲ್ಲಿ ಭಯಭಕ್ತಿಯುಳ್ಳವರಂತೆ ಕಂಡರು. ಆದರೆ ಮೇಲೆ ಹೇಳಿದ ಕುಟುಂಬದೊಡನೆ ಛಳಕೆಯಲ್ಲಿರುವಾಗ ಅವರಲ್ಲಿ ಒಬ್ಬರು ಈ ಕೆಳಗೆ ಕಂಡಂತೆ ವಾದಿಸಿದರು. ಈ ವಾದಕ್ಕೆ ನಾನು ಸಿದ್ಧನಾಗಿರಲಿಲ್ಲ.

''ನಮ್ಮ ಮತದ ವಿಶೇಷತೆಯು ನಿಮಗೆ ತಿಳಿಯುವುದಿಲ್ಲ. ನಿಮ್ಮ ಮಾತು ಕತೆಯಿಂದ ನೀವು ಸದಾ ನಿಮ್ಮ ತಪ್ಪುಗಳ ವಿಚಾರ ಯೋಚನೆ

ಮಾಡುತ್ತಿರುವಿರೆಂದೂ ಅವುಗಳನ್ನು ತಿದ್ದುತ್ತಲೂ ಪ್ರಾಯಶ್ಚಿತ್ತಮಾಡಿ ಕೊಳ್ಳುತ್ತಲೂ ಇರುವಿರೆಂದೂ ತೋರುತ್ತದೆ. ಈ ಎಡೆಬಿಡದ ಕರ್ಮ ಚಕ್ರವು ನಿಮಗೆ ಮುಕ್ತಿ ದೊರಕಿಸುವುದೆಂತು? ನಿಮಗೆ ಎಂದಿಗೂ ಶಾಂತಿಯು ದೊರಕುವುದಿಲ್ಲ. ನಾವೆಲ್ಲರೂ ಪಾಪಿಗಳೆಂದು ನೀವು ಒಪ್ಪಿಕೊಳ್ಳುತ್ತೀರಿ. ಈಗ ನಮ್ಮ ಮತದ ಪರಿಪೂರ್ಣತೆಯನ್ನು ನೋಡಿ. ಈ ಪ್ರಯತ್ನಗಳೆಲ್ಲಾ ವ್ಯರ್ಥ. ಆದರೂ ನಮಗೆ ಮುಕ್ತಿಯು ಬೇಕು. ಪಾಪದ ಹೊರೆಯನ್ನು ನಾವು ಹೊತ್ತುಕೊಂಡಿರುವುದಕ್ಕಾ ಗುತ್ತದೆಯೆ? ಆ ಭಾರವನ್ನು ಯೇಸುವಿನ ಮೇಲೆ ಹಾಕುವುದು ಮಾತ್ರ ಸಾಧ್ಯ. ಆತನು ಈಶ್ವರನ ಏಕಮಾತ್ರ ನಿಷ್ಪಾಪ ಪುತ್ರನು. "ನನ್ನನ್ನು ನಂಬುವವರು ಅನಂತ ಜೀವಿಗಳಾಗುವರು." ಎಂದು ಆತನು ವಾಗ್ದಾನ ಮಾಡಿದ್ದಾನೆ. ಇದೇ ಈಶ್ವರನ ಅಗಾಧ ಕರುಣೆ. ನಾವು ಯೇಸುವಿನ ಮೂಲಕ ಪಾಪನಿವೃತ್ತಿಯಲ್ಲಿ ನಂಬುವುದರಿಂದ ನಮ್ಮ ಸ್ವಂತ ಪಾಪಗಳೂ ನಮ್ಮನ್ನು ತಟ್ಟುವುದಿಲ್ಲ. ನಾವು ಪಾಪಕರ್ಮಗಳನ್ನೆಸಗಲೇಬೇಕು. ಪಾಪಮಾಡದೆ ಈ ಜಗತ್ತಿನಲ್ಲಿ ಜೀವಿಸಲು ಯಾರಿಗೆ ಸಾಧ್ಯ? ಆದುದ ರಿಂದಲೇ ಯೇಸುವು ಮನುಷ್ಯವರ್ಗದ ಪಾಪಕ್ಕೆಲ್ಲಾ ಒಮ್ಮೆಯೇ ಪ್ರಾಯಶ್ಚಿತ್ತಮಾಡಿದ್ದಾನೆ. ಆತನ ಮಹಾಬಲಿದಾನವನ್ನು ನಂಬುವವ ರಿಗೆ ಮಾತ್ರ ಅನಂತ ಶಾಂತಿಯನ್ನು ಹೊಂದುವುದು ಸಾಧ್ಯ. ಆ ಶಾಂತಿ ಯೆಡೆಬಿಡದ ನಿಮ್ಮ ಜೀವನವನ್ನೂ ನಾವು ಪಡೆದಿರುವ ಶಾಂತಿಯ ವರ ದಾನವನ್ನೂ ನೋಡಿ!"

ಹೀಗೆ ಆತನು ವಾದಿಸಿದುದು ನನ್ನ ಮನಸ್ಸಿಗೆ ಸ್ವಲ್ಪವೂ ಒಪ್ಪಲಿಲ್ಲ. ನಾನು ನಮ್ರತೆಯಿಂದ, "ಇದೇ ಎಲ್ಲಾ ಈಸಾಯಿಗಳೂ ಮನ್ನಿಸುವ ಕ್ರೈಸ್ತ ಧರ್ಮವಾದರೆ ನನಗೆ ಈ ಧರ್ಮವು ಬೇಡ. ನಾನು ನನ್ನ ಪಾಪದ ಪರಿಣಾಮದಿಂದ ತಪ್ಪಿಸಿಕೊಳ್ಳಬೇಕೆಂದು ಇಚ್ಛಿಸುವುದಿಲ್ಲ. ನಾನು ಬಯಸುವುದು ಪಾಪವೃತ್ತಿಯಿಂದ ಅಥವಾ ಪಾಪಕರ್ಮಕ್ಕೆ ಕಾರಣವಾದ ಮನೋವೃತ್ತಿಯಿಂದಲೇ ಬಿಡುಗಡೆ ಹೊಂದಬೇಕೆಂದು. ಈ ಲಕ್ಷ್ಯವನ್ನು ಸಾಧಿಸುವವರೆಗೂ ನನ್ನ ಅಶಾಂತಿಯೇ ನನಗೆ ತೃಪ್ತಿಕ ರವಾಗಿರುತ್ತದೆ." ಎಂದು ಉತ್ತರ ಕೊಟ್ಟೆನು.

ಇದಕ್ಕೆ ಅವರು "ನಿಮ್ಮ ಪ್ರಯತ್ನವು ಫಲವಿಲ್ಲದುದೆಂದು ನಾನು ಖಂಡಿತವಾಗಿ ಹೇಳುತ್ತೇನೆ. ನಾನು ಹೇಳಿದುದರ ವಿಚಾರವಾಗಿ ಪುನಃ ಯೋಜನೆಮಾಡಿ." ಎಂದರು.

ಇವರು ತಾವು ಹೇಳಿದುದನ್ನು ತಮ್ಮ ನಡತೆಯಿಂದಲೇ ತೋರಿಸಿದರು— ತಿಳಿದು ತಿಳಿದು ಅನೀತಿಯಿಂದ ವರ್ತಿಸಿ ಅದರಿಂದ ಯಾವ ಯೋಜನೆಯೂ ಇಲ್ಲದೆ ಸ್ವಸ್ಥಚಿತ್ತರಾಗಿರುವುದನ್ನು ತೋರ್ಪಡಿಸಿದರು.

ಆದರೆ ನನಗೆ ಈ ಮಿತ್ರರ ಪರಿಚಯವಾಗುವುದಕ್ಕೆ ಮುಂಚೆಯೇ ಎಲ್ಲಾ ಈಸಾಯಿಗಳೂ ಪಾಪನಿವೃತ್ತಿಯ ವಿಷಯವಾಗಿ ಈ ತೆರನಾದ ನಂಬಿಕೆಯನ್ನಿಟ್ಟುಕೊಂಡಿಲ್ಲವೆನ್ನುವುದು ಗೊತ್ತಿದ್ದಿತು. ಕೋಟ್ಸರವರು ಸ್ವಯಂ ಈಶ್ವರನಲ್ಲಿ ಭಯ ಭಕ್ತಿಯಿಟ್ಟು ನಡೆಯುತ್ತಿದ್ದರು. ಅವರ ಹೃದಯವು ನಿರ್ಮಲವಾಗಿದ್ದಿತು. ಅವರು ಆತ್ಮಶುದ್ಧೀಕರಣವು ಸಾಧ್ಯವೆಂದು ನಂಬಿದ್ದರು. ಆ ಹೆಂಗಸರಿಬ್ಬರೂ ಇದೇ ನಂಬಿಕೆಯುಳ್ಳವರಾಗಿದ್ದರು. ನನ್ನ ಕೈಗೆ ಬಂದ ಪುಸ್ತಕಗಳಲ್ಲಿ ಕೆಲವು ಭಕ್ತಿಪೂರ್ಣವಾಗಿದ್ದವು. ಆದುದರಿಂದ ನನ್ನ ಈ ಅನುಭವದಿಂದ ಕೋಟ್ಸರವರಿಗೆ ಬಹಳ ಗಾಬರಿಯಾದರೂ ನಾನು ಅವರಿಗೆ ಈ ಪ್ಲಿಮತ್ ಬ್ರದರಿನ ಅನುಚಿತ ಅಭಿಪ್ರಾಯಗಳು ನನ್ನಲ್ಲಿ ಕ್ರೈಸ್ತಧರ್ಮದ ವಿಷಯವಾಗಿ ಅನಾದರವನ್ನು ಹುಟ್ಟಿಸಲಾರವೆಂದು ಹೇಳಿ ಸಮಾಧಾನ ಪಡಿಸಲು ಸಾಧ್ಯವಾಯಿತು.

ನನ್ನ ಸಂದೇಹಗಳಿದ್ದುದು ಬೇರೆಕಡೆ— ಬೈಬಲ್ ಮತ್ತು ಅದರ ರೂಢಾರ್ಥದಲ್ಲಿ.



೧೨

# ಭಾರತೀಯರೊಡನೆ ಪರಿಚಯ

ಈಸಾಯಿಗಾ ಜನರ ಪರಿಚಯದ ಸಂಬಂಧವಾಗಿ ಇನ್ನೂ ಹೆಚ್ಚಾಗಿ ಬರೆಯುವುದಕ್ಕೆ ಮುಂಚೆ ಆಗಿನ ನನ್ನ ಇತರ ಅನುಭವಗಳ ವಿಚಾರವಾಗಿ ಬರೆಯಬೇಕು.

ನೇಟಾಲಿನಲ್ಲಿ ದಾದಾ ಅಬ್ದುಲ್ಲಾರವರು ಯಾವ ಸ್ಥಾನವನ್ನು ಹೊಂದಿದ್ದರೋ ಪ್ರಿಟೋರಿಯಾದಲ್ಲಿ ಸೇಠ್ ತಯ್ಯಬ್ ಹಾಜಿ ಖಾನ್ ಮುಹಮ್ಮದರು ಅದೇ ಸ್ಥಾನವನ್ನು ವಹಿಸಿದ್ದರು. ಇವರ ಸಹಾಯವಿಲ್ಲದೆ ಅಲ್ಲಿ ಯಾವ ಸಾರ್ವಜನಿಕ ಕಾರ್ಯವೂ ಸಾಗುತ್ತಿರಲಿಲ್ಲ. ನಾನು ಮೊದಲನೆಯ ವಾರವೇ ಇವರನ್ನು ಗುರುತುಮಾಡಿಕೊಂಡು ಪ್ರಿಟೋರಿಯಾದಲ್ಲಿರುವ ಭಾರತೀಯರೆಲ್ಲರ ಪರಿಚಯವನ್ನೂ ಹೊಂದಲಿಚ್ಛಿಸುವೆನೆಂದು ಅವರಿಗೆ ಹೇಳಿದೆನು. ಅಲ್ಲಿನ ಭಾರತೀಯರ ಪರಿಸ್ಥಿತಿಯನ್ನು ತಿಳಿದುಕೊಳ್ಳಬೇಕೆಂಬ ನನ್ನ ಉದ್ದೇಶವನ್ನು ತಿಳಿಸಿ ಅವರ ಸಹಾಯವನ್ನು ಬೇಡಿದೆನು. ಅವರು ಸಂತೋಷದಿಂದ ಅದಕ್ಕೆ ಒಪ್ಪಿದರು.

ಅಲ್ಲಿದ್ದ ಭಾರತೀಯರನ್ನೆಲ್ಲಾ ಸಭೆಗೂಡಿಸಿ ಅವರಿಗೆ ಟ್ರಾನ್ಸ್ವಾಲಿನಲ್ಲಿ ತಮ್ಮ ನಿಜವಾದ ಪರಿಸ್ಥಿತಿಯನ್ನು ವರ್ಣಿಸಿದುದೇ ನಾನು ಕೈಗೊಂಡ ಮೊದಲನೆಯ ಕೆಲಸ. ಈ ಸಭೆಯು ಸೇಠ್ ಹಾಜಿ ಮುಹಮ್ಮದ್ ಹಾಜಿ ಜುಸುಬ್‌ರವರ ಮನೆಯಲ್ಲಿ ನಡೆಯಿತು. (ನಾನು ಈ ಸೇಠರಿಗೆ ಬರೆದ ಒಂದು ಪರಿಚಯಪತ್ರವನ್ನು ತಂದಿದ್ದೆನು). ಇದಕ್ಕೆ ಮುಖ್ಯವಾಗಿ ಮೆಮನ್ ವ್ಯಾಪಾರಿಗಳೇ ಬಂದಿದ್ದರು. ಕೆಲವು ಹಿಂದುಗಳೂ ಸೇರಿದ್ದರು. ವಸ್ತುತಃ ಪ್ರಿಟೋರಿಯಾಗಲ್ಲಿ ಹಿಂದುಗಳ ಸಂಖ್ಯೆಯು ಬಹು ಕಡಿಮೆಯಾಗಿದ್ದಿತು.

ನನ್ನ ಜೀವಮಾನದಲ್ಲ ನಾನು ನಾಲ್ಕು ಮಂದಿಯ ಮುಂದೆ ಉಪನ್ಯಾಸ ಮಾಡಿದುದು ಈ ಸಭೆಯಲ್ಲಿಯೇ ಮೊದಲೆಂದು ಹೇಳ

ಬಹುದು. ನಾನು ಭಾಷಣಕ್ಕೆ ಸಿದ್ಧಪಡಿಸಿಕೊಂಡು ಹೋಗಿದ್ದೆನು. ವ್ಯಾಪಾರದಲ್ಲಿ ಸತ್ಯದಿಂದ ವರ್ತಿಸುವುದೇ ಈ ಭಾಷಣದ ವಿಷಯವಾಗಿದ್ದಿತು. ವ್ಯಾಪಾರದಲ್ಲಿ ಸತ್ಯದಿಂದ ನಡೆಯುವುದಾಗುವುದಿಲ್ಲವೆಂದು ವರ್ತಕರು ಯಾವಾಗಲೂ ಹೇಳುವುದನ್ನು ಕೇಳಿದ್ದೆನು. ನಾನು ಆಗಲೂ ಹಾಗೆ ತಿಳಿದುಕೊಂಡಿರಲಿಲ್ಲ, ಈಗಲೂ ತಿಳಿದುಕೊಂಡಿಲ್ಲ. ವ್ಯಾಪಾರದಲ್ಲಿ ಸತ್ಯವು ನಡೆಯುವುದಿಲ್ಲವೆಂದು ಹೇಳುವ ವರ್ತಕಮಿತ್ರರು ನನಗೆ ಈಗಲೂ ಇದ್ದಾರೆ. ಅವರು "ವ್ಯಾಪಾರವು ವ್ಯವಹಾರದ ವಿಷಯ, ಸತ್ಯವು ಧಾರ್ಮಿಕ ವಿಷಯ; ವ್ಯವಹಾರವು ಬೇರೆ, ಧರ್ಮವು ಬೇರೆ; ವ್ಯವಹಾರದಲ್ಲಿ ಶುದ್ಧ ಸತ್ಯವು ಎಂದಿಗೂ ನಡೆಯುವುದಿಲ್ಲ. ಸಾಧ್ಯವಾದ ಮಟ್ಟಿಗೆ ಮಾತ್ರ ಸತ್ಯವನ್ನು ಹೇಳಬಹುದು." ಎಂದು ವಾದಿಸುತ್ತಾರೆ. ನನ್ನ ಭಾಷಣದಲ್ಲಿ ನಾನು ಈ ಅಭಿಪ್ರಾಯಗಳನ್ನು ಬಲವಾಗಿ ವಿರೋಧಿಸಿ ಅವರ ಕರ್ತವ್ಯವನ್ನು ಅವರು ಎಣಿಸಬೇಕೆಂದು ಅವರನ್ನು ಎಚ್ಚರಿಸಿ ಅದು ದ್ವಿಗುಣವಾದುದೆಂದು ತೋರಿಸಿದೆನು. ಅವರು ಪರದೇಶಕ್ಕೆ ಬಂದಿದ್ದುದರಿಂದ ಅವರ ಜವಾಬ್ದಾರಿಯು ಹೆಚ್ಚಾಯಿತೆಂದೂ ಏಕೆಂದರೆ ಈ ಸ್ವಲ್ಪ ಜನರ ನಡತೆಯಿಂದಲೇ ಹಿಂದೂಸ್ಥಾನದ ಕೋಟ್ಯಂತರ ಜನರ ಯೋಗ್ಯತೆಯನ್ನು ಅಲ್ಲಿಯವರು ಅಳೆಯುವರೆಂದೂ ತಿಳಿಸಿದೆನು.

ಸುತ್ತಮುತ್ತಲಿನ ಆಂಗ್ಲೇಯರೊಡನೆ ಹೋಲಿಸಿ ನೋಡಿದರೆ ನಮ್ಮವರ ಜೀವನದ ರೀತಿಯಲ್ಲಿ ಕೊಳೆಗೆ ಹೆಚ್ಚು ಅವಕಾಶವಿದ್ದಿತೆಂದು ತೋರಿತು. ಈ ವಿಷಯವನ್ನು ನಾನು ಅವರ ಗಮನಕ್ಕೆ ತಂದೆನು. ತಮ್ಮಲ್ಲಿ ಹಿಂದೂ, ಮುಸಲ್ಮಾನ, ಪಾರಸೀ, ಈಸಾಯಿ ಅಥವಾ ಗುಜರಾತಿ, ಪಂಜಾಬಿ, ಮದರಾಸಿ, ಸಿಂಧಿ, ಕಚ್ಛಿ, ಸೂರತಿ, ಇವೇ ಮೊದಲಾದ ತಾರತಮ್ಯಗಳನ್ನು ಮರೆತುಬಿಡಬೇಕೆಂದು ಆಗ್ರಹಪೂರ್ವಕವಾಗಿ ಹೇಳಿದೆನು.

ಅಲ್ಲಿ ಒಂದು ಸಂಘವನ್ನೇರ್ಪಡಿಸಬೇಕೆಂದೂ ಇದರ ಮುಖಾಂತರ ಭಾರತೀಯರ ತೊಂದರೆಗಳ ವಿಚಾರವನ್ನು ಅಲ್ಲಿನ ಅಧಿಕಾರಿಗಳಿಗೆ ತಿಳಿಸಬೇಕೆಂದೂ ಸೂಚಿಸಿದೆನು. ನನಗೆ ವಿರಾಮವಾದಾಗಲೆಲ್ಲ ಈ ಸಂಘಕ್ಕಾಗಿ ಕೆಲಸ ಮಾಡುವೆನೆಂದೂ ಹೇಳಿದೆನು.

ನಾನು ಹೇಳಿದುದು ಅಲ್ಲಿದ್ದವರ ಮನಸ್ಸಿಗೆ ಚೆನ್ನಾಗಿ ಹತ್ತಿತೆಂದು ನನಗೆ ಕಂಡಿತು.

ನನ್ನ ಭಾಷಣವು ಮುಗಿದ ಮೇಲೆ ಚರ್ಚೆಯು ಪ್ರಾರಂಭವಾಯಿತು. ಕೆಲವರು ಅಲ್ಲಿನ ಪರಿಸ್ಥಿತಿಯ ವಿಚಾರವಾಗಿ ವಿಷಯಗಳನ್ನು ನನಗೆ ತಿಳಿಸುವುದಕ್ಕೆ ಒಪ್ಪಿಕೊಂಡರು. ನನಗೂ ಇದರಿಂದ ಪ್ರೋತ್ಸಾಹವಾಯಿತು. ಆ ಸಭೆಯಲ್ಲಿದ್ದವರಲ್ಲಿ ಸ್ವಲ್ಪ ಮಂದಿಗೆ ಮಾತ್ರ ಇಂಗ್ಲಿಷ್ ಬರುತ್ತಿದ್ದಿತೆನ್ನುವುದನ್ನು ಕಂಡೆನು. ಆ ದೇಶದಲ್ಲಿ ಇಂಗ್ಲಿಷ್ ಭಾಷೆಯು ಜ್ಞಾನದಿಂದ ಬಹಳ ಸಹಾಯವಾಗುವುದೆಂದು ಯೋಚಿಸಿ ವಿರಾಮವಿದ್ದವರು ಅದನ್ನು ಕಲಿತುಕೊಳ್ಳಬೇಕೆಂದು ಸಲಹೆ ಕೊಟ್ಟೆನು. ವಯಸ್ಸಾದ ಮೇಲೆ ಕೂಡ ಭಾಷೆಯನ್ನು ಕಲಿಯುವುದು ಸಾಧ್ಯವೆಂದು ಹೇಳಿ ಹಾಗೆ ಕಲಿತುಕೊಂಡವರ ದೃಷ್ಟಾಂತಗಳನ್ನು ಕೊಟ್ಟೆನು. ಇದನ್ನು ಕಲಿಯುವುದಕ್ಕೆ ಒಂದು ವರ್ಗವನ್ನು ಸೇರಿಸಿದರೆ ನಾನು ಪಾಠ ಹೇಳಿಕೊಡುವೆನೆಂದೂ ಅಥವಾ ಕಲಿಯಬೇಕೆಂಬ ಇಚ್ಛೆಯಿರುವವರಿಗೆ ಕಲಿಸುವೆನೆಂದೂ ತಿಳಿಸಿದೆನು.

ವರ್ಗವನ್ನೇನೂ ಕೂಡಿಸಲಾಗಲಿಲ್ಲ. ಆದರೆ ಮೂರು ಜನ ಯುವಕರು ನಾನು ಅವರ ಮನೆಗಳಿಗೆ ಹೋಗಿ ಹೇಳಿಕೊಡುವುದಾದರೆ ಕಲಿತುಕೊಳ್ಳುವೆವೆಂದು ತಿಳಿಸಿದರು. ಇವರಲ್ಲಿ ಇಬ್ಬರು ಮುಸಲ್ಮಾನರಾಗಿದ್ದರು. ಒಬ್ಬಾತನು ನಾಯಿಂದ, ಇನ್ನೊಬ್ಬಾತನು ಗುಮಾಸ್ತ, ಮೂರನೆಯಾತನು ಚಿಲ್ಲರೆ ಅಂಗಡಿಯನ್ನಿಟ್ಟುಕೊಂಡಿದ್ದ ಒಬ್ಬ ಹಿಂದೂ. ನಾನು ಇವರೆಲ್ಲರ ಅನುಕೂಲಕ್ಕೆ ಸರಿಯಾಗಿ ಹೇಳಿಕೊಡಲು ಒಪ್ಪಿಕೊಂಡೆನು. ನನ್ನಲ್ಲಿ ಪಾಠ ಹೇಳಿಕೊಡುವ ಶಕ್ತಿಯಿರುವದೆಂಬ ವಿಷಯದಲ್ಲಿ ನನಗೆ ಸ್ವಲ್ಪವೂ ಅವಿಶ್ವಾಸವಿರಲಿಲ್ಲ. ನನ್ನ ಶಿಷ್ಯರು ಬೇಸರಪಟ್ಟರೂ ನಾನು ಬೇಸರಪಡುವವನಾಗಿರಲಿಲ್ಲ. ಕೆಲವು ಸಮಯಗಳಲ್ಲಿ ನಾನು ಅವರ ಬಳಿಗೆ ಹೋದಾಗ ಅವರು ಅವರ ಕೆಲಸಗಳಲ್ಲಿ ತೊಡಗಿರುವುದನ್ನು ನೋಡುವುದಕ್ಕೆ ಮಾತ್ರವೇ ಹೋದಂತಾಗುತ್ತಿದ್ದಿತು. ಆದರೂ ನಾನು ತಾಳ್ಮೆಗೆಡಲಿಲ್ಲ. ಅವರಲ್ಲಿ ಯಾರಿಗೂ ಇಂಗ್ಲಿಷ್ ಭಾಷೆಯನ್ನು ಸಾಂಗವಾಗಿ ಕಲಿಯಬೇಕೆಂಬ ಇಚ್ಛೆಯಿರಲಿಲ್ಲ. ಅವರಲ್ಲಿ ಇಬ್ಬರು

ಸುಮಾರು ಎಂಟು ತಿಂಗಳಲ್ಲಿ ಇಂಗ್ಲಿಷಿನಲ್ಲಿ ಮಾತುಕತೆಯಾಡುವ ಯೋಗ್ಯತೆಯನ್ನು ತಕ್ಕಮಟ್ಟಿಗೆ ಚೆನ್ನಾಗಿಯೇ ಸಂಪಾದಿಸಿದರೆಂದು ಹೇಳಬಹುದು. ಇಬ್ಬರು ಲೆಕ್ಕವನ್ನಿಡುವುದಕ್ಕೂ ಮತ್ತು ಸಾಧಾರಣವಾಗಿ ಕಾಗದಪತ್ರಗಳನ್ನು ಬರೆಯುವುದಕ್ಕೂ ಸಾಕಾಗುವಷ್ಟು ಇಂಗ್ಲಿಷನ್ನು ಕಲಿತರು. ತನ್ನ ಗಿರಾಕಿಗಳೊಂದಿಗೆ ವ್ಯವಹಾರ ನಡೆಸುವುದಕ್ಕೆ ಸಾಕಾಗುವಷ್ಟು ಇಂಗ್ಲಿಷನ್ನು ಮಾತ್ರ ಕಲಿಯುವುದೇ ನಾಯಿಂದನ ಅಭಿಲಾಷೆಯಾಗಿದ್ದಿತು. ಅಂತು ಹೀಗೆ ಕಲಿತುದರಿಂದ ಈ ವಿಷ್ಯರಲ್ಲಿ ಇಬ್ಬರು ತಕ್ಕಮಟ್ಟಿಗೆ ಒಳ್ಳೆಯ ವರಮಾನವನ್ನು ಗಳಿಸುವ ಶಕ್ತಿತನ್ನವನ್ನು ಸಂಪಾದಿಸಿದರು.

ನಾನು ಸಭೆಯಿಂದುಂಟಾದ ಫಲದಿಂದ ತೃಪ್ತಿಪಟ್ಟೆನು. ನನಗೆ ನೆನಪಿರುವ ಮಟ್ಟಿಗೆ ಪ್ರತಿ ತಿಂಗಳೋ ಅಥವಾ ಪ್ರತಿ ವಾರವೋ ಈ ಸಭೆಯು ಕೂಡಬೇಕೆಂದು ನಿಶ್ಚಯವಾಯಿತು. ಈ ಸಭೆಯು ಹೆಚ್ಚು ಕಡಿಮೆ ತಪ್ಪದೆ ಕೂಡುತ್ತಿದ್ದಿತು. ಹೀಗೆ ಕೂಡಿದಾಗ ನಾವು ನಮ್ಮ ಅಭಿಪ್ರಾಯಗಳನ್ನು ತಡೆಯಿಲ್ಲದೆ ಒಬ್ಬರೊಬ್ಬರಿಗೆ ತಿಳಿಸುತ್ತಿದ್ದೆವು. ಇದರಿಂದುಂಟಾದ ಫಲವೇನೆಂದರೆ ಪ್ರಿಟೋರಿಯಾದಲ್ಲಿ ನನಗೆ ಗುರುತಾಗದ ಭಾರತೀಯನಿರಲಿಲ್ಲ, ಪ್ರತಿಯೊಬ್ಬನ ಪರಿಸ್ಥಿತಿಯ ವಿಚಾರವಾಗಿ ನನಗೆ ತಿಳಿಯದ ವಿಷಯವಿರಲಿಲ್ಲ. ಇದರಿಂದ ನನಗೆ ಅಲ್ಲಿನ ಬ್ರಿಟಿಷ್ ಏಜಂಟರಾದ ಮಿ. ಜೇಕೊಬಸ್ ಡಿ ವೆಟರ ಗುರುತನ್ನು ಮಾಡಿಕೊಳ್ಳಬೇಕೆಂಬ ಇಷ್ಟವುಂಟಾಯಿತು. ನಾನು ಅವರನ್ನು ಹೋಗಿ ನೋಡಿದೆನು. ಅವರಿಗೆ ಭಾರತೀಯರ ವಿಷಯದಲ್ಲಿ ಸಹಾನುಭೂತಿಯಿದ್ದಿತು. ಆದರೆ ಅವರ ಕೈಯಲ್ಲಿ ಏನೂ ಹೆಚ್ಚಾಗಿ ಆಗುವಂತಿರಲಿಲ್ಲ. ಆದರೂ ಅವರು ತಮಗೆ ಸಾಧ್ಯವಾದ ಸಹಾಯವನ್ನು ಮಾಡಲು ಒಪ್ಪಿದುದಲ್ಲದೆ ಬೇಕಾದಾಗ ನಾನು ಅವರನ್ನು ನೋಡಲು ಆಹ್ವಾನಿಸಿತ್ತರು.

ಈಗ ನಾನು ರೈಲ್ವೆ ಅಧಿಕಾರಿಗಳೊಡನೆಯೂ ಪ್ರಯಾಣದ ವಿಷಯವಾಗಿ ಭಾರತೀಯರ ಮೇಲೆ ಹೊರಿಸಿರುವ ನಿಬಂಧನೆಗಳು ಅವರ ಕಾನೂನುಗಳಿಗೆ ಅನುಸಾರವಾಗಿ ಕೂಡ ಅನ್ಯಾಯವಾದವೆಂದು ತೋರಿಸಿ ಕಾಗದಪತ್ರವನ್ನು ನಡೆಸಿದೆನು. ಇದಕ್ಕೆ ಉತ್ತರವಾಗಿ ಸರಿಯಾಗಿ ಬಟ್ಟೆ ಹಾಕಿಕೊಂಡಿರುವ ಭಾರತೀಯರಿಗೆ ಮೇಲಿನ ತರಗತಿಯ

ಟಿಕೆಟುಗಳನ್ನು ಕೊಡಲಾಗುವುದೆಂದು ಕಾಗದ ಬಂದಿತು. ಇದರಿಂದ ಪೂರ್ತಿ ಸಮಾಧಾನವಾಯಿತೆಂದು ಹೇಳುವಹಾಗೆಯೇ ಇರಲಿಲ್ಲ. ಏಕೆಂದರೆ ಸರಿಯಾಗಿ ಬಟ್ಟೆಯನ್ನು ಹಾಕಿಕೊಂಡಿರುವುದನ್ನೂ ಇಲ್ಲದುದನ್ನೂ ನಿರ್ಧರಿಸುವುದು ಸ್ಟೇಷನ್‌ಮಾಸ್ಟರ ಕೈಯಲ್ಲೇ ಇದ್ದಿತು.

ಬ್ರಿಟಿಷ್ ಏಜಂಟರು ತಮ್ಮಲ್ಲಿದ್ದ ಭಾರತೀಯರಿಗೆ ಸಂಬಂಧಪಟ್ಟ ಕೆಲವು ಕಾಗದ ಪತ್ರಗಳನ್ನು ನನಗೆ ತೋರಿಸಿದರು. ತ್ಯೈಯಬ್ ಸೇಠರು ನನಗೆ ಈ ತೆರನಾದ ಕಾಗದಗಳನ್ನು ಕೊಟ್ಟಿದ್ದರು. ಇವುಗಳಿಂದ ನನಗೆ ಭಾರತೀಯರನ್ನು ಎಷ್ಟು ಕ್ರೌರ್ಯದೊಡನೆ ಆರೇಂಜ್ ಫ್ರೀಸ್ಟೇಟಿನಿಂದ ಹೊರಗೆ ಓಡಿಸಿದ್ದರೆಂದು ತಿಳಿಯಬಂದಿತು.

ಒಟ್ಟಿನಲ್ಲಿ ಪ್ರಿಟೋರಿಯಾದಲ್ಲಿದ್ದುದರಿಂದ ನಾನು ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀಸ್ಟೇಟಿನ (ಎ) ಭಾರತೀಯರ ಆರ್ಥಿಕ, ಸಾಮಾಜಿಕ ಮತ್ತು ರಾಜನೈತಿಕ ಪರಿಸ್ಥಿತಿಯನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಯಿತು. ಈ ಜ್ಞಾನದಿಂದ ನನಗೆ ಮುಂದೆ ಅಮೂಲ್ಯ ಸಹಾಯವಾಗುವುದೆಂದು ಆಗ ಸ್ವಲ್ಪವೂ ತೋರಲಿಲ್ಲ. ಏಕಂದರೆ ನಾನು ಆಗ ವರ್ಷ ಮುಗಿದ ಮೇಲೆ, ಅಥವಾ ಮೊಕದ್ದಮೆಯು ಮುಗಿದರೆ ಇನ್ನೂ ಜಾಗ್ರತೆಯಾಗಿ, ಹಿಂದೂಸ್ಥಾನಕ್ಕೆ ಹಿಂತಿರುಗಬೇಕೆಂದು ಯೋಚಿಸಿದ್ದೆನು.

ಆದರೆ ದೈವ ಸಂಕಲ್ಪವು ಬೇರೆಯಾಗಿದ್ದಿತು.



# ೧೩

## ‘ಕೂಲಿ’ ತನದ ಅನುಭವ

ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀಸ್ಟೇಟಿನ ಭಾರತೀಯರ ಪರಿಸ್ಥಿತಿಯನ್ನು ವಿಶದವಾಗಿ ವರ್ಣಿಸುವುದಕ್ಕೆ ಇದು ಸ್ಥಳವಲ್ಲ. ಇದರ ವಿಚಾರವನ್ನು ತಿಳಿಯಲಿಚ್ಛಿಸುವವರು ನಾನು ಬರೆದಿರುವ “ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ”ವನ್ನು ಓದಬೇಕು. ಆದರೆ ಇಲ್ಲಿ ಆ ವಿಷಯವನ್ನು ಸಂಕ್ಷೇಪವಾಗಿ ಹೇಳುವುದು ಆವಶ್ಯಕ.

ಆರೇಂಜ್ ಫ್ರೀಸ್ಟೇಟಿನಲ್ಲಿ ೧೮೮೮ ನೆಯ ಇಸವಿಯಲ್ಲಿ ಅಥವಾ ಇನ್ನೂ ಮುಂಚೆ ಒಂದು ಕಾನೂನನ್ನು ಮಾಡಿ ಅಲ್ಲಿನ ಭಾರತೀಯರ ಹಕ್ಕುಗಳನ್ನೆಲ್ಲಾ ಕಿತ್ತುಕೊಂಡಿದ್ದರು. ಭಾರತೀಯರು ಅಲ್ಲಿ ಇರಲಿಚ್ಛಿಸಿದರೆ ಹೋಟಲುಗಳಲ್ಲಿ ವೆಯ್ಟರುಗಳಾಗಿ ಅಥವಾ ಅದೇ ರೀತಿಯಾದ ಕೀಳು ಕೆಲಸದಲ್ಲಿ ಮಾತ್ರ ಇರುವುದು ಸಾಧ್ಯವಾಗಿದ್ದಿತು. ಅಲ್ಲಿದ್ದ ವ್ಯಾಪಾರಿಗಳನ್ನು ಅವರಿಗೆ ಇದರಿಂದುಟಾದ ನಷ್ಟವನ್ನು ಸರಿಪಡಿಸಲು ನೆಪಮಾತ್ರಕ್ಕೆ ಹಣವನ್ನು ಕೊಟ್ಟು ಅಲ್ಲಿಂದ ಓಡಿಸಿದ್ದರು. ಈ ವ್ಯಾಪಾರಿಗಳು ಅರ್ಜಿಯನ್ನು ಹಾಕಿದರು. ಆದರೆ ಇದರಿಂದ ಯಾವ ಪ್ರಯೋಜನವೂ ಆಗಲಿಲ್ಲ.

೧೮೮೫ರಲ್ಲಿ ಟ್ರಾನ್ಸ್ವಾಲಿನಲ್ಲಿ ಒಂದು ಕಠಿಣವಾದ ಕಾಯದೆಯು ಜಾರಿಗೆ ಬಂದಿತು. ೧೮೮೬ರಲ್ಲಿ ಇದರಲ್ಲಿ ಸ್ವಲ್ಪ ಮಾರ್ಪಾಡಾಯಿತು. ಇದಕ್ಕೆ ಅನುಸಾರವಾಗಿ ಈ ದೇಶದೊಳಕ್ಕೆ ಪ್ರವೇಶ ಮಾಡುವ ಪ್ರತಿಯೊಬ್ಬ ಭಾರತೀಯನೂ ೩ ಪೌಂಡು (ಸುಮಾರು ೪೫ ರೂ.) ತಲೆಗಂದಾಯವನ್ನು ಕೊಡಬೇಕೆಂದು ನಿಶ್ಚಯವಾಯಿತು. ಇವರು ಭೂಮಿಯನ್ನು ಕೊಂಡುಕೊಳ್ಳಬೇಕೆಂದು ಇಚ್ಛಿಸಿದರೆ ನಿಯತವಾದ ಕೆಲವು ಸ್ಥಾನಗಳಲ್ಲಿ ಮಾತ್ರ ಕೊಂಡುಕೊಳ್ಳಬಹುದಾಗಿದ್ದಿತು. ಆಗ ಕೂಡ ಭೂಮಿಯ ಮೇಲೆ ಪೂರ್ಣವಾದ ಹಕ್ಕು ಇರುತ್ತಿರಲಿಲ್ಲ.

ಇವರಿಗೆ ಅಲ್ಲಿನ ಕಾಯದೆ ಸಭೆಗಳಿಗೆ ತಮ್ಮ ಪ್ರತಿನಿಧಿಗಳನ್ನು ಚುನಾಯಿಸುವ ಅಧಿಕಾರವೂ ಇರಲಿಲ್ಲ. ಈ ಕಾನೂನುಗಳೆಲ್ಲಾ ಏಷ್ಯಾವಾಸಿಗಳಿಗೆ ಮಾತ್ರ ಮಾಡಿದುವುಗಳಾಗಿದ್ದುವು. ಇವರಿಗೆ ಅಲ್ಲಿನ ಕಪ್ಪು ಜನರಿಗಾಗಿ ಮಾಡಿದ ಕಾಯದೆಗಳು ಕೂಡ ಅನ್ವಯಿಸುತ್ತಿದ್ದುವು. ಇವುಗಳ ಪ್ರಕಾರ ಭಾರತೀಯರಿಗೆ ಕಾಲುದಾರಿಯಲ್ಲಿ ನಡೆಯುವ ಅಧಿಕಾರವಿರಲಿಲ್ಲ. ರಾತ್ರಿ ೯ ಗಂಟೆಯಮೇಲೆ ಅಪ್ಪಣೆ ಚೀಟಿಯಿಲ್ಲದೆ ಹೊರಗೆ ಹೊರಡಕೂಡದಾಗಿದ್ದಿತು. ಈ ಕಡೆಯ ನಿಯಮವನ್ನು ಭಾರತೀಯರ ವಿಷಯದಲ್ಲಿ ಅಷ್ಟೇನೂ ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. 'ಅರಬ'ರೆಂದು ಹೇಳಿಕೊಳ್ಳುತ್ತಿದ್ದವರಮೇಲೆ ಈ ನಿಬಂಧನೆಯನ್ನು ಪ್ರಯೋಗಿಸುತ್ತಿರಲಿಲ್ಲ. ಇದು ಒಂದು ಉಪಕಾರವೆಂದೆಣಿಸಲ್ಪಡುತ್ತಿದ್ದಿತು. ಈ ಉಪಕಾರವನ್ನು ಮಾಡುವುದು ಸ್ವಾಭಾವಿಕವಾಗಿ ಪೋಲೀಸಿನವರ ಕೈಯಲ್ಲಿದ್ದಿತು.

ಇವೆರಡು ನಿಬಂಧನೆಗಳ ಪ್ರಭಾವವನ್ನು ನಾನು ಅನುಭವಿಸಬೇಕಾಯಿತು. ಅನೇಕವೇಳೆ ನಾನು ಮಿ. ಕೋಟ್ಸರ ಜೊತೆಯಲ್ಲಿ ರಾತ್ರಿ ತಿರುಗಾಡುತ್ತಿದ್ದೆನು. ೧೦ ಗಂಟೆಗೆ ಮುಂಚೆ ಮನೆ ಸೇರುವುದು ಅಪರೂಪವಾಗಿದ್ದಿತು. ಇದರ ಮಧ್ಯೆ ಪೋಲೀಸಿನವರು ನನ್ನನ್ನು ಹಿಡಿದುಕೊಂಡರೆ! ಈ ವಿಷಯದಲ್ಲಿ ನನಗಿಂತ ಹೆಚ್ಚಾಗಿ ಕೋಟ್ಸರು ಚಿಂತಾಪರರಾಗಿದ್ದರು. ಅವರು ತಮ್ಮ ನೀಗ್ರೋ ಸೇವಕರಿಗೆ ಪರವಾನೆಯನ್ನು (ರಾತ್ರಿ ತಿರುಗಾಡಲು ಅಪ್ಪಣೆಯನ್ನು) ಕೊಡಬಹುದಾಗಿದ್ದಿತು. ನನಗೆ ಕೊಡುವುದು ಹೇಗೆ? ತನ್ನ ಆಳಿಗೆ ಮಾತ್ರ ಪರವಾನೆಯನ್ನು ಕೊಡುವ ಅಧಿಕಾರವು ಯಜಮಾನನಿಗಿದ್ದಿತು. ನಾನು ಒಂದುವೇಳೆ ಪರವಾನೆಯನ್ನು ಕೇಳಿ ಕೋಟ್ಸರು ಕೊಡುವುದಕ್ಕೆ ಸಿದ್ಧರಾಗಿದ್ದರೂ ಅವರಿಗೆ ಕೊಡುವುದಕ್ಕಾಗುತ್ತಿರಲಿಲ್ಲ. ಏಕಂದರೆ ಹಾಗೆ ಮಾಡುವುದು ಮೋಸವಾಗುತ್ತಿದ್ದಿತು.

ಆದುದರಿಂದ ಕೋಟ್ಸರೋ ಅವರ ಗೆಳೆಯರಲ್ಲೊಬ್ಬರೋ (ನನಗೆ ಸರಿಯಾಗಿ ನೆನಪಿಲ್ಲ) ನನ್ನನ್ನು ಸರಕಾರಿ ವಕೀಲರಾದ ಡಾ. ಕ್ರಾಜೆಯವರ ಬಳಿಗೆ ಕರೆದುಕೊಂಡು ಹೋದರು. ನಾವಿಬ್ಬರೂ ಒಂದೇ 'ಇನ್'

(ಪಾಠಶಾಲೆ) ನಿಂದ ತೇರ್ಗಡೆಯಾದ ಬ್ಯಾರಿಸ್ಟರುಗಳೆಂದು ತಿಳಿಯ ಬಂದಿತು. ರಾತ್ರಿ ೯ ಗಂಟೆಯ ಮೇಲೆ ತಿರುಗಾಡುವುದಕ್ಕೆ ನಾನು ಪರವಾನೆಯನ್ನು ಪಡೆಯಬೇಕೆಂಬುದನ್ನು ಕೇಳಿ ಇವರು ತಾಳ್ಮೆಗೆಟ್ಟರು. ನನ್ನ ವಿಷಯದಲ್ಲಿ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿ ನನಗೆ ಪರವಾನೆಯನ್ನು ಕೊಡುವುದರ ಬದಲು "ಇವರು ಪೋಲೀಸಿನವರ ತೊಂದರೆಗೊಳಗಾಗದೆ ಬೇಕಾದಾಗ ಬೇಕಾದಕಡೆ ಓಡಾಡಬಹುದು." ಎಂದು ಬರೆದು ಒಂದು ಪತ್ರವನ್ನು ಕೊಟ್ಟರು. ನಾನು ಹೊರಗೆ ಹೋದಾಗಲೆಲ್ಲಾ ಈ ಕಾಗದವನ್ನು ಜೊತೆಯಲ್ಲಿಯೇ ಇಟ್ಟುಕೊಂಡಿರುತ್ತಿದ್ದೆನು. ಇದನ್ನು ನಾನು ಯಾವಾಗಲೂ ಉಪಯೋಗಿಸಬೇಕಾಗಿ ಬರಲಿಲ್ಲ. ಆದರೆ ಇದು ಒಂದು ಸಂಯೋಗವೆಂದು ಮಾತ್ರ ಹೇಳಬೇಕು.

ಡಾ. ಕ್ರಾಜೆಯವರು ಅವರ ಮನೆಗೆ ಬರಬೇಕೆಂದು ನನಗೆ ನಿಮಂತ್ರಣ ಕೊಟ್ಟರು. ನಮ್ಮಿಬ್ಬರಿಗೂ ಮೈತ್ರಿಯುಂಟಾಯಿತೆಂದು ಹೇಳಬಹುದು. ನಾನು ಅವರ ಬಳಿಗೆ ಆಗಾಗ ಹೋಗುತ್ತಿದ್ದೆನು. ಇವರಿಂದಲೇ ನನಗೆ ಇವರಿಗಿಂತ ಸುಪ್ರಸಿದ್ಧರಾದ ಇವರ ಅಣ್ಣಂದಿರೊಡನೆ ಪರಿಚಯವಾದುದು. ಅವರು ಜೋಹಾನ್ಸ್‌ಬರ್ಗಿನಲ್ಲಿ "ಪಬ್ಲಿಕ್ ಪ್ರಾಸಿಕ್ಯೂಟರ್" (ಸರ್ಕಾರಿ ವಕೀಲ) ಆಗಿದ್ದರು. ಬೋಅರ್ ಯುದ್ಧದ ಸಮಯದಲ್ಲಿ ಜೋಹಾನ್ಸ್‌ಬರ್ಗಿನ ಒಬ್ಬ ಆಂಗ್ಲ ಅಧಿಕಾರಿಯನ್ನು ಕೊಲ್ಲಲು ಇವರು ಸಂಚು ನಡೆಸಿದರೆಂದು ಇವರನ್ನು ಸೈನ್ಯದ ಕಾನೂನಿನ ಪ್ರಕಾರ ವಿಚಾರಣೆಗೆ ಗುರಿಮಾಡಿ ಇವರಿಗೆ ಏಳು ವರ್ಷ ಸಜಾ ವಿಧಿಸಿದರು. ಇವರ ವಕೀಲಿ ಸನ್ನದನ್ನೂ ಕಿತ್ತುಕೊಂಡರು. ಯುದ್ಧವು ಮುಗಿದಮೇಲೆ ಟ್ರಾನ್ಸ್‌ವಾಲಿನ ವಕೀಲರು ಇವರನ್ನು ಸನ್ಮಾನದಿಂದ ಬರಮಾಡಿಕೊಂಡರು. ಇವರು ಅಲ್ಲಿಯೇ ಪುನಃ ವಕೀಲಿ ಕೆಲಸ ಮಾಡಲು ಪ್ರಾರಂಭಿಸಿದರು.

ಈ ಪರಿಚಯಗಳಿಂದ ಮುಂದೆ ನನಗೆ ನನ್ನ ಸಾರ್ವಜನಿಕ ಕಾರ್ಯಗಳಲ್ಲಿ ಸಹಾಯವಾಯಿತು. ಇದರಿಂದ ನಾನು ಮಾಡಬೇಕಾಗಿದ್ದ ಅನೇಕ ಕೆಲಸಗಳು ಸುಲಭವಾದುವು.

ಕಾಲುದಾರಿಯಲ್ಲಿ ನಡೆಯುವುದಕ್ಕೆ ಸಂಬಂಧಪಟ್ಟ ನಿಬಂಧನೆಯಿಂದ ನನಗೆ ಹೆಚ್ಚಾಗಿಯೇ ತೊಂದರೆಯುಂಟಾಯಿತು. ನಾನು

ಯಾವಾಗಲೂ ಪ್ರೆಸಿಡೆಂಟ್ ಸ್ಟ್ರೀಟಿನ ಮುಖಾಂತರವಾಗಿ ಒಂದು ಮೈದಾನಕ್ಕೆ ತಿರುಗಾಡುವುದಕ್ಕೆ ಹೋಗುತ್ತಿದ್ದೆನು. ಈ ಬೀದಿಯಲ್ಲಿಯೇ ಪ್ರೆಸಿಡೆಂಟ್ ಕ್ರೂಗರರ ಮನೆಯೂ ಇದ್ದಿತು. ಈ ಮನೆಯಲ್ಲಿ ಆಡಂಬರದ ಸುಳಿವೇ ಇರಲಿಲ್ಲ. ಇದರ ಸುತ್ತಮುತ್ತಲೂ ತೋಟವಿರಲಿಲ್ಲ. ಇದರ ಹತ್ತಿರವಿರುವ ಇತರ ಮನೆಗಳಿಗೂ ಇದಕ್ಕೂ ವ್ಯತ್ಯಾಸವೇನೂ ತೋರುತ್ತಿರಲಿಲ್ಲ. ಪ್ರಿಟೋರಿಯಾದಲ್ಲಿನ ಲಕ್ಷಾಧಿಪತಿಗಳನೇಕರ ಭವನಗಳು ಈ ಮನೆಗಿಂತ ಬಹಳ ಸುಂದರವಾಗಿಯೂ ಸುತ್ತಮುತ್ತಲೂ ತೋಟಗಳನ್ನುಳ್ಳವಾಗಿಯೂ ಇದ್ದುವು. ವಸ್ತುತಃ ಪ್ರೆಸಿಡೆಂಟ್ ಕ್ರೂಗರರ ಅನಾಡಂಬರವು ಪ್ರಸಿದ್ಧವಾಗಿದ್ದಿತು. ಮನೆಯ ಮುಂದೆ ಒಬ್ಬ ಪೋಲೀಸ್ ನೌಕರನು ಓಡಾಡುತ್ತಾ ಇರುತ್ತಿದ್ದುದರಿಂದ ಮಾತ್ರ ಈ ಮನೆಯು ಯಾರೋ ಒಬ್ಬ ಅಧಿಕಾರಿಯದು ಎಂದು ತಿಳಿದುಬರುತ್ತಿದ್ದಿತು. ನಾನು ಸಾಮಾನ್ಯವಾಗಿ ಈ ಸಿಪಾಯಿಯ ಮುಂದೆ ಯಾವ ಅಡಚಣೆಯೂ ಇಲ್ಲದೆ ನಡೆದುಕೊಂಡು ಹೋಗುತ್ತಿದ್ದೆನು.

ಹೊತ್ತುಹೊತ್ತಿಗೆ ಸಿಪಾಯಿಗಳು ಪಹರೆಯನ್ನು ಬದಲಾಯಿಸುತ್ತಿದ್ದರು. ಒಂದು ದಿನ ಒಬ್ಬ ಸಿಪಾಯಿಯು ನನಗೆ ಎಚ್ಚರಿಕೆ ಕೊಡದೆ ಕಾಲುದಾರಿಯನ್ನು ಬಿಟ್ಟು ಹೋಗೆಂದು ಕೂಡ ಹೇಳದೆ ನನ್ನನ್ನು ಹೊಡೆದು ಬೀದಿಗೆ ನೂಕಿದನು. ನನಗೆ ಆಶ್ಚರ್ಯವೂ ದುಃಖವೂ ಉಂಟಾಗಿ ಯೋಚಿಸತೊಡಗಿದೆನು. ನನ್ನನ್ನು ಹೊಡೆಯಲು ಕಾರಣವೇನೆಂದು ನಾನು ಸಿಪಾಯಿಯನ್ನು ಕೇಳುವಷ್ಟರಲ್ಲಿಯೇ ಆಕಸ್ಮಿಕವಾಗಿ ಆ ರಸ್ತೆಯಲ್ಲಿಯೇ ಕುದುರೆಯಮೇಲೆ ಸವಾರಿಮಾಡುತ್ತಿದ್ದ ಕೋಟ್ಸ್‌ರು ನನ್ನನ್ನು ಕೂಗಿ "ಗಾಂಧೀ, ನಾನೆಲ್ಲವನ್ನೂ ನೋಡಿದೆನು. ನೀವು ಅವನ ಮೇಲೆ ಕಟ್ಟಳೆ ನಡೆಸಿದರೆ ನಾನು ಸಂತೋಷದಿಂದ ನ್ಯಾಯಸ್ಥಾನದಲ್ಲಿ ಅವನ ಮೇಲೆ ಸಾಕ್ಷ್ಯವನ್ನು ಹೇಳುತ್ತೇನೆ. ನಿಮ್ಮ ಮೇಲೆ ಹೀಗೆ ಅತ್ಯಾಚಾರ ನಡೆಯಿತೆಂದು ನನಗೆ ದುಃಖವಾಗುತ್ತದೆ." ಎಂದರು.

"ನೀವು ಇದಕ್ಕೆ ದುಃಖಪಡಬೇಕಾದುದೇನೂ ಇಲ್ಲ. ಪಾಪ, ಆ ಸಿಪಾಯಿಗೇನು ಗೊತ್ತು? ಅವನಿಗೆ ಕಪ್ಪುಬಣ್ಣದ ಮನುಷ್ಯರೆಲ್ಲಾ ಒಂದೇ. ಅವನು ನಿಗ್ರೋಜನರಲ್ಲಿಯೂ ನನ್ನಲ್ಲಿ ವರ್ತಿಸಿದಂತೆಯೇ ವರ್ತಿ

ಸುತ್ತಾತ್ತೆನೆನ್ನುವುದರಲ್ಲಿ ಸಂಶಯವಿಲ್ಲ. ಸ್ವಂತ ನನಗೆ ಉಂಟಾದ ಅನ್ಯಾಯಕ್ಕಾಗಿ ನ್ಯಾಯಸ್ಥಾನಕ್ಕೆ ಕೋರ್ಟಿಗೆ ನಾನು ಹೋಗುವುದಿಲ್ಲವೆಂದು ನಿಯಮಮಾಡಿದ್ದೇನೆ. ಆದುದರಿಂದ ನಾನು ಅವನಮೇಲೆ ಕಟ್ಟಳೆ ನಡೆಸಬೇಕೆಂದಿಲ್ಲ.'' ಎಂದೆನು.

''ನಿಮ್ಮ ಸ್ವಭಾವಕ್ಕೆ ತಕ್ಕಹಾಗೆಯೇ ನೀವು ಹೇಳಿದಿರಿ. ಆದರೂ ಪುನಃ ಯೋಜನೆ ಮಾಡಿ ನೋಡಿರಿ ಇತರ ಮನುಷ್ಯರಿಗೆ ಬುದ್ಧಿ ಕಲಿಸಲೇ ಬೇಕು.'' ಎಂದು ನನಗೆ ಹೇಳಿ ಅವರು ಆ ಸಿಪಾಯಿಯನ್ನು ಗದರಿಸಿದರು. ನನಗೆ ಅನರಿಬ್ಬರೂ ನುಡಿದ ಮಾತೆಲ್ಲವೂ ತಿಳಿಯಲಿಲ್ಲ. ಏಕೆಂದರೆ ಅವನು ಬೋಆರ್ ಸಿಪಾಯಿಯಾಗಿದ್ದುದರಿಂದ ಮಾತೆಲ್ಲವೂ ಡಚ್ ಭಾಷೆ (ಹಾಲೆಂಡ್ ದೇಶದ ಭಾಷೆ) ಯಲ್ಲಿಯೇ ನಡೆಯಿತು. ಸಿಪಾಯಿಯು ನನ್ನ ಕ್ಷಮಾಪಣೆಯನ್ನು ಬೇಡಿದನು ಹೀಗೆ ಬೇಡಬೇಕಾದ ಆವಶ್ಯಕತೆಯೇ ಇರಲಿಲ್ಲ. ನಾನು ಅವನನ್ನು ಆಗಲೇ ಮನ್ನಿಸಿದ್ದೆನು.

ಇದಾದಮೇಲೆ ನಾನೆಂದೂ ಪುನಃ ಆ ಬೀದಿಯಲ್ಲಿ ಹೋಗಲಿಲ್ಲ. ''ಬೇರೆ ಸಿಪಾಯಿಗಳು ಬಂದರೆ ಅವರಿಗೆ ಈ ಘಟನೆಯ ವಿಚಾರವೇನು ಗೊತ್ತು? ಗೊತ್ತಿಲ್ಲದುದರಿಂದ ಅವರೂ ಹೀಗೆಯೇ ವರ್ತಿಸುವ ಸಂಭವವುಂಟು. ನಾನು ಸುಮ್ಮಸುಮ್ಮನೇ ಪೆಟ್ಟುತಿನ್ನುವುದಕ್ಕೆ ಪುನಃ ಅಲ್ಲಿಗೇಕೆ ಹೋಗಬೇಕು?'' ಎಂದು ಯೋಚಿಸಿ ನಾನು ತಿರುಗಾಡುವುದಕ್ಕೆ ಬೇರೆ ದಾರಿಯನ್ನು ಹುಡುಕಿಕೊಂಡೆನು.

ಈ ಘಟನೆಯಿಂದ ನನಗೆ ಅಲ್ಲಿ ನೆಲಸಿದ್ದ ಭಾರತೀಯರ ವಿಷಯದಲ್ಲಿ ಸಹಾನುಭೂತಿಯು ಇನ್ನೂ ಹೆಚ್ಚಿತು. ಬ್ರಿಟಿಷ್ ಏಜಂಟಿನೊಡನೆ ಹೋಗಿ ಈ ಕಾನೂನಿನ ವಿಚಾರವಾಗಿ ಮಾತನಾಡಿದಮೇಲೆ ಇದರ ಸಂಬಂಧವಾಗಿ ನಿರ್ಧಾರಕ್ಕೆ ಒಂದು ಮೊಕದ್ದಮೆಯನ್ನು ತರಕೂಡದೇಕೆಂದು ನಾನು ಭಾರತೀಯರೊಡನೆ ಚರ್ಚೆಮಾಡಿದೆನು.

ಈ ರೀತಿಯಾಗಿ ನಾನು ಪಠನಶ್ರವಣಗಳ ಮೂಲಕ ಮಾತ್ರವಲ್ಲ, ಸ್ವಂತ ಅನುಭವದಿಂದ ಕೂಡ ಅಲ್ಲಿನ ಭಾರತೀಯರ ಕಠಿಣ ಪರಿಸ್ಥಿತಿಯನ್ನು

ತಿಳಿದುಕೊಂಡೆನು. ಆತ್ಮಗೌರವವನ್ನಿಟ್ಟುಕೊಂಡಿರುವ ಭಾರತೀಯರು ಇರುವುದಕ್ಕೆ ದಕ್ಷಿಣ ಆಫ್ರಿಕವು ಸರಿಯಾದ ದೇಶವಲ್ಲವೆಂದು ನನಗೆ ತೋರಿತು. ಇಂತಹ ಪರಿಸ್ಥಿತಿಯನ್ನು ಹೇಗೆ ಉತ್ತಮಗೊಳಿಸುವುದು ಎಂಬ ವಿಷಯವಾಗಿ ಹೆಚ್ಚಾಗಿ ಚಿಂತಿಸಲು ಪ್ರಾರಂಭಿಸಿದೆನು.

ಆದರೆ ಆಗ ದಾದಾ ಅಬ್ದುಲ್ಲಾರವರ ಮೊಕದ್ದಮೆಯ ಕೆಲಸವೇ ನನ್ನ ಮುಖ್ಯ ಕರ್ತವ್ಯವಾಗಿದ್ದಿತು.



೧೪

# ಮೊಕದ್ದಮೆಗೆ ಸಿದ್ಧಪಡಿಸಿಕೊಂಡುದು

ನಾನು ಪ್ರಿಟೋರಿಯಾದಲ್ಲಿ ಕಳೆದ ಒಂದು ವರ್ಷದಲ್ಲಿ ನನ್ನ ಜೀವಮಾನದಲ್ಲೆಲ್ಲಾ ಅತ್ಯಂತ ಬೆಲೆಯುಳ್ಳ ಅನುಭವವನ್ನು ಸಂಪಾದಿಸಿದೆನು. ಇಲ್ಲಿಯೇ ನನಗೆ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುವುದನ್ನು ಕಲಿತುಕೊಳ್ಳಲು ಅವಕಾಶ ದೊರೆತುದು. ಇಂತಹ ಸೇವೆಗೆ ಯೋಗ್ಯತೆಯನ್ನು ಗಳಿಸಿದುದೂ ಇಲ್ಲಿಯೇ. ನನ್ನ ಧಾರ್ಮಿಕ ಆಸಕ್ತಿಯು ಇಲ್ಲಿಯೇ ಬರಬರುತ್ತಾ ತೀವ್ರವಾದುದು. ವಕೀಲಿ ಕೆಲಸದ ನಿಜವಾದ ಜ್ಞಾನವನ್ನು ಕೂಡ ನಾನು ಇಲ್ಲಿಯೇ ಸಂಪಾದಿಸಿದೆನು. ಹೊಸದಾಗಿ ವಕೀಲನಾದವನು ಅನುಭವವುಳ್ಳ ವಕೀಲನ ಕಚೇರಿಯಲ್ಲಿದ್ದು ಕಲಿತುಕೊಳ್ಳುವುದನ್ನೆಲ್ಲಾ ನಾನು ಇಲ್ಲಿಯೇ ಕಲಿತುಕೊಂಡೆನು. ವಕೀಲಿ ಕೆಲಸಕ್ಕೆ ನಾನು ಕೇವಲ ಅಯೋಗ್ಯನಲ್ಲ ಎಂಬ ವಿಶ್ವಾಸವನ್ನು ಸಂಪಾದಿಸಿದುದೂ ಇಲ್ಲಿಯೇ. ವಕೀಲನಾಗಿ ಯಶಸ್ಸನ್ನು ಪಡೆಯುವ ಗುಟ್ಟನ್ನು ನಾನು ಕಲಿತುದೂ ಇಲ್ಲಿಯೇ.

ದಾದಾ ಅಬ್ದುಲ್ಲಾರವರ ಮೊಕದ್ದಮೆಯೇನೂ ಸಾಧಾರಣವಾದುದಾಗಿರಲಿಲ್ಲ. ಇದು ४೦,೦೦೦ ಪೌಂಡು ಅಥವಾ ೬ ಲಕ್ಷ ರೂಪಾಯಿನ ದಾವವಾಗಿದ್ದಿತು. ವ್ಯಾಪಾರ ಸಂಬಂಧವಾದ ಮೊಕದ್ದಮೆಯಾದುದರಿಂದ ಇದು ಲೆಕ್ಕಾಚಾರದ ತೊಡಕುಗಳಿಂದ ತುಂಬಿದ್ದಿತು. ದಾವದ ಕೆಲವು ಅಂಶವು ಪ್ರಾಮಿಸರಿನೋಟಿನ (ವಾಗ್ದಾನ ಪತ್ರ) ಮೇಲೆಯೂ ಕೆಲವು ಅಂಶವು ಪ್ರಾಮಿಸರಿನೋಟುಗಳನ್ನು ಕೊಡುವುದರಮೇಲೂ ತಂದುದಾಗಿದ್ದಿತು. ಇದಕ್ಕೆ ಪ್ರತಿವಾದಿಗಳು ಈ ಕಾಗದಗಳು ಮೋಸದಿಂದ ಬರೆಸಿಕೊಂಡವುಗಳೆಂದೂ ಅವುಗಳಲ್ಲಿ ಬರೆದಂತೆ ಪೂರ್ತಿಯಾಗಿ ಪ್ರತಿಫಲ ಸಂದಿಲ್ಲವೆಂದೂ ಜವಾಬು ಹೇಳುತ್ತಿದ್ದರು. ಇದರಲ್ಲಿ ಚರ್ಚಿಸ

ಲ್ಪಡಬೇಕಾದ ಸಂಗತಿಗಳೂ ತೊಡಕಾದ ಕಾನೂನಿನ ವಿಷಯಗಳೂ ಬೇಕಾದಹಾಗೆ ಇದ್ದುವು.

ಎರಡು ಪಕ್ಷದವರೂ ಅತ್ಯುತ್ತಮವಾದ ವಕೀಲರನ್ನು ಗೊತ್ತು ಮಾಡಿದ್ದರು. ಇದರಿಂದ ನನಗೆ ಎರಡು ಕಡೆಯ ಕೆಲಸದ ಅನುಭವವನ್ನು ಹೊಂದಲು ಒಳ್ಳೆಯ ಅವಕಾಶವು ದೊರಕಿತು. ವಕೀಲರಿಗಾಗಿ ವಾದಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಸಿದ್ಧಪಡಿಸುವ ಮತ್ತು ಮೊಕದ್ದಮೆಗೆ ಸಂಬಂಧಪಟ್ಟ ವಿಷಯಗಳನ್ನು ಪರಿಶೋಧಿಸುವ ಕೆಲಸವು ನನಗೆ ವಹಿಸಲ್ಪಟ್ಟಿದ್ದಿತು. ನಾನು ಹೀಗೆ ಸಿದ್ಧಪಡಿಸಿದ ವಿಷಯಗಳಲ್ಲಿ ಎಷ್ಟನ್ನು ಸೊಲಿಸಿಟರು ಒಪ್ಪುತ್ತಾರೆನ್ನುವುದನ್ನೂ ಹೀಗೆ ಒಪ್ಪಿದವುಗಳಲ್ಲಿ ಎಷ್ಟನ್ನು ವಕೀಲರು ಉಪಯೋಗಿಸುತ್ತಾರನ್ನುವುದನ್ನೂ ನೋಡುವುದರಿಂದಲೇ ಎಷ್ಟೋ ತಿಳಿವಳಿಕೆಯುಂಟಾಗುತ್ತಿದ್ದಿತು. ಈ ಮೊಕದ್ದಮೆಯ ಕೆಲಸದಲ್ಲಿ ನನ್ನ ಗ್ರಹಣಶಕ್ತಿಯನ್ನೂ ಮತ್ತು ಮೊಕದ್ದಮೆಯ ವಿಷಯಗಳನ್ನು ಸುವ್ಯವಸ್ಥಿತರೂಪದಲ್ಲಿ ಒಟ್ಟುಗೂಡಿಸುವುದಕ್ಕೆ ನನಗಿರುವ ಸಾಮರ್ಥ್ಯವನ್ನೂ ಚೆನ್ನಾಗಿ ಅಳೆಯುವುದಕ್ಕಾಗುವುದೆಂದು ನನಗೆ ಗೊತ್ತಾಯಿತು.

ನಾನು ಮೊಕದ್ದಮೆಯ ವಿಷಯದಲ್ಲಿ ತುಂಬ ಶ್ರದ್ಧೆಯನ್ನು ವಹಿಸಿದೆನು. ಅಷ್ಟೇಕೆ, ನಾನು ತನ್ಮಯನಾದೆನು. ಇದಕ್ಕೆ ಸಂಬಂಧಪಟ್ಟ ಕಾಗದಪತ್ರಗಳನ್ನೆಲ್ಲಾ ಓದಿಬಿಟ್ಟೆನು. ನನ್ನಲ್ಲಿ ನಮ್ಮ ಕಕ್ಷಿಗಾರರಿಗೆ ಅಪಾರವಾದ ನಂಬಿಕೆಯಿದ್ದಿತು. ಅವರು ಬಹಳ ಬುದ್ಧಿವಂತರಾಗಿದ್ದರು. ಹೀಗಿದ್ದುದರಿಂದ ನನ್ನ ಕೆಲಸವು ಸುಲಭವಾಯಿತು. ನಾನು ಜಮಾಖರ್ಚಿನ ಮರ್ಮವನ್ನು ಕಲಿತುಕೊಂಡೆನು. ಮುಕ್ಕಾಲು ಪಾಲು ಕಾಗದಪತ್ರಗಳೆಲ್ಲಾ ಗುಜರಾತಿಯಲ್ಲಿದ್ದುದರಿಂದ ಅವುಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಬೇಕಾಗಿದ್ದಿತು. ನನಗೆ ಇದರಿಂದ ಭಾಷಾಂತರ ಮಾಡುವ ಶಕ್ತಿಯು ಉತ್ತಮಗೊಂಡಿತು.

ಹಿಂದೆ ಹೇಳಿದಂತೆ ನಾನು ಧರ್ಮಸಂಬಂಧವಾದ ಚರ್ಚೆಯಲ್ಲಿಯೂ ಸಾರ್ವಜನಿಕ ಕಾರ‍್ಯಗಳಲ್ಲಿಯೂ ಆಸಕ್ತಿಯುಳ್ಳವನಾಗಿ ಅವುಗಳಲ್ಲಿ ಕಾಲವನ್ನು ವಿನಿಯೋಗಿಸುತ್ತಿದ್ದರೂ ನಾನು ಅವು ನನ್ನ ಮುಖ್ಯವಾದ ಕೆಲಸ

ಗಳೆಂದೆಣಿಸಿರಲಿಲ್ಲ. ಮೊಕದ್ದಮೆಗೆ ಸಿದ್ಧಪಡಿಸುವುದೇ ನನ್ನ ಮೊದಲ ನೆಯ ಕರ್ತವ್ಯವೆಂದು ಭಾವಿಸಿದ್ದೆನು. ಆವಶ್ಯಕವಿದ್ದಲ್ಲಿ ಇದರ ಸಂಬಂಧ ವಾಗಿ ಕಾನೂನು ಮುಂತಾದುವುಗಳನ್ನು ಓದಬೇಕಾಗಿ ಬಂದರೆ ಆ ಕೆಲಸವನ್ನು ಮೊದಲು ಮುಗಿಸಿಬಿಡುತ್ತಿದ್ದೆನು. ಇದರಿಂದುಂಟಾದ ಫಲವೇನೆಂದರೆ ಈ ಮೊಕದ್ದಮೆಗೆ ಸಂಬಂಧಪಟ್ಟ ವಿಷಯಗಳು ನನಗೆ ವಾದಿ ಪ್ರತಿವಾದಿಗಳಿಗಿಂತ ಚೆನ್ನಾಗಿ ಮಂದಟ್ಟಾದುವು. ಏಕೆಂದರೆ ನನ್ನ ಬಳಿ ಎರಡು ಪಕ್ಷಕ್ಕೆ ಸಂಬಂಧಪಟ್ಟ ಕಾಗದಪತ್ರಗಳೂ ಇದ್ದುವು.

ನನಗೆ ದಿವಂ. ಮಿ. ಪಿನ್ಕಟರ ಬುದ್ಧಿವಾದವು ನೆನಪಿಗೆ ಬಂದಿತು— "ಕಾನೂನಿನ ಮುಕ್ಕಾಲು ಪಾಲು ಬಲವು ಮೊಕದ್ದಮೆಯ ಸಂಗತಿಗ ಳಲ್ಲಿದೆ." ಎಂದು. ಈ ಬುದ್ಧಿವಾದವನ್ನು ದಕ್ಷಿಣ ಆಫ್ರಿಕದ ಪ್ರಸಿದ್ಧ ವಕೀಲರಾದ ಮಿ. ಲಿಯೋನಾರ್ಡರು ಆಗನಿಂದೀಚೆಗೆ ಸಮರ್ಥಿಸಿದರು. ನನ್ನ ಹತ್ತಿರಕ್ಕೆ ಬಂದ ಒಂದು ಮೊಕದ್ದಮೆಯಲ್ಲಿ ನ್ಯಾಯವು ನನ್ನ ಕಕ್ಷಿ ಗಾರನ ಕಡೆಯಿದ್ದರೂ ಕಾನೂನು ಅವನಿಗೆ ವಿರೋಧವಾಗಿರುವುದಾಗಿ ನನಗೆ ತೋರಿತು. ನಾನು ನಿರಾಸೆಯಿಂದ ಲಿಯೋನಾರ್ಡರ ಸಹಾಯ ವನ್ನು ಪಡೆಯಲು ಅವರ ಬಳಿಗೆ ಹೋದೆನು. ಅವರಿಗೂ ಕಾಗದಪತ್ರ ಗಳ ಬಲದ ಮೇಲೆ ಮೊಕದ್ದಮೆಯು ನಮ್ಮ ಕಡೆ ಇರುವಂತೆ ತೋರಿತು. ಆಗ ಅವರು "ಗಾಂಧೀ, ನನಗೆ ಒಂದು ವಿಷಯ ಚೆನ್ನಾಗಿ ತಿಳಿದುಬಂದಿದೆ- ಮೊಕದ್ದಮೆಯ ವಿಷಯಗಳನ್ನು ನಾವು ಚೆನ್ನಾಗಿ ಮಂದಟ್ಟು ಮಾಡಿ ಕೊಂಡರೆ ಅದಕ್ಕೆ ಸಹಾಯವಾಗುವ ಕಾನೂನು ತಾನಾಗಿ ತಾನೇ ಓಡಿ ಬರುತ್ತದೆ. ಈ ಮೊಕದ್ದಮೆಯ ವಿಷಯಗಳನ್ನು ಇನ್ನೂ ಚೆನ್ನಾಗಿ ತಿಳಿದು ಕೊಳ್ಳೋಣ. ಹಾಗೆ ತಿಳಿದುಕೊಂಡಮೇಲೆ ಪುನಃ ಬಂದು ನನ್ನನ್ನು ನೋಡಿ" ಎಂದು ಹೇಳಿದರು. ನಾನು ಮೊಕದ್ದಮೆಯ ವಿಷಯಗಳನ್ನು ಪುನಃ ವಿಮರ್ಶಿಸಲು ಅವು ನನಗೆ ಬೇರೆ ರೀತಿಯಾಗಿ ಹೊಳೆದುವು. ಇದೂ ಅಲ್ಲದೆ ನಮ್ಮ ಕಡೆಗೆ ಅನುಕೂಲವಾಗಿದ್ದ ಒಂದು ದಕ್ಷಿಣ ಆಫ್ರಿಕದ ಹಳೆಯ ಮೊಕದ್ದಮೆಯೂ ಸಿಕ್ಕಿತು. ನನಗೆ ಇದರಿಂದ ಪರ ಮಾನಂದವಾಯಿತು. ನಾನು ಲಿಯೋನಾರ್ಡರ ಬಳಿಗೆ ಹೋಗಿ ಎಲ್ಲ ವನ್ನೂ ತಿಳಿಸಿದೆನು. ಅವರೂ ಸಂತೋಷಪಟ್ಟು "ಸರಿಯೆ. ನಾವು

ಈ ಮೊಕದ್ದಮೆಯಲ್ಲಿ ಗೆಲ್ಲುವೆವು. ಯಾವ ನ್ಯಾಯಾಧಿಪತಿಯ ಕೋರ್ಟಿನಲ್ಲಿ ಇದು ನಡೆಯುತ್ತದೆಯೆಂಬುದರ ಮೇಲೆ ಮಾತ್ರ ಸ್ವಲ್ಪ ಎಚ್ಚರಿಕೆಯನ್ನಿಟ್ಟಿರಬೇಕು.'' ಎಂದು ಹೇಳಿದರು.

ನಾನು ದಾದಾ ಅಬ್ದುಲ್ಲಾರವರ ಮೊಕದ್ದಮೆಗೆ ಸಿದ್ಧಪಡಿಸುತ್ತಿರುವಾಗ ಸಾಮಾನ್ಯ ವಿಷಯಗಳನ್ನು ತಿಳಿದುಕೊಳ್ಳುವುದರ ಮಹತ್ವವು ಇಷ್ಟು ಚೆನ್ನಾಗಿ ನನಗೆ ಗೊತ್ತಾಗಿರಲಿಲ್ಲ. ಮೊಕದ್ದಮೆಯ ವಿಷಯಗಳೆಂದರೆ ನಡೆದ ಸಂಗತಿಗಳು. ನಡೆದ ಸಂಗತಿಗಳೆಂದರೆ ಸತ್ಯವಾದ ವಿಷಯ. ಸತ್ಯವನ್ನು ಹಿಡಿದುಕೊಂಡರಾಯಿತು. ಕಾನೂನು ತಾನಾಗಿಯೇ ಸಹಾಯಕ್ಕೆ ಬರುತ್ತದೆ. ದಾದಾ ಅಬ್ದುಲ್ಲಾರವರ ಮೊಕದ್ದಮೆಯಲ್ಲಿ ವಿಷಯಗಳು ನಮ್ಮ ಕಡೆಗೆ ಇದ್ದುವೆಂದೂ ನಮಗೆ ಕಾನೂನಿನ ಸಹಾಯವು ದೊರೆಯಲೇಬೇಕೆಂದೂ ಕಡೆಗೆ ನನಗೆ ಗೊತ್ತಾಯಿತು. ಆದರೆ ಈ ಮೊಕದ್ದಮೆಯಲ್ಲಿ ಹೊಡೆದಾಡುವವರಿಬ್ಬರೂ ಹತ್ತಿರದ ನೆಂಟರಾಗಿದ್ದರು; ಒಂದೇಕಡೆ ವಾಸಿಸುತ್ತಿದ್ದರು. ಈ ಜಗಳವನ್ನು ನಿಲ್ಲಿಸದಿದ್ದರೆ ಇಬ್ಬರೂ ದಿವಾಳಿಯೇಳುವರೆನ್ನುವುದನ್ನು ನಾನು ಕಂಡೆನು. ಮೊಕದ್ದಮೆಯು ಎಂದಿಗೆ ಮುಗಿಯುವುದೆಂಬುದನ್ನು ಯಾರೂ ಹೇಳುವ ಹಾಗಿರಲಿಲ್ಲ. ಕೋರ್ಟಿನಲ್ಲಿಯೇ ಜಗಳವಾಗುವವರೆಗೂ ಎಷ್ಟು ದಿನ ಬೇಕಾದರೂ ಅದು ನಡೆಯಬಹುದಾಗಿದ್ದಿತು. ಅದರಿಂದ ಯಾವ ಪಕ್ಷದವರಿಗೂ ಲಾಭವುಂಟಾಗುತ್ತಿರಲಿಲ್ಲ. ಆದುದರಿಂದ ಇಬ್ಬರಿಗೂ ಸಾಧ್ಯವಾದರೆ ಒಡನೆಯೇ ಮೊಕದ್ದಮೆಯು ಮುಗಿಯಬೇಕೆಂಬ ಆಸೆಯಿತ್ತು.

ನಾನು ತೈಯಬ್ ಸೇಠರ ಬಳಿಗೆ ಹೋಗಿ ಎರಡು ಪಕ್ಷದವರೂ ಒಟ್ಟಿಗೆ ಸೇರಿ ಪಂಚಾಯಿತರ ಮುಂದೆ ತಮ್ಮ ಜಗಳವನ್ನು ಕೊನೆಗಾಣಿಸಬೇಕೆಂದು ಸಲಹೆ ಕೊಟ್ಟೆನು. ಅವರು ತಮ್ಮ ವಕೀಲರ ಅಭಿಪ್ರಾಯವನ್ನು ಕೂಡ ತಿಳಿದುಕೊಳ್ಳಬೇಕೆಂದು ಹೇಳಿದರು. ಇಬ್ಬರಿಗೂ ನಂಬಿಕೆಯಾದ ಯಾರಾದರೂ ಪಂಚಾಯಿತರನ್ನು ಗೊತ್ತುಮಾಡಿದರೆ ಮೊಕದ್ದಮೆಯು ಜಾಗ್ರತೆಯಾಗಿಯೇ ಮುಗಿಯುವುದೆಂದು ಹೇಳಿದೆನು. ವಕೀಲರಿಗೆ ಕೊಡಬೇಕಾದ ಹಣವು ಎಷ್ಟು ತೀವ್ರವಾಗಿ ಏರುತ್ತಿದ್ದಿ

ತೆಂದರೆ ಇವರಿಬ್ಬರಂತಹ ದೊಡ್ಡ ವರ್ತಕರ ವರಮಾನವನ್ನೆಲ್ಲಾ ಅದೇ ನುಂಗಿ ಬಿಡಲು ಸಾಕಾಗಿದ್ದಿತು. ಇಬ್ಬರಿಗೂ ಈ ಮೊಕದ್ದಮೆಯ ಚಿಂತೆಯಿಂದ ಬೇರೆ ಕೆಲಸವನ್ನು ಮಾಡುವುದಕ್ಕಾಗುತ್ತಿರಲಿಲ್ಲ. ಇದರ ಮಧ್ಯೆ ಇವರ ವೈಮನಸ್ಯವು ಹೆಚ್ಚುತ್ತಲೇ ಇದ್ದಿತು. ನನಗೆ ವಕೀಲ ಕೆಲಸದಲ್ಲಿ ಜಿಗುಪ್ಸೆಯುಂಟಾಯಿತು. ತಮ್ಮ ತಮ್ಮ ಪಕ್ಷಗಳ ಗೆಲುವಿಗಾಗಿ ಕಾನೂನಿನ ತಂತ್ರಗಳನ್ನು ಕಂಡುಹಿಡಿಯುವುದು ಎರಡೂ ಪಕ್ಷದ ವಕೀಲರ ಕೆಲಸವಾಗಿದ್ದಿತು. ಮತ್ತು ಗೆದ್ದ ಪಕ್ಷದವರಿಗೆ ಯಾವಾಗಲೂ ತಮ್ಮ ಖರ್ಚೆಲ್ಲಾ ಹುಟ್ಟುವುದಿಲ್ಲವೆಂಬುದು ಆಗ ತಾನೇ ನನ್ನ ಗೋಚರಕ್ಕೆ ಬಂದಿತು. ಕಾನೂನಿನ ಪ್ರಕಾರ ವಕೀಲನಿಗೆ ಕೊಡಬೇಕಾದ ರುಸುಮಿಗಿಂತ ವಕೀಲನು ಬಹಳ ಹೆಚ್ಚಾಗಿ ತೆಗೆದುಕೊಳ್ಳುತ್ತಿದ್ದನು. ನನಗೆ ಇದನ್ನು ಸಹಿಸಲಾಗಲಿಲ್ಲ. ಎರಡು ಪಕ್ಷದವರಿಗೂ ಮೈತ್ರಿಯನ್ನುಂಟುಮಾಡಬೇಕು, ಈ ಇಬ್ಬರು ನೆಂಟರನ್ನೂ ಒಟ್ಟಿಗೆ ಸೇರಿಸಬೇಕು ಎನ್ನುವುದೇ ನನ್ನ ಧರ್ಮವಾಗಿ ತೋರಿತು. ನಾನು ಎರಡು ಪಕ್ಷದವರಿಗೂ ರಾಜಿ ಮಾಡಿಸಲು ವಿಶ್ವಪ್ರಯತ್ನಪಟ್ಟೆನು. ಕಟ್ಟಕಡೆಗೆ ತೈಯಬ್ ಸೇಠರು ಒಪ್ಪಿದರು. ಒಬ್ಬ ಪಂಚಾಯಿತರನ್ನು ಗೊತ್ತುಮಾಡಿದುದಾಯಿತು. ಅವರ ಮುಂದೆ ಮೊಕದ್ದಮೆಯು ನಡೆಯಿತು. ದಾದಾ ಅಬ್ದುಲ್ಲಾರವರು ಗೆದ್ದರು.

ಆದರೆ ಇಷ್ಟಕ್ಕೇ ನನಗೆ ಸಂತೋಷವಾಗಲಿಲ್ಲ. ಪಂಚಾಯಿತರು ವಿಧಿಸಿದಂತೆ ತೈಯಬ್ ಸೇಠರು ಒಡನೆಯೇ ಎಲ್ಲಾ ಹಣವನ್ನು ಕೊಡುವುದಕ್ಕಾಗುತ್ತಿರಲಿಲ್ಲ. ದಕ್ಷಿಣ ಆಫ್ರಿಕದಲ್ಲಿದ್ದ ಪೋರಬಂದರದ ಮೆಮನ್ ವ್ಯಾಪಾರಗಳಲ್ಲಿ ದಿವಾಳಿಯಾಗುವುದಕ್ಕಿಂತ ಸಾಯುವುದು ಮೇಲೆಂಬುದಾಗಿ ಕಾಯದೆಯಂತೆಯೇ ಮೀರಲಾಗದ ಪದ್ಧತಿಯಿದ್ದಿತು. ತೈಯಬ್ ಸೇಠರು ೩೭ ಸಾವಿರ ಪೌಂಡನ್ನೂ (೫,೫೫,೦೦೦ ರೂ.) ವೆಚ್ಚವನ್ನೂ ಒಟ್ಟಿಗೆ ಕೊಡುವುದು ಸಾಧ್ಯವಿರಲಿಲ್ಲ. ಒಂದು ದಮ್ಮಡಿಕೂಡ ಕಡಿಮೆ ಮಾಡದೆ ಅದೆಲ್ಲವನ್ನೂ ಕೊಡಬೇಕೆಂದು ಅವರ ಉದ್ದೇಶವಿದ್ದಿತು. ದಿವಾಳಿಯೆನಿಸಿಕೊಳ್ಳಲು ಅವರಿಗೆ ಇಷ್ಟವಿರಲಿಲ್ಲ. ಇದಕ್ಕೆ ಒಂದೇ ಒಂದು ಮಾರ್ಗವಿದ್ದಿತು. ದಾದಾ ಅಬ್ದುಲ್ಲಾರವರು ಹಣವನ್ನು ಸಣ್ಣ ಸಣ್ಣ

ಕಂತುಗಳಲ್ಲಿ ತೆಗೆದುಕೊಳ್ಳುವುದಕ್ಕೆ ಒಪ್ಪುವುದೊಂದೇ. ಅವರೂ ಔದಾರ್ಯವನ್ನು ತೋರಿಸಿ ಸಾಲವನ್ನು ತೀರಿಸಲು ದೀರ್ಘಕಾಲ ವಾಯಿದೆಯನ್ನು ಕೊಟ್ಟರು. ನನಗೆ ಎರಡು ಪಕ್ಷದವರನ್ನೂ ಪಂಚಾಯತಿಗೆ ಒಪ್ಪಿಸುವುದಕ್ಕಿಂತ ಹಾಗೆ ಕಂತುಗಳಲ್ಲಿ ಹಣವನ್ನು ತೆಗೆದುಕೊಳ್ಳುವುದಕ್ಕೆ ಒಪ್ಪಿಸುವುದು ಹೆಚ್ಚು ಕಷ್ಟವಾಯಿತು. ಆದರೆ ಹಾಗೆ ರಾಜಿಯಾದುದರಿಂದ ಇಬ್ಬರೂ ಸಂತೋಷಪಟ್ಟರು. ಜನರಿಗೆ ಇಬ್ಬರಲ್ಲಿದ್ದ ಮನ್ನಣೆಯೂ ಹೆಚ್ಚಿತು. ನನ್ನ ಸಂತೋಷಕ್ಕಂತು ಪಾರವೇ ಇರಲಿಲ್ಲ. ಈ ಸಂದರ್ಭದಲ್ಲಿ ನಾನು ವಕೀಲಿ ಕೆಲಸದ ನೈಜಪಥವನ್ನು ಅರಿತೆನು. ಮಾನವ ಸ್ವಭಾವದ ಸದಂಶವನ್ನರಸಿ ಜನರ ಅಂತಃಕರಣವನ್ನು ಒಳಹೊಗುವ ರೀತಿಯನ್ನು ಕಲಿತೆನು. ವಿರೋಧದಿಂದ ಬೇರೆಯಾದ ಎರಡು ಪಕ್ಷದವರನ್ನು ಒಟ್ಟುಗೂಡಿಸುವುದೇ ವಕೀಲನ ನಿಜವಾದ ಕರ್ತವ್ಯವೆಂದು ಮನಗಂಡೆನು. ಈ ಅರಿವು ನನ್ನಲ್ಲಿ ಎಷ್ಟರಮಟ್ಟಿಗೆ ಬೇರೂರಿತೆಂದರೆ ನಾನು ವಕೀಲನಾಗಿದ್ದ ೨೦ ವರ್ಷ ನೂರಾರು ವ್ಯಾಜ್ಯಗಳನ್ನು ರಾಜಿಮಾಡುವುದರಲ್ಲಿ ಹೆಚ್ಚು ಕಾಲವನ್ನು ವಿನಿಯೋಗಿಸಿದೆನು. ಇದರಿಂದ ನನಗೆ ಯಾವ ನಷ್ಟವೂ ಉಂಟಾಗಲಿಲ್ಲ. ನನ್ನ ಆತ್ಮಕ್ಕಂತೂ ಇದರಿಂದ ನಷ್ಟವಾಗಲಿಲ್ಲವೆಂದು ಹೇಳಬೇಕಾದುದೇ ಇಲ್ಲ.



## ೧೫

# ಧಾರ್ಮಿಕ ಮಥನ

ಈಸಾಯಿಯಾ ಮತದವರೊಡನೆ ಸಂಬಂಧ ಬೆಳಸಿದನೆಂದು ಹಿಂದೆ ಹೇಳಿದನಷ್ಟೆ. ಆ ವಿಚಾರವಾಗಿ ಈಗ ಪುನಃ ಬರೆಯುವ ಸಮಯ ವೊದಗಿದೆ.

ನನ್ನ ಭವಿಷ್ಯತ್ತಿನ ವಿಚಾರವಾಗಿ ಬೇಕರರ ಚಿಂತೆಯು ಹೆಚ್ಚುತ್ತಾ ಹೋಯಿತು. ಅವರು ನನ್ನನ್ನು ವೆಲ್ಲಿಂಗ್ಟನ್ ಕನ್ವೆನ್ಶನಿಗೆ (ಈಸಾಯಿಯಾಗಳ ಕೂಟ) ಕರೆದುಕೊಂಡು ಹೋದರು. ಪ್ರಾಟೆಸ್ಟೆಂಟ್ ಪಂಗಡಕ್ಕೆ ಸೇರಿದ ಈಸಾಯಿಗಳು ತಮ್ಮಲ್ಲಿ ಧರ್ಮಜಾಗ್ರುತಿ ಅಥವಾ ಆತ್ಮಶುದ್ಧಿಯುಂಟಾಗಲು ಕೆಲವು ವರ್ಷಕ್ಕೊಮ್ಮೆ ಈ ತೆರನಾದ ಕೂಟಗಳನ್ನೇರ್ಪಡಿಸುತ್ತಾರೆ. ಇದನ್ನು ನಾವು ಈಸಾಯಿಯಾ ಧರ್ಮದ ಪುನರ್ಪ್ರತಿಷ್ಠೆಯೆಂದೋ ಅಥವಾ ಪುನರುದ್ಧಾರವೆಂದೋ ಕರೆಯಬಹುದು. ವೆಲ್ಲಿಂಗ್ಟನ್ ಕನ್ವೆನ್ಶನು ಈ ರೀತಿಯದಾಗಿದ್ದಿತು. ಅಲ್ಲಿನ ಪ್ರಖ್ಯಾತಧರ್ಮನಿಷ್ಠರಾದ ಪೂಜ್ಯ (ರೆವರೆಂಡ್) ಆಂಡ್ರೂ ಮರ್ರೆಯವರು ಈ ಸಮ್ಮೇಲನದ ಸಭಾಪತಿಗಳಾಗಿದ್ದರು. ಈ ಸಮ್ಮೇಳನದ ಧರ್ಮಶೀಲತೆಯ ವಾತಾವರಣವೂ ಅಲ್ಲಿ ಬಂದು ಸೇರಿದವರ ಧಾರ್ಮಿಕ ಉತ್ಸಾಹವೂ ಹಾಗೆಯೇ ಅವರ ಶ್ರದ್ಧೆಯೂ ನನ್ನನ್ನು ಈಸಾಯಿಯನ್ನಾಗಿ ಮಾಡೇಬಿಡುವುವೆಂಬುದಾಗಿ ಬೇಕರರು ಆಸೆಪಡುತ್ತಿದ್ದರು.

ಆದರೆ ಬೇಕರರ ಕಡೆಯ ಭರವಸೆಯು ಪ್ರಾರ್ಥನೆಯ ಚೈತನ್ಯದಲ್ಲಿದ್ದಿತು. ಅವರಿಗೆ ಈಶ್ವರ ಪ್ರಾರ್ಥನೆಯಲ್ಲಿ ಬಹು ಹೆಚ್ಚಾದ ಅಂತಃಕರಣದಿಂದ ಮಾಡಿದ ಪ್ರಾರ್ಥನೆಯು ದೇವರ ಕಿವಿಗೆ ಬೀಳಲೇಬೇಕೆಂಬ ಅಚಲ

ವಾದ ನಂಬಿಕೆಯಿದ್ದಿತು. ಐಹಿಕ ಇಷ್ಟಾರ್ಥಗಳಿಗೆ ಕೂಡ ಪ್ರಾರ್ಥನೆಯನ್ನೇ ನಂಬಿದ್ದ ಮುಲ್ಲರ (ಪ್ರಸ್ಟಲಿನ ಒಬ್ಬ ಪ್ರಸಿದ್ಧ ಈಸಾಯಿ) ರ ದೃಷ್ಟಾಂತವನ್ನೂ ಇತರರ ಉದಾಹರಣೆಯನ್ನೂ ಹೇಳುತ್ತಿದ್ದರು. ಪ್ರಾರ್ಥನೆಯ ಈ ಗುಣಗಾನವನ್ನು ನಾನು ಪಕ್ಷಪಾತವಿಲ್ಲದೆ ಕಿವಿಗೊಟ್ಟು ಕೇಳುತ್ತಿದ್ದೆನು. ನನ್ನ ಅಂತರಾತ್ಮನು ಹಾಗೆ ಹೇಳಿದರೆ ನಾನು ಈಸಾಯಿಾ ಮತವನ್ನು ಸ್ವೀಕರಿಸಲು ಯಾವ ಬಾಧಕವೂ ಅಡ್ಡಬರಲಾರದೆಂದು ಅವರಿಗೆ ಹೇಳಿದೆನು. ಅಂತರಾತ್ಮನ ಪ್ರೇರಣೆಗೆ ಅನುಸಾರವಾಗಿ ನಡೆಯುವುದನ್ನು ನಾನು ಆಗಲೇ ಬಹುಕಾಲದಿಂದ ಅಭ್ಯಾಸಮಾಡಿದ್ದುದರಿಂದ ನಾನು ಅವರಿಗೆ ಹೀಗೆ ಮಾತುಕೊಡಲು ಹಿಂತೆಗೆಯಲಿಲ್ಲ. ಅಂತರಾತ್ಮನ ವಶನಾಗಿ ನಡೆಯುವುದಕ್ಕೆ ನನಗೆ ಆನಂದವಾಗುತ್ತಿದ್ದಿತು; ಮತ್ತು ವಿರುದ್ಧವಾಗಿ ನಡೆಯುವುದು ಕಠಿನವಾಗಿಯೂ ಸಂಕಟಕರವಾಗಿಯೂ ತೋರುತ್ತಿದ್ದಿತು.

ನಾವು ವೆಲ್ಲಿಂಗ್ಟನಿಗೆ ಹೋದೆವು. ಬೇಕರರಿಗೆ ನನ್ನಂತಹ 'ಬಣ್ಣದ ಮನುಷ್ಯ'ನನ್ನು ಜತನಾಡಿಯಾಗಿ ಕರೆದುಕೊಂಡು ಹೋಗುವುದು ಕಷ್ಟಕರವಾಯಿತು. ಕೇವಲ ನನ್ನ ದೆಸೆಯಿಂದ ಅವರು ಅನೇಕಸಲ ತೊಂದರೆಗಳನ್ನನುಭವಿಸಬೇಕಾಯಿತು. ಭಾನುವಾರವು ನಮ್ಮ ಪ್ರಯಾಣದ ಮಧ್ಯೆ ಬಂದುದರಿಂದ ದಾರಿಯಲ್ಲಿ ನಾವು ಒಂದು ಸ್ಥಳದಲ್ಲಿ ಇಳಿಯಬೇಕಾಯಿತು. ಬೇಕರರ ಗುಂಪು ಭಾನುವಾರ ಪ್ರಯಾಣಮಾಡುತ್ತಿರಲಿಲ್ಲ. ಆ ಸ್ಟೇಷನಿನ ಹೋಟಲಿನ ಮಾಲಿಕನು ಬಹಳ ಚರ್ಚೆಯಾದಮೇಲೆ ನನ್ನನ್ನು ಇಳಿಸಿಕೊಳ್ಳಲು ಒಪ್ಪಿದರೂ ನನಗೆ ಊಟದ ಮನೆಯಲ್ಲಿ ಬಡಿಸುವುದಕ್ಕೆ ಖಂಡಿತದಿಂದ ನಿರಾಕರಿಸಿದನು. ಬೇಕರರು ಸುಲಭವಾಗಿ ಬಿಟ್ಟುಬಿಡುವ ಮನುಷ್ಯರಾಗಿರಲಿಲ್ಲ. ಅವರು ಭೋಜನಶಾಲೆಗೆ ಬರುವ ಅತಿಥಿಗಳ ಹಕ್ಕಿನ ಆಧಾರದ ಮೇಲೆ ನಿಂತರು. ಆದರೆ ನನಗೆ ಅವರ ಕಷ್ಟವು ತಿಳಿಯಿತು. ವೆಲ್ಲಿಂಗ್ಟನಿನಲ್ಲೂ ನಾನು ಅವರ ಜೊತೆಯಲ್ಲಿಯೇ ಇದ್ದೆನು. ಅಲ್ಲಿ ಅವರು ತಮ್ಮ ತೊಂದರೆಗಳನ್ನು ಎಷ್ಟು ಮರೆಮಾಚಿದರೂ ಅವೆಲ್ಲವೂ ನನ್ನ ಕಣ್ಣಿಗೆ ಬಿದ್ದುವು.

ಈ ಸಭೆಯು ಭಕ್ತಿಶೀಲರಾದ ಈಸಾಯಿಗಳ ಕೂಟವಾಗಿದ್ದಿತು. ಅವರ ಧರ್ಮಶ್ರದ್ಧೆಯನ್ನು ನೋಡಿ ನನಗೆ ಸಂತೋಷವಾಯಿತು. ನನಗೆ ಪೂಜ್ಯ ಮರ್ರೆಯವರ ಭೆಟ್ಟಿಯಾಯಿತು. ನನ್ನ ಹಿತಕ್ಕಾಗಿ ಅನೇಕರು ಪ್ರಾರ್ಥಿಸುತ್ತಿದ್ದುದನ್ನು ನೋಡಿದೆನು. ಅವರ ಪ್ರಾರ್ಥನಾಗೀತೆಗಳಲ್ಲಿ ಅನೇಕವು ನನ್ನ ಒಪ್ಪಿಗೆಗೆ ಬಂದುವು. ಅವು ಬಹು ಇಂಪಾಗಿದ್ದುವು.

ಸಭೆಯು ಮೂರುದಿನಗಳ ವರೆಗೆ ನಡೆಯಿತು. ಅಲ್ಲಿಗೆ ಬಂದಿದ್ದವರ ಭಕ್ತಿಯು ನನ್ನ ಮನಸ್ಸಿಗೆ ತಟ್ಟಿತು. ಅದನ್ನು ನಾನು ಮೆಚ್ಚಿಯೂ ಮೆಚ್ಚಿದೆನು. ಆದರೆ ನನಗೆ ನನ್ನ ನಂಬಿಕೆಯನ್ನು—ಧರ್ಮವನ್ನು—ಬದಲಾಯಿಸುವುದಕ್ಕೆ ಕಾರಣವೇನೂ ಕಂಡುಬರಲಿಲ್ಲ. ಈಸಾಯಿಯಾಗುವುದರಿಂದ ಮಾತ್ರವೆ ನಾನು ಸ್ವರ್ಗವನ್ನು ಮುಟ್ಟಲು ಶಕ್ಯ, ಮೋಕ್ಷವನ್ನು ಪಡೆಯುವುದು ಸಾಧ್ಯ ಎಂಬುದನ್ನು ನಂಬುವುದು ನನಗೆ ಅಸಾಧ್ಯವಾಗಿದ್ದಿತು. ಇದನ್ನು ನಾನು ನಿಷ್ಕಪಟವಾಗಿ ನನ್ನ ಈಸಾಯಿ ಮಿತ್ರರಲ್ಲಿ ಕೆಲವರ ಮುಂದೆ ಹೇಳಿದಾಗ ಅವರಿಗೆ ಅತ್ಯಂತ ಖೇದವೂ ಆಶ್ಚರ್ಯವೂ ಉಂಟಾಯಿತು. ಆದರೆ ಇದಕ್ಕೆ ಉಪಾಯವಿರಲಿಲ್ಲ.

ಈ ವಿಷಯದಲ್ಲಿ ನನಗಿದ್ದ ತೊಂದರೆಗಳು ಇನ್ನೂ ಆಳದಲ್ಲಿದ್ದುವು. 'ಯೇಸುವೊಬ್ಬನೇ ದೇವರ ರೂಪುವೆತ್ತ ಪುತ್ರ. ಆತನಲ್ಲಿ ನಂಬಿಕೆಯಿಟ್ಟವರಿಗೆ ಮಾತ್ರ ಮುಕ್ತಿಯುಂಟಾಗುವುದು.' ಎಂಬುದು ನನ್ನ ನಂಬಿಕೆಯ ಶಕ್ತಿಯನ್ನು ಮೀರಿದ್ದಿತು. ದೇವರಿಗೆ ಮಕ್ಕಳಿರುವುದೇ ಆದರೆ ನಾವೆಲ್ಲರೂ ಆತನ ಮಕ್ಕಳೇ. ಯೇಸುವು ಈಶ್ವರನ ಸಮಾನನಾಗಿ ಅಥವಾ ಈಶ್ವರನೇ ಆಗಿದ್ದರೆ ಮನುಷ್ಯರೆಲ್ಲರೂ ಈಶ್ವರಸಮಾನರಾಗುವುದು ಅಥವಾ ಈಶ್ವರರಾಗುವುದು ಸಾಧ್ಯ. "ಯೇಸುವಿನ ಮರಣದಿಂದ ಮತ್ತು ಆತನ ರಕ್ತದಿಂದ ಪ್ರಪಂಚದ ಪಾಪವೆಲ್ಲವೂ ಪರಿಹಾರವಾಗುತ್ತದೆ." ಎಂಬುದನ್ನು ಪದಶಃ ನಂಬುವುದಕ್ಕೆ ನನ್ನ ಬುದ್ಧಿಯು ಒಪ್ಪುತ್ತಿರಲಿಲ್ಲ. ಇದನ್ನು ರೂಪಕಾಲಂಕಾರವಾಗಿ ತೆಗೆದುಕೊಂಡರೆ ಇದರಲ್ಲಿ ಸತ್ಯವಿದ್ದರೂ ಇರಬಹುದು. ಇದಲ್ಲದೆ ಕ್ರೈಸ್ತಧರ್ಮದ ಪ್ರಕಾರ ಮನುಷ್ಯರಿಗೆ ಮಾತ್ರ ಆತ್ಮವುಂಟು; ಉಳಿದ ಪ್ರಾಣಿಗಳಿಗೆ ಇಲ್ಲ. ಅವುಗಳ ಶರೀರಪಾತದೊಡನೆ ಅವುಗಳಿಗೆ ಸರ್ವಥಾ ನಾಶವುಂಟಾ

ಗುತ್ತದೆ. ನನ್ನ ಮತವು ಇದಕ್ಕೆ ವಿರುದ್ಧವಾಗಿದ್ದಿತು. ಯೇಸುವು ಧರ್ಮದ ಸಲುವಾಗಿ ಹರಣವೊಡ್ಡಿದವನೆಂದೂ ತ್ಯಾಗಿಯಾದ ಮಹಾತ್ಮನೆಂದೂ ದೇವಾಂಶವುಳ್ಳ ಧರ್ಮೋಪದೇಶಕನೆಂದೂ ಎಣಿಸಲು ನಾನು ಸಿದ್ಧನಾಗಿದ್ದೆನು. ಆದರೆ ಸೃಷ್ಟಿಯ ಪುರುಷೋತ್ತಮನೆಂದು ಆತನನ್ನು ಸ್ವೀಕರಿಸುವುದಕ್ಕೆ ನಾನು ಒಡಂಬಡುತ್ತಿರಲಿಲ್ಲ. ಆತನು ಸಿಲುಬೆಯ ಮೇಲೆ ಮೃತ್ಯುವನ್ನು ಹೊಂದಿದುದು ಪ್ರಪಂಚಕ್ಕೆ ಒಂದು ದೊಡ್ಡ ಆದರ್ಶವೇ ಸರಿ. ಆದರೆ ಅದರಲ್ಲಿ ಗೂಢವಾದ ಗುಣವಾಗಲಿ ಪವಾಡದ ಪ್ರಭಾವವಾಗಲೀ ಇದೆಯೆಂಬುದನ್ನು ನನ್ನ ಅಂತರಾತ್ಮನು ಒಪ್ಪುತ್ತಿರಲಿಲ್ಲ. ಇತರ ಧರ್ಮಾವಲಂಬಿಗಳ ಪವಿತ್ರ ಜೀವನದಲ್ಲಿ ದೊರಕದಿದ್ದ ಯಾವ ವಿಷಯವೂ ಕ್ರೈಸ್ತಭಕ್ತರ ಜೀವನದಲ್ಲಿರುವುದಾಗಿ ನನಗೆ ಕಾಣಲಿಲ್ಲ. ಇವರ ಜೀವನಗಳಲ್ಲುಂಟಾದಂತೆ ನಾನು ಕೇಳಿದ ಪರಿವರ್ತನಗಳು ಇತರರ ಜೀವನದಲ್ಲಿಯೂ ಕಂಡುಬರುತ್ತಿದ್ದುವು. ದಾರ್ಶನಿಕ ದೃಷ್ಟಿಯಿಂದ ನೋಡಿದರೆ ನನಗೆ ಕ್ರೈಸ್ತ ತತ್ವಗಳಲ್ಲಿ ಯಾವ ವಿಶೇಷತೆಯೂ ಕಾಣಬರಲಿಲ್ಲ. ತ್ಯಾಗದ ದೃಷ್ಟಿಯಿಂದ ನೋಡಿದರೆ ಹಿಂದುಗಳು ಈಸಾಯಿಸಾಯರನ್ನು ಬಹಳವಾಗಿ ಮೀರಿಸದಂತೆ ನನಗೆ ತೋರಿತು. ಕ್ರೈಸ್ತಮತವು ಹುಳುಕಿಲ್ಲದ ಮತವೆಂದವಾಗಲಿ ಎಲ್ಲಾ ಮತಗಳಿಗಿಂತ ಉತ್ಕೃಷ್ಟವಾದ ಮತವೆಂದಾಗಲಿ ನನಗೆ ನಂಬುವುದಕ್ಕಾಗಲಿಲ್ಲ.

ನನ್ನ ಮನಸ್ಸಿನಲ್ಲಾಗುತ್ತಿದ್ದ ಈ ಮಥನದ ವಿಚಾರವನ್ನು ನಾನು ಸಮಯವೊದಗಿದಾಗ ನನ್ನ ಈಸಾಯಿಸಾ ಮಿತ್ರರೊಡನೆ ಹೇಳುತ್ತಿದ್ದೆನು. ಆದರೆ ಅವರ ಉತ್ತರಗಳಿಂದ ನನಗೆ ತೃಪ್ತಿಯಾಗಲಿಲ್ಲ.

ಯಾವ ರೀತಿಯಾಗಿ ನಾನು ಕ್ರೈಸ್ತಧರ್ಮವನ್ನು ನಂಬಲಾಗಲಿಲ್ಲವೋ ಹಾಗೆಯೇ ಹಿಂದೂ ಧರ್ಮವನ್ನು ನಾನು ಸಂಪೂರ್ಣತೆಯುಳ್ಳ ಮತ್ತು ಸರ್ವೋತ್ತಮವಾದ ಧರ್ಮವೆಂದು ನಂಬಲಾಗಲಿಲ್ಲ. ಹಿಂದೂ ಧರ್ಮದ ಹುಳುಕುಗಳು ಕಣ್ಣಿಗೆ ಚುಚ್ಚಿದಹಾಗೆ ಕಾಣುತ್ತಿದ್ದುವು. ಅಸ್ಪೃಶ್ಯತೆಯು ಹಿಂದೂಧರ್ಮದ ಅಂಗವೆಂದು ಎಣಿಸಬೇಕಾದರೆ ಅದು ಒಂದು ನಿರರ್ಥಕವಾದ ಕೊಳೆತ ಅಂಗವಾಗಿರಬೇಕು. ಹಿಂದುಗಳಲ್ಲಿ ಅನೇಕ ಸಂಪ್ರದಾಯುಗಳೂ ಜಾತಿಗಳೂ ಇರುವುದರ ಗೂಢಾರ್ಥವು ನನಗೆ

ತಿಳಿಯಲಿಲ್ಲ. ವೇದಗಳು ಈಶ್ವರನಿಂದ ಹುಟ್ಟಿದವುಗಳೆಂದು ಹೇಳುವ್ವ ದರ ಅರ್ಥವೇನು? ಇದು ನಿಜವಾದರೆ ಬೈಬಲೂ ಕುರಾನೂ ಅಂತಹವೇ ಆಗಿರಕೂಡದೇಕೆ?

ಈಸಾಯಿ ಮಿತ್ರರು ನನ್ನನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಪ್ರಯತ್ನಪಡುತ್ತಿದ್ದಂತೆಯೇ ನನ್ನ ಮುಸಲ್ಮಾನ ಸ್ನೇಹಿತರೂ ನನ್ನನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಯತ್ನಿಸುತ್ತಿದ್ದರು. ಅಬ್ದುಲ್ಲಾ ಸೇಠರು ನನ್ನನ್ನು ಈಸ್ಲಾಂ ಮತದ ಅಧ್ಯಯನವನ್ನು ಮಾಡೆಂದು ಹಗ ಲೆಲ್ಲಾ ಪ್ರೇರಿಸುತ್ತಿದ್ದರು. ತಮ್ಮ ಮತದ ಗುಣಗಳ ವಿಚಾರವಂತೂ ಹೇಳುವುದಕ್ಕೆ ಅವರಿಗೆ ಯಾವಾಗಲೂ ಇರುತ್ತಲೇ ಇದ್ದಿತು.

ನಾನು ನನ್ನ ಈ ಕಷ್ಟಗಳ ವಿಚಾರವಾಗಿ ರಾಯಚಂದಭಾಯಿಗೆ ಬರೆದೆನು. ನಾನು ಹಿಂದೂಸ್ಥಾನದಲ್ಲಿನ ಇತರ ಧರ್ಮಾಚಾರ್ಯರಿಗೂ ಕಾಗದಗಳನ್ನೂ ಬರೆದೆನು. ಅವರ ಉತ್ತರಗಳೂ ಬಂದುವು. ರಾಯ ಚಂದ್ರಜಿಯವರ ಕಾಗದದಿಂದ ನನ್ನ ಮನಸ್ಸಿಗೆ ಕೊಂಚಮಟ್ಟಿಗೆ ಶಾಂತಿ ಯುಂಟಾಯಿತು. ಅವರು ನಾನು ತಾಳ್ಮೆಯಿಂದ ಇರಬೇಕೆಂದೂ ಹಿಂದೂಧರ್ಮವನ್ನು ಇನ್ನೂ ಚೆನ್ನಾಗಿ ಅಧ್ಯಯನಮಾಡಬೇಕೆಂದೂ ಹೇಳಿ ದರು. ಅವರು ಬರೆದಿದ್ದ ಒಂದು ವಾಕ್ಯದ ಭಾವಾರ್ಥವೇನೆಂದರೆ:— "ಪಕ್ಷಪಾತ ರಹಿತನಾಗಿ ವಿಚಾರಮಾಡಿದಮೇಲೆ ನನಗೆ ಸಂಶಯವಿಲ್ಲದೆ ತೋರಿಬರುವುದೇನಂದರೆ ಹಿಂದೂಧರ್ಮದಲ್ಲಿನ ಸೂಕ್ಷ್ಮವಾದ ಮತ್ತು ಮಹತ್ವದ ವಿಚಾರವೂ ಅದರಲ್ಲಿನ ಆತ್ಮನಿರೀಕ್ಷಣದರ್ಶನವೂ ಅದರ ಔದಾ ರ್ಯವೂ ಇನ್ನಾವ ಧರ್ಮದಲ್ಲಿಯೂ ಇಲ್ಲ.'

ನಾನು ಸೇಲಾ ಮಾಡಿರುವ ಕುರಾನಿನ ಭಾಷಾಂತರವನ್ನು ಕೊಂಡುಕೊಂಡು ಓದಲು ಪ್ರಾರಂಭಿಸಿದೆನು. ಇಸ್ಲಾಂ ಧರ್ಮಕ್ಕೆ ಸಂಬಂಧಪಟ್ಟ ಇತರ ಪುಸ್ತಕಗಳನ್ನೂ ಸಂಪಾದಿಸಿದೆನು. ಈಗ ನಾನು ವಿಲಾಯತಿಯಲ್ಲಿದ್ದ ನನ್ನ ಈಸಾಯಿ ಮಿತ್ರರೊಂದಿಗೆ ಪತ್ರವ್ಯವಹಾರ ನಡೆಸಿದೆನು. ಇವರಲ್ಲೊಬ್ಬರು ನನಗೆ ಎಡ್ವರ್ಡ್ ಮೆಯ್ಟ್‌ಲೆಂಡ್ ಎಂಬುವರ ಪರಿಚಯವನ್ನು ಮಾಡಿಕೊಟ್ಟರು. ಅವರೊಡನೆಯೂ ಕಾಗದಪತ್ರವನ್ನು ಬೆಳೆಸಿದೆನು. ಅವರು ತಾವು ಆನ್ನಾ ಕಿಂಗ್ಸ್‌ಫರ್ಡ್

ಎಂಬಾಕೆಯ ಜೊತೆಗೆ ಬರೆದಿದ್ದ "ದಿ ಪರ್ಫೆಕ್ಟ್ ವೇ" (ಸರ್ವೋತ್ತಮ ಮಾರ್ಗ) ಎಂಬ ಪುಸ್ತಕವನ್ನು ನನಗೆ ಕಳುಹಿಸಿಕೊಟ್ಟರು. ಆ ಪುಸ್ತಕವು ಪ್ರಚಲಿತ ಈಸಾಯಿ ಧರ್ಮದ ಖಂಡನೆಯಾಗಿದ್ದಿತು. ಈ ಸಜ್ಜನರು "ಬೈಬಲಿನ ನವೀನಾರ್ಥ" ಎಂಬ ಪುಸ್ತಕವನ್ನು ನನಗೆ ಕಳುಹಿಸಿಕೊಟ್ಟರು. ನಾನು ಇವೆರಡನ್ನೂ ಮೆಚ್ಚಿದೆನು. ಇವು ನನಗೆ ಹಿಂದೂ ಮತವನ್ನು ಸಮರ್ಥಿಸುವಂತೆ ತೋರಿದುವು. ಟಾಲ್‌ಸ್ಟಾಯ್‌ರವರು ಬರೆದ "ಈಶ್ವರನ ಸಾಮ್ರಾಜ್ಯವು ನಿನ್ನ ಹೃದಯದಲ್ಲಿದೆ"(ಏ) ಎಂಬ ಪುಸ್ತಕವು ನನ್ನನ್ನು ಮುಗ್ಧನನ್ನಾಗಿ ಮಾಡಿತು. ಈ ಪುಸ್ತಕವನ್ನು ಓದಿದುದರಿಂದ ಎಂದೂ ಅಳಿಸಿ ಹೋಗದಂತಹ ಛಾಪೆಯು ನನ್ನ ಮನಸ್ಸಿನ ಮೇಲೆ ಬಿದ್ದಿತು. ಈ ಪುಸ್ತಕದಲ್ಲಿ ತೋರಿಬಂದ ತತ್ವಾನ್ವೇಷಣೆಯು ಸ್ವಾತಂತ್ರ್ಯತೆ, ನೀತಿಪ್ರೌಢತೆ ಮತ್ತು ಸತ್ಯಪರಾಯಣತೆಯು ಮುಂದೆ ಕೋಟ್ಸರು ಕೊಟ್ಟ ಪುಸ್ತಕಗಳು ಕಳೆಗುಂದಿದವಾಗಿ ಕಂಡವು.

ಈ ರೀತಿಯಾಗಿ ನನ್ನ ಅಧ್ಯಯನವು ಈಸಾಯಿ ಮಿತ್ರರು ನಿರೀಕ್ಷಿಸದ ಮಾರ್ಗದಲ್ಲಿ ಸಾಗಿತು. ಎಡ್ವರ್ಡ್ ಮೆಯ್ಟ್‌ಲೆಂಡರೊಡನೆ ನನ್ನ ಪತ್ರವ್ಯವಹಾರವು ಹೆಚ್ಚಿ ಅನೇಕ ದಿನಗಳವರೆಗೆ ನಡೆಯಿತು. ಮತ್ತು ರಾಯಚಂದಭಾಯಿಯೊಡನೆಯಂತು ಅವರ ಮರಣದವರೆಗೂ ನಡೆಯುತ್ತಿದ್ದಿತು. ಅವರು ನನಗೆ ಕಳುಹಿಸಿ ಕೊಟ್ಟ ಕೆಲವು ಪುಸ್ತಕಗಳನ್ನು ಓದಿದೆನು. ಇವುಗಳಲ್ಲಿ 'ಪಂಚೀಕರಣ', 'ಮಣಿರತ್ನಮಾಲಾ', ಯೋಗವಾಸಿಷ್ಠದ 'ಮುಮುಕ್ಷು ಪ್ರಕರಣ', ಹರಿಭದ್ರಸೂರಿಯ 'ಷಡ್ದರ್ಶನ ಸಮುಚ್ಚಯ' ಎಂಬ ಪುಸ್ತಕಗಳೂ ಇದ್ದುವು.

ನಾನು ಹೀಗೆ ನನ್ನ ಈಸಾಯಿ ಮಿತ್ರರು ಉದ್ದೇಶಿಸದ ಮಾರ್ಗವನ್ನು ಅನುಸರಿಸಿದರೂ ಅವರೊಡನೆ ಬೆಳೆಸಿದ ಸಂಬಂಧದ ಫಲವಾಗಿ ಧರ್ಮಜಿಜ್ಞಾಸೆಯ ರೂಪದಲ್ಲಿ ನನ್ನಲ್ಲುಂಟಾದ ಜಾಗೃತಿಗಾಗಿ ನಾನು ಅವರಿಗೆ ಚಿರಋಣಿಯಾಗಿದ್ದೇನೆ. ಈ ಸಂಬಂಧದ ನೆನಪು ನನ್ನಲ್ಲಿ ಸದಾ ನಿಲ್ಲುತ್ತದೆ. ಈ ಮಧುರವಾದ ಮತ್ತು ಪವಿತ್ರವಾದ ಸಂಬಂಧವು ಬರಬರುತ್ತಾ ಹೆಚ್ಚಾಯಿತೇ ಹೊರತು ಕಡಿಮೆಯಾಗಲಿಲ್ಲ.

---

# ೧೬

# ಮನುಷ್ಯನ ಪ್ರಯತ್ನವೊಂದಾದರೆ ದೈವೇಚ್ಛೆ ಇನ್ನೊಂದು (೨)

ಮೊಕದ್ದಮೆಯು ಮುಗಿದುದರಿಂದ ನಾನು ಪ್ರಿಟೋರಿಯಾದಲ್ಲಿ ನಿಲ್ಲಲು ಕಾರಣವಿರಲಿಲ್ಲ. ಆದುದರಿಂದ ನಾನು ಡರ್ಬನಿಗೆ ಹೋಗಿ ಹಿಂದೂಸ್ಥಾನಕ್ಕೆ ಹಿಂತಿರುಗುವ ಸನ್ನಾಹಕ್ಕೆ ಮೊದಲು ಮಾಡಿದೆನು. ಅಬ್ದುಲ್ಲಾ ಸೇಠರು ನನಗೆ ಮಾನ ಮರ್ಯಾದೆ ಮಾಡದೆ ಕಳುಹಿಸಿಕೊಡುವ ಮನುಷ್ಯರಾಗಿರಲಿಲ್ಲ. ಅವರು ತಮ್ಮ ಮಿತ್ರಮಂಡಲಿಯನ್ನು ಕರೆದು ನನಗೆ ಸಿಡನ್‌ಹ್ಯಾಮಿನಲ್ಲಿ ಔತಣಕೊಟ್ಟರು.

ಆ ದಿನವನ್ನೆಲ್ಲಾ ಅಲ್ಲಿಯೇ ಕಳೆಯಬೇಕೆಂದು ಸೂಚಿತವಾಗಿದ್ದಿತು. ನನ್ನ ಹತ್ತಿರ ಅನೇಕ ಸಮಾಚಾರ ಪತ್ರಗಳು ಬಿದ್ದಿದ್ದುವು. ನಾನು ಅವನ್ನು ಓದತೊಡಗಿದೆನು. ಓದುತ್ತಾ ಓದುತ್ತಾ ಅವುಗಳಲ್ಲಿ ಒಂದರ ಮೂಲೆಯಲ್ಲಿದ್ದ 'ಇಂಡಿಯನ್ ಫ್ರಾಂಚೈಸ್' ಅಥವಾ 'ಭಾರತೀಯರ ಮತಾಧಿಕಾರ' (ಕಾಯದೆಸಭೆ ಅಥವಾ ಧಾರಾಸಭೆಗೆ ತಮ್ಮ ಪ್ರತಿನಿಧಿಗಳನ್ನು ಚುನಾಯಿಸುವ ಅಧಿಕಾರ) ಎಂಬ ಶೀರ್ಷಿಕದ ಕೆಳಗಿನ ಬರವಣಿಗೆಯಮೇಲೆ ನನ್ನ ಕಣ್ಣು ಬಿದ್ದಿತು. ಇದರ ಸಾರಾಂಶವೇನೆಂದರೆ ನೇಟಾಲಿನ ಧಾರಾಸಭೆ (ಲೇಜಿಸ್ಲೆಟಿವ್ ಅಸೆಂಬ್ಲಿ)ಗೆ ಸದಸ್ಯರನ್ನು ಚುನಾಯಿಸಲು ಭಾರತೀಯರಿಗಿದ್ದ ಹಕ್ಕನ್ನು ಕಿತ್ತುಕೊಳ್ಳಬೇಕೆಂದು. ಇದೇ ಸಂಬಂಧವಾಗಿಯೇ ತಂದ ಕಾನೂನು ಆಗ ಧಾರಾಸಭೆಯ ಮುಂದಿದ್ದಿತು. ನನಗೆ ಈ ಕಾನೂನು ತಿಳಿದಿರಲಿಲ್ಲ. ಅಲ್ಲಿದ್ದ ಇತರರಾರಿಗೂ ಇದರ ವಿಚಾರವು ಗೊತ್ತಿರಲಿಲ್ಲ.

ನಾನು ಇದರ ವಿಷಯವೇನೆಂದು ಅಬ್ದುಲ್ಲಾ ಸೇಠರನ್ನು ಕೇಳಿದೆನು. ಅವರು "ಈ ವಿಷಯಗಳಲ್ಲಿ ನಮಗೇನು ತಿಳಿಯುವುದು?

ನಮ್ಮ ವ್ಯಾಪಾರಕ್ಕೆ ಸಂಬಂಧಪಟ್ಟ ಸಮಾಚಾರಗಳು ಮಾತ್ರ ನಮಗೆ ತಿಳಿಯುತ್ತವೆ. ನಿಮಗೆ ತಿಳಿದಿರುವಹಾಗೆಯೇ ಆರೇಂಜ್ ಫ್ರೀಸ್ಟೇಟಿನ ನಲ್ಲಿ ನಮ್ಮ ವ್ಯಾಪಾರವೆಲ್ಲಾ ಕೊಚ್ಚಿಕೊಂಡು ಹೋಗಿದೆ. ನಾವು ಇದರ ಸಂಬಂಧವಾಗಿ ಚಳವಳಿ ನಡೆಸಿದೆವು. ಆದರೂ ಏನೂ ಸಾಗಲಿಲ್ಲ. ನಮಗೆ ಓದುಬರಹ ಬಾರದುದರಿಂದ ನಾವು ಎಷ್ಟೇ ಆಗಲಿ ಕುಂಟರು. ನಾವು ವೃತ್ತಪತ್ರಗಳನ್ನು ಓದುತ್ತೇವೆ---ಆದರೆ ಧಾರಣೆಯ ಪರಿಶಿತ ಗಳನ್ನು ತಿಳಿದುಕೊಳ್ಳುವುದಕ್ಕೆ ಮಾತ್ರ. ಕಾಯದೆಕಾನೂನುಗಳ ವಿಚಾರ ನಮಗೇನು ಗೊತ್ತಾಗುತ್ತದೆ? ನಮ್ಮ ಫರಂಗಿ ವಕೀಲರೇ ನಮಗೆ ಕಣ್ಣು ಕಿವಿ ಎಂದು ತಿಳಿಯಿರಿ!'' ಎಂದು ಉತ್ತರ ಕೊಟ್ಟರು.

ಇದಕ್ಕೆ ನಾನು ''ಇಲ್ಲಿಯೇ ಹುಟ್ಟಿ ಬೆಳೆದು ಶಿಕ್ಷಣಹೊಂದಿದ ನವ ಯುವಕರು ಇಷ್ಟೊಂದು ಮಂದಿ ಇಲ್ಲದ್ದಾರೆ. ಅವರು ನಿಮಗೆ ಸಹಾ ಯಮಾಡುವುದಿಲ್ಲವೆ?'' ಎಂದು ಕೇಳಿದೆನು.

ಅಬ್ದುಲ್ಲಾ ಸೇಠರು ನಿರಾಸೆಯನ್ನು ಸೂಚಿಸುತ್ತಾ ''ಅವರೆ! ಅವರು ನಮ್ಮ ಹತ್ತಿರ ಬರಲೆಳಸುವುದಿಲ್ಲ; ನಿಜ ಹೇಳಬೇಕೆಂದರೆ ನಾವು ಅವ ರನ್ನು ನಮ್ಮವರೆಂದು ಹೇಳಿಕೊಳ್ಳಲೂ ಆತುರರಾಗಿಲ್ಲ. ಅವರೆಲ್ಲರೂ ಈಸಾಯಿಗಳು. ಆದುದರಿಂದ ಅವರು ಪಾದ್ರಿಗಳ ಮುಷ್ಟಿಯಲ್ಲಿದ್ದಾರೆ. ಬಿಳೀ ಪಾದರಿಗಳಂತೂ ಸರಕಾರದ ಹಿಡಿತದಲ್ಲಿದ್ದಾರೆ!'' ಎಂದು ಹೇಳಿದರು.

ಇದನ್ನು ಕೇಳಿ ನಾನು ಕಣ್ತೆರೆದೆನು. ಈ ಜನರನ್ನು ನಮ್ಮವ ರನ್ನಾಗಿ ಮಾಡಿಕೊಳ್ಳಲೇಬೇಕೆಂದು ನನಗೆ ತೋರಿತು. ಇದೇ ಏನು ಈಸಾಯಿಾ ಧರ್ಮದ ಅರ್ಥ? ಅವರು ಈಸಾಯಿಗಳಾದ ಮಾತ್ರದಿಂದ ಭಾರತೀಯರಲ್ಲವೇನು.?

ಆದರೆ ನಾನು ಹಿಂದೂಸ್ಥಾನಕ್ಕೆ ಹಿಂತಿರುಗುವುದರಲ್ಲಿದ್ದುದರಿಂದ ಮನಸ್ಸಿನಲ್ಲಿದ್ದ ಯೋಚನೆಗಳನ್ನು ವ್ಯಕ್ತಪಡಿಸಲು ಹಿಂತೆಗೆದೆನು. ಸುಮ್ಮನೆ ಅಬ್ದುಲ್ಲಾ ಸೇಠರಿಗೆ ''ಈ ಕಾನೂನು ಜಾರಿಗೆ ಬಂದರೆ ನಿಮ್ಮ ಪಾಡು ಅತಿಕಷ್ಟವಾಗುತ್ತದೆ. ಭಾರತೀಯರ ಹುಟ್ಟನ್ನು ಅಡಗಿಸುವ

ದಕ್ಕೆ ಇದು ಮೊದಲನೆಯ ಹೆಜ್ಜೆ. ಇದು ನಮ್ಮ ಆತ್ಮ ಗೌರವದ ಬುಡ ವನ್ನೇ ಕತ್ತರಿಸುತ್ತದೆ.'' ಎಂದೆನು.

''ಇರಬಹುದು. ಆದರೆ ನಾನು ನಿಮಗೆ ಈ 'ಫರೆಂಚಾಯಿಜ್' [ಎಂದರೆ ಮತಾಧಿಕಾರ. ಇಂಗ್ಲಿಷ್ ಭಾಷೆಯ ಅನೇಕ ಶಬ್ದಗಳನ್ನು ಅಲ್ಲಿಹೋಗಿ ಸೇರಿದ್ದ ಭಾರತೀಯರು ಈ ರೀತಿಯಾಗಿ ಅಪಭ್ರಂಶಮಾಡಿ ತಮ್ಮ ಮಾತುಕತೆಗೆ ಸೇರಿಸಿಕೊಂಡಿದ್ದರು. ಅವರಿದಿರಿಗೆ 'ಮತಾಧಿಕಾರ' ವೆಂದು ಹೇಳಿದ್ದರೆ ಅವರಿಗೆ ಏನೂ ಅರ್ಥವಾಗುತ್ತಿರಲಿಲ್ಲ.] ಸಮಸ್ಯೆಯ ಮೂಲವನ್ನು ಹೇಳುತ್ತೇನೆ. ಇದರ ವಿಷಯವೊಂದೂ ನಮಗೆ ತಿಳಿದಿರಲಿಲ್ಲ.. ನಮ್ಮ ಅತ್ಯುತ್ತಮ ವಕೀಲರಲ್ಲಿ ಒಬ್ಬರಾದ ಮಿ. ಎಸ್ಕೊಂಬರು ನಮಗೆ ಈ ವಿಷಯವನ್ನು ಹಚ್ಚಿಕೊಟ್ಟರು. ಅದು ನಡೆದುದು ಹೀಗೆ: ಅವರು ಸೋತು ಸುಮ್ಮನಿರುವ ಮನುಷ್ಯರಲ್ಲ. ಅವರಿಗೂ ಇಲ್ಲಿನ ಬಂದರಿನ ಎಂಜಿನಿಯರಿಗೂ ಅಂತಹ ಹಿತವೇನೂ ಇರಲಿಲ್ಲ. ಆ ಎಂಜನಿಯರು ತಮ್ಮ ವೋಟುಗಳನ್ನು ಕಿತ್ತುಕೊಂಡು ತಮ್ಮನ್ನು ಚುನಾವಣೆಯಲ್ಲಿ ಸೋಲಿಸಬಹುದೆಂದು ಹೆದರಿದರು. ಆಗ ಅವರು ನಮಗೆ ನಮ್ಮ ನಿಜವಾದ ಸ್ಥಿತಿಯನ್ನು ತೋರಿಸಿಕೊಟ್ಟರು. ಅವರ ಸೂಚನೆಯ ಪ್ರಕಾರ ನಾವು ನಮ್ಮ ಹೆಸರುಗಳನ್ನೆಲ್ಲಾ ಮತಾಧಿಕಾರಸೂಚಿಯಮೇಲೆ ಬರೆಸಿದೆವು. ಮತ್ತು ನಮ್ಮೆಲ್ಲರ ವೋಟುಗಳನ್ನು ಅವರಿಗೇ ಕೊಟ್ಟೆವು. ಇದರಿಂದ ಈ ಮತಾಧಿಕಾರವು ನಮಗೆ ನಿಮ್ಮ ಅಭಿಪ್ರಾಯದಲ್ಲಿರುವಷ್ಟು ಬೆಲೆಯು ಳ್ಳದಾಗಿ ಏಕೆ ಇಲ್ಲವೆಂದು ನಿಮಗೇ ತಿಳಿಯುತ್ತದೆ. ಆದರೂ ನೀವು ಹೇಳುವುದು ನಮಗೆ ಗೊತ್ತಾಗುತ್ತದೆ. ಒಳ್ಳೆಯದು, ಈಗ ನೀವೇನು ಹೇಳುತ್ತೀರಿ?''

ಅಲ್ಲಿದ್ದ ಮಿಕ್ಕ ಅತಿಥಿಗಳು ಈ ಮಾತನ್ನೆಲ್ಲಾ ಗಮನಿಸಿ ಕೇಳುತ್ತಿದ್ದರು. ''ಈಗ ಮಾಡಬೇಕಾದುದೇನೆಂದು ಹೇಳಲೇನು? ನೀವು ಈ ಜಹಜಿನಲ್ಲಿ ಹೋಗದೆ ಇನ್ನೊಂದು ತಿಂಗಳು ಇಲ್ಲೇ ಇರಿ. ನೀವು ಹೇಳಿದ ಪ್ರಕಾರ ನಾವು ಹೋರಾಡುತ್ತೇವೆ.'' ಎಂದರೊಬ್ಬರು.

ಉಳಿದವರೆಲ್ಲರೂ "ಹೌದು, ಇದೇ ಸರಿ. (ಸೇಠರಕಡೆಗೆ ತಿರುಗಿ) ಅಬ್ದುಲ್ಲಾ ಸೇಠರೆ, ನೀವು ಗಾಂಧೀ ಭಾಯಿಯನ್ನು ನಿಲ್ಲಿಸಬೇಕು." ಎಂದು ಹೇಳಿದರು.

ಅಬ್ದುಲ್ಲಾ ಸೇಠರು ಬಹಳ ಚತುರರು. ಅವರು, "ಅವರನ್ನು ಇನ್ನು ನಿಲ್ಲಿಸಲು ನನಗೆ ಅಧಿಕಾರವಿಲ್ಲ. ಅಥವಾ ನನಗೆಷ್ಟುಂಟೋ ನಿಮಗೂ ಅಷ್ಟೇ ಅಧಿಕಾರವಿದೆ. ಆದರೆ ನೀವು ಹೇಳುವುದು ಸರಿಯೆ. ನಾವೆಲ್ಲರೂ ಸೇರಿ ಇವರನ್ನು ನಿಲ್ಲಿಸುವುದಕ್ಕೆ ಒಪ್ಪಿಸೋಣ. ಆದರೆ ಇವರು ವಕೀಲರು. ಇವರ ರುಸುಮು ?"

ರುಸುಮಿನ ಮಾತನ್ನು ಕೇಳಿ ನನಗೆ ದುಃಖವಾಯಿತು. ನಾನು ಒಡನೆಯೇ "ಅಬ್ದುಲ್ಲಾ ಸೇಠರೆ, ಇದರಲ್ಲಿ ರುಸುಮಿನ ಮಾತಿಗೆ ಅವಕಾಶವಿಲ್ಲ. ಸಾರ್ವಜನಿಕ ಸೇವೆಗೆ ರುಸುಮೆಲ್ಲಿಯದು ? ನಾನು ನಿಂತರೆ ಒಬ್ಬ ಸೇವಕನಾಗಿ ಮಾತ್ರ ನಿಲ್ಲಬಲ್ಲೆನು. ನಿಮಗೆ ತಿಳಿದಂತೆಯೇ ಈ ಮಿತ್ರರೆಲ್ಲರೂ ನನಗೆ ಚೆನ್ನಾಗಿ ಗೊತ್ತಿಲ್ಲ. ಆದರೆ ಅವರೆಲ್ಲರೂ ಒಟ್ಟಿಗೆ ಸೇರಿ ಶ್ರಮಪಡುವರೆಂಬ ನಂಬಿಕೆಯು ನಿಮಗಿರುವುದಾದರೆ ನಾನು ಇನ್ನೊಂದು ತಿಂಗಳು ಇಲ್ಲಿ ನಿಲ್ಲಲು ಸಿದ್ಧನಾಗಿದ್ದೇನೆ. ಆದರೆ ಒಂದು ವಿಷಯವಿದೆ. ನನಗೆ ಏನನ್ನೂ ಕೊಡಬೇಕಾದುದಿಲ್ಲವೆನ್ನುವುದೇನೋ ನಿಜ. ಆದರೆ ಇಂತಹ ಕೆಲಸಕ್ಕೆ ಸ್ವಲ್ಪವೂ ಹಣವಿಲ್ಲದೆ ಕೈಹಾಕಲಾಗುವುದಿಲ್ಲ. ಎಲ್ಲಿಗಾದರೂ ತಾರು ಕಳುಹಿಸಬೇಕಾಗಬಹುದು ; ಏನನ್ನಾದರೂ ಮುದ್ರಿಸಬೇಕಾಗಬಹುದು ; ಎಲ್ಲಿಗಾದರೂ ಹೋಗಿ ಬರಬೇಕಾಗಬಹುದು ; ಇಲ್ಲಿಯ ವಕೀಲರ ಸಲಹೆಯನ್ನು ಪಡೆಯಬೇಕಾಗಬಹುದು ; ನನಗೆ ನಿಮ್ಮ ಕಾನೂನುಗಳು ಗೊತ್ತಿಲ್ಲವಾದುದರಿಂದ ಕಾನೂನಿನ ಪುಸ್ತಕಗಳನ್ನು ನೋಡಬೇಕಾಗಬಹುದು. ಇದೆಲ್ಲವನ್ನೂ ದುಡ್ಡಿಲ್ಲದೆ ಮಾಡುವುದಕ್ಕಾಗುವುದಿಲ್ಲ. ಅದೂ ಅಲ್ಲದೆ ಇವೆಲ್ಲವೂ ಒಬ್ಬನಿಗೆ ಸಾಧ್ಯವಿಲ್ಲ. ಇಂತಹ ಕೆಲಸಗಳಿಗೆ ಅನೇಕರ ಸಹಾಯಬೇಕು." ಎಂದು ಹೇಳಿದೆನು.

ಇದನ್ನು ಕೇಳಿ ಅನೇಕರು ಒಟ್ಟಿಗೆ, "ದೇವರು ದೊಡ್ಡವನು, ಕರುಣಾಮಯನು. ಹಣವು ಒದಗೇ ಒದಗುತ್ತದೆ. ನಿಮಗೆ ಬೇಕಾ

ದಷ್ಟು ಜನರೂ ಸಿಕ್ಕುತ್ತಾರೆ. ನೀವು ಇಲ್ಲಿರುವುದಕ್ಕೆ ಮಾತ್ರ ಒಪ್ಪಿಕೊಳ್ಳಿ. ಎಲ್ಲಾ ಸರಿ ಹೋಗುತ್ತದೆ.'' ಎಂದರು.

ಹೀಗೆ ಔತಣಕ್ಕೆ ನೆರೆದಿದ್ದ ಗುಂಪು ಕಾರ್ಯಕಾರಿಣೀಸಮಿತಿಯ ರೂಪವನ್ನು ತಾಳಿತು. ನಾನು ಜಾಗ್ರತೆಯಾಗಿ ಊಟ ಉಪಚಾರವನ್ನು ಮುಗಿಸಿ ನಾವೆಲ್ಲರೂ ಮನೆಗೆ ತೆರಳಬೇಕೆಂದು ಸೂಚಿಸಿದೆನು. ನಾನು ಮನಸ್ಸಿನಲ್ಲಿಯೇ ಮುಂದಿನ ಕಾರ್ಯವು ನಡೆಯಬೇಕಾದ ರೀತಿಯನ್ನು ಚಿತ್ರಿಸಿಕೊಂಡೆನು. ಯಾರು ಯಾರು ಮತಾಧಿಕಾರವನ್ನು ಹೊಂದಿದ್ದಾರೆ ಎಂಬುದೇ ಮುಂತಾದ ವಿಷಯಗಳನ್ನು ವಿಚಾರಿಸಿ ತಿಳಿದುಕೊಂಡು ಒಂದು ತಿಂಗಳು ಇದ್ದು ಹೊರಡಬೇಕೆಂದು ನಿಶ್ಚಯಿಸಿದೆನು.

ಈ ಪ್ರಕಾರವಾಗಿ ದೇವರು ನಾನು ದಕ್ಷಿಣ ಆಫ್ರಿಕದಲ್ಲಿ ಬಹು ಕಾಲ ವಾಸಿಸುವುದರ ತಳಹದಿಯನ್ನು ಹಾಕಿದನು. ಮತ್ತು ಭಾರತೀಯರ ಆತ್ಮಗೌರವಕದನದ ಬೀಜವನ್ನು ನೆಟ್ಟನು.



## ೧೭

# ನೇಟಾಲಿನಲ್ಲಿ ನೆಲೆಸಿದುದು

೧೮೯೩ರಲ್ಲಿ ನೇಟಾಲಿನಲ್ಲಿದ್ದ ಭಾರತೀಯರಲ್ಲಿ ಸೇಠ್ ಹಾಜಿ ಮುಹಮುದ್ ಹಾಜೀ ದಾದಾರವರು ಅಗ್ರಗಣ್ಯರೆಂದು ಎಣಿಸಲ್ಪಡುತ್ತಿದ್ದರು. ಸಿರಿತನದ ದೃಷ್ಟಿಯಿಂದ ಸೇಠ್ ಅಬ್ದುಲ್ಲಾ ಹಾಜಿ ಆದಮ್‌ರವರು ಮೊದಲನೆಯವರಾಗಿದ್ದರೂ ಸಾರ್ವಜನಿಕ ಕಾರ್ಯಗಳಲ್ಲಿ ಸೇಠ್ ಹಾಜಿ ಮುಹಮುದರೇ ಅಗ್ರಸ್ಥಾನವನ್ನು ವಹಿಸುತ್ತಿದ್ದರು. ಆದುದರಿಂದ ಇವರ ಅಧ್ಯಕ್ಷತೆಯಲ್ಲಿ ಅಬ್ದುಲ್ಲಾಸೇಠರ ಮನೆಯಲ್ಲಿ ಒಂದು ಸಭೆಯು ನೆರೆದು ಮತಾಧಿಕಾರದ ಕಾನೂನನ್ನು ವಿರೋಧಿಸಬೇಕೆಂದು ನಿರ್ಧಾರವಾಯಿತು.

ಸ್ವಯಂಸೇವಕರನ್ನು ಕೂಡಿಸಿದೆವು. ನೇಟಾಲಿನಲ್ಲಿಯೇ ಹುಟ್ಟಿದ ಭಾರತೀಯರನ್ನು, ಎಂದರೆ ಮುಖ್ಯವಾಗಿ ಈಸಾಯಿ ಭಾರತೀಯ ಯುವಕರನ್ನು, ಸಭೆಗೆ ಕರೆದಿದ್ದೆವು. ಡರ್ಬನಿನ ನ್ಯಾಯಾಸ್ಥಾನದಲ್ಲಿ ದ್ವಿಭಾಷಿಗಳಾಗಿದ್ದ ಮಿ. ಪಾಲರೂ ಅಲ್ಲಿನ ಒಂದು ಮಿಷನ್ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಮಿ. ಸುಭಾನ್ ಗಾಡ್‌ಫ್ರೇಯವರೂ ಬಂದಿದ್ದರು. ಅನೇಕ ಜನ ಈಸಾಯಿ ಯುವಕರು ಈ ಸಭೆಗೆ ಬರಲು ಇವರೇ ಕಾರಣರಾಗಿದ್ದರು. ಇವರೆಲ್ಲರೂ ಸ್ವಯಂಸೇವಕರಾದರು.

ಅಲ್ಲಿನ ವರ್ತಕರಲ್ಲಂತೂ ಅನೇಕರು ಸೇರಿದರು. ಇವರಲ್ಲಿ ಮುಖ್ಯರಾದವರು ಯಾರೆಂದರೆ, ದಾವುದ್ ಮುಹಮುದ್ ಸೇಠ್, ಮುಹಮುದ್ ಕಾಸಿಮ್ ಕಮ್ರುದ್ದೀನ್ ಸೇಠ್, ಆದಮ್‌ಜಿ ಮಿಯಾಖಾನ್, ಎ. ಕೊಳಂದವೇಲು ಪಿಳ್ಳೆ, ಸಿ. ಲಚ್ಚೀರಾಮ್, ರಂಗಸಾಮಿ ಪಡಿಯಾಚಿ ಮತ್ತು ಆಮೂದ್ ಜೀವ. ಪಾರ್ಸಿ ರುಸ್ತುಮ್‌ಜೀಯವರಂತು ಇದ್ದೇ ಇದ್ದರು. ಗುಮಾಸ್ತರೊಳಗೆ ದಾದಾ ಅಬ್ದುಲ್ಲಾ ಮತ್ತು ಇತರ ದೊಡ್ಡ ಅಂಗಡಿಗಳಲ್ಲಿ ಕೆಲಸಮಾಡುತ್ತಿದ್ದ ಮಾಣಿಕ್‌ಜಿ, ಜೋಶೀ, ನರಸೀ

ರಾವ್ ಇವರೇ ಮುಂತಾದವರು ಸೇರಿದ್ದರು. ತಾವು ಸಾರ್ವಜನಿಕ ಕಾರ್ಯಗಳಲ್ಲಿ ಭಾಗಿಗಳಾದುದನ್ನು ಕಂಡು ಅವರೆಲ್ಲರಿಗೂ ಸಂತೋಷವೂ ಆಶ್ಚರ್ಯವೂ ಉಂಟಾಯಿತು. ತಮ್ಮನ್ನು ಹೀಗೆ ಕರೆದುದು ಅವರ ಜೀವನದಲ್ಲಿ ಒಂದು ಹೊಸ ಅನುಭವವಾಗಿದ್ದಿತು. ತಮ್ಮ ಸಂಗಡಕ್ಕೆ ಉಂಟಾದ ಆಪತ್ತಿನಲ್ಲಿ ಧನಿಕ–ಬಡವ, ಹಿರಿಯ–ಕಿರಿಯ, ಯಜಮಾನ–ಆಳು, ಹಿಂದೂ–ಮುಸಲ್ಮಾನ–ಪಾರಸಿ–ಈಸಾಯಿ, ಗುಜರಾತಿ–ಮದರಾಸಿ–ಸಿಂಧಿ, ಇವೇ ಮುಂತಾದ ಭೇದಗಳು ಮರೆತು ಹೋದುವು. ಎಲ್ಲರೂ ಒಂದೇಸಮನಾಗಿ ಭಾರತಮಾತೆಯ ಪುತ್ರರೆ, ತಾಯ್ನಾಡಿನ ಸೇವಕರೇ.

ಆ ಕಾನೂನಿನ ಎರಡನೆಯ ಚರ್ಚೆಯು(ಬ) ಮುಗಿದು ಅದಕ್ಕೆ ಸಮ್ಮತಿಯು ಕೊಡಲ್ಪಟ್ಟಿದ್ದಿತು, ಅಥವಾ ಚರ್ಚೆಯು ಮುಗಿಯುವುದರಲ್ಲಿದ್ದಿತು. ಆ ಕಠಿಣವಾದ ಕಾನೂನನ್ನು ಅಲ್ಲಿನ ಭಾರತೀಯರು ವಿರೋಧಿಸಿರಲಿಲ್ಲವಾದುದರಿಂದ ಅವರಿಗೆ ಮತಾಧಿಕಾರಕ್ಕೆ ತಕ್ಕ ಯೋಗ್ಯತೆಯಿಲ್ಲವೆಂದು ಆಗ ಧಾರಾಸಭೆಯಲ್ಲಿ ಮಾಡಿದ ಭಾಷಣಗಳಲ್ಲಿ ವಾದಿಸಿದ್ದರು.

ಇವೆಲ್ಲದರಿಂದುಂಟಾದ ಪರಿಸ್ಥಿತಿಯನ್ನು ನಾನು ಅಲ್ಲಿ ಸೇರಿದ್ದವರಿಗೆ ವಿವರಿಸಿದೆನು. ಈ ಕಾನೂನಿನ ಚರ್ಚೆಯನ್ನು ಮುಂದಕ್ಕೆ ಇಡಬೇಕೆಂದು ಧಾರಾಸಭೆಯ ಅಧ್ಯಕ್ಷರಿಗೆ ತಂತಿ ಕಳುಹಿಸಿದುದೇ ನಾವು ಮಾಡಿದ ಮೊದಲನೆಯ ಕೆಲಸ. ಹೀಗೆಯೇ ಪ್ರಧಾನ ಮಂತ್ರಿಗಳಾದ ಸರ್ ಜಾನ್ ರಾಬಿನ್‌ಸನರಿಗೂ ಮತ್ತು ದಾದಾ ಅಬ್ದುಲ್ಲಾರವರ ಮಿತ್ರರೆಂಬ ದೃಷ್ಟಿಯಿಂದ ಮಿ. ಎಸ್ಕೊಂಬರಿಗೂ ತಂತಿಯನ್ನು ಕಳುಹಿಸಿದೆವು. ಧಾರಾಸಭೆಯ ಅಧ್ಯಕ್ಷರು ಕಾನೂನಿನ ಚರ್ಚೆಯನ್ನು ಎರಡು ದಿವಸ ಮುಂದಕ್ಕಿಟ್ಟಿದೆಯೆಂದು ಒಡನೆಯೇ ಉತ್ತರ ಕೊಟ್ಟರು. ಇದರಿಂದ ನಮಗೆ ಸಂತೋಷವಾಯಿತು.

ಧಾರಾಸಭೆಯ ಮುಂದಿಡುವುದಕ್ಕಾಗಿ ಅರ್ಜಿಯು ಸಿದ್ಧವಾಯಿತು. ಮೂರು ನಕಲುಗಳನ್ನು ಸಿದ್ಧಪಡಿಸಬೇಕಾಗಿದ್ದಿತು. ಇದಲ್ಲದೆ ವೃತ್ತಪತ್ರಿಕೆ

ಗಳಲ್ಲಿ ಪ್ರಚುರಪಡಿಸುವುದಕ್ಕಾಗಿ ಇನ್ನೊಂದು ಪ್ರತಿ ಬೇಕಾಗಿದ್ದಿತು. ಸಾಧ್ಯವಾದಷ್ಟು ಜನಗಳ ಕೈಯಲ್ಲಿ ರುಜು ಹಾಕಿಸಬೇಕೆಂದು ಗೊತ್ತಾಯಿತು. ಈ ಕೆಲಸವೆಲ್ಲಾ ಒಂದೇ ರಾತ್ರಿಯಲ್ಲಿ ನಡೆಯತಕ್ಕದಾಗಿದ್ದಿತು. ಇನ್ನೂ ಇಂಗ್ಲಿಷ್ ಭಾಷೆಯ ಅನುಭವವುಳ್ಳ ಸ್ವಯಂಸೇವಕರು ಮತ್ತು ಕೆಲವರು ಈ ಕೆಲಸಕ್ಕಾಗಿ ರಾತ್ರಿಯೆಲ್ಲಾ ಎದ್ದಿದ್ದರು. ಮುದ್ದಾದ ಅಕ್ಷರಗಳನ್ನು ಬರೆಯುತ್ತಿದ್ದ ಎಂ. ಆರ್ಥರ್ ಎಂಬ ಮುದುಕರು ಮುಖ್ಯಪ್ರತಿಯನ್ನು ಬರೆದರು. ಉಳಿದ ಪ್ರತಿಗಳನ್ನು ಒಬ್ಬರು ಹೇಳುತ್ತಿದ್ದ ಹಾಗೆಯೇ ಇತರರು ಬರೆದರು. ಈ ರೀತಿಯಾಗಿ ಐದು ಪ್ರತಿಗಳು ಒಟ್ಟಿಗೇ ಸಿದ್ಧವಾದುವು. ಸ್ವಯಂಸೇವಕರಾದ ವರ್ತಕರು ಅರ್ಜಿಗೆ ರುಜು ಹಾಕಿಸುವುದಕ್ಕೋಸ್ಕರ ತಮ್ಮ ಸ್ವಂತ ಗಾಡಿಗಳಲ್ಲಿ ಅಥವಾ ಸ್ವಂತ ಖರ್ಚಿನಿಂದ ಬಾಡಿಗೆಗೆ ಗೊತ್ತುಮಾಡಿದ ಗಾಡಿಗಳಲ್ಲಿ ಹೊರಟರು. ಈ ಕೆಲಸವನ್ನು ಜಾಗ್ರತೆಯಾಗಿ ಮುಗಿಸಿ ಅರ್ಜಿಯನ್ನು ಕಳುಹಿಸಿದೆವು. ನಮಗೆ ಅನುಕೂಲವಾದ ಟಿಪ್ಪಣಿಗಳೊಡನೆ ಇದನ್ನು ವೃತ್ತಪತ್ರಿಕೆಗಳು ಪ್ರಸಿದ್ಧಪಡಿಸಿದುವು. ಧಾರಾ ಸಭೆಯ ಮೇಲೆಯೂ ಇದರ ಪರಿಣಾಮವುಂಟಾಯಿತು. ಅಲ್ಲಿ ಇದನ್ನು ಚರ್ಚಿಸಿದರು. ಕಾನೂನಿನ ಪಕ್ಷದವರು ಅರ್ಜಿಯಲ್ಲಿ ಕಾನೂನಿಗೆ ವಿರೋಧವಾಗಿ ತೋರಿಸಿದ್ದ ಕಾರಣಗಳಿಗೆ ಏನೋ ಸಮಾಧಾನವನ್ನು ಹೇಳಿದರು. ಅದು ಕಂಡಹಾಗೆಯೇ ಆಧಾರವಿಲ್ಲದುದಾಗಿದ್ದಿತು. ಆದರೂ ಕಾನೂನು ಧಾರಾ ಸಭೆಯಲ್ಲಿ ಅನುಮೋದಿಸಲ್ಪಟ್ಟಿತು.

ಹೀಗೆ ಪರಿಣಮಿಸುವುದೆಂದು ನಮಗೆ ಮುಂಚೆಯೇ ತಿಳಿದಿದ್ದಿತು. ಆದರೆ ಈ ಚಳವಳಿಯು ಅಲ್ಲಿನ ಭಾರತೀಯರಲ್ಲಿ ಒಂದು ಹೊಸ ಚೈತನ್ಯವನ್ನುಂಟುಮಾಡಿದ್ದಿತಲ್ಲದೆ ತಾವೆಲ್ಲರೂ ಒಂದು ಪಂಗಡಕ್ಕೆ ಸೇರಿದವರೆಂದೂ ತಮ್ಮಲ್ಲಿ ಯಾರೂ ಪಂಗಡಕ್ಕೆ ಹೊರಗಿನವರಾಗಿ ಇರಲು ಅಸಾಧ್ಯವೆಂದೂ ವ್ಯಾಪಾರಕ್ಕೆ ಸಂಬಂಧಪಟ್ಟ ಹಕ್ಕುಗಳಿಗಾಗಿ ಹೊಡೆದಾಡುವುದು ಹೇಗೆ ತಮ್ಮ ಕರ್ತವ್ಯವೋ ಹಾಗೆಯೇ ತಮ್ಮ ರಾಜಕೀಯ ಹಕ್ಕುಗಳಿಗಾಗಿ ಹೊಡೆದಾಡುವುದೂ ತಮ್ಮ ಧರ್ಮವೆಂದೂ ಅವರು ಮನಗಾಣುವಂತೆ ಮಾಡಿತು.

ಈ ಸಮಯದಲ್ಲಿ ಲಾರ್ಡ್ ರಿಪನರು ಬ್ರಿಟಿಷ್ ಸಾಮ್ರಾಜ್ಯ (ಕಾಲೊನಿ) ಗಳ ಮೇಲ್ವಿಚಾರವನ್ನು ನೋಡಿಕೊಳ್ಳುವ ಸಚಿವರಾಗಿದ್ದರು. ಸಾವಿರಾರು ಜನರು ಸಹಿಮಾಡಿದ ಒಂದು ದೊಡ್ಡ ಅರ್ಜಿಯನ್ನು ಅವರ ಮುಂದೆ ಇಡಬೇಕೆಂದು ನಿರ್ಧಾರವಾಯಿತು. ಇದೇನೂ ಸಾಧಾರಣವಾದ ಕೆಲಸವಾಗಿರಲಿಲ್ಲ, ಒಂದುದಿನದಲ್ಲಿ ಮುಗಿಯುವಂತಹದಾಗಿರಲಿಲ್ಲ. ಇದಕ್ಕಾಗಿ ಸ್ವಯಂಸೇವಕರನ್ನು ಕೂಡಿಸಿದೆವು. ಅವರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಪೂರ್ತಿಯಾಗಿ ಮಾಡಿದರು.

ನಾನು ಈ ಅರ್ಜಿಯನ್ನು ಸಿದ್ಧಪಡಿಸುವುದಕ್ಕಾಗಿ ಬಹಳ ಶ್ರಮವನ್ನು ವಹಿಸಿದೆನು. ಇದರ ಸಂಬಂಧವಾಗಿ ದೊರೆತ ವಿಷಯವನ್ನೆಲ್ಲಾ ಓದಿದೆನು. ಮತಾಧಿಕಾರವನ್ನು ನಮಗೆ ಕೊಡುವುದು ನ್ಯಾಯಸಮ್ಮತ ಮತ್ತು ಯುಕ್ತ ಎಂಬ ಎರಡು ಆಧಾರಗಳಮೇಲೆ ವಾದಿಸಿದೆನು. ಹಿಂದೂಸ್ಥಾನದಲ್ಲಿ ನಮಗೆ ಒಂದು ವಿಧವಾದ ಮತಾಧಿಕಾರವಿರುವುದರಿಂದ ಇಲ್ಲಿಯೂ ನಮಗೆ ಅದಕ್ಕೆ ಹಕ್ಕುಂಟೆಂದೂ ಮತಾಧಿಕಾರವನ್ನು ಉಪಯೋಗಿಸಬಲ್ಲ ಇಲ್ಲಿನ ಭಾರತೀಯರ ಸಂಖ್ಯೆಯು ಕಡಿಮೆಯಾಗಿದ್ದುದರಿಂದ ಅವರ ಮತಾಧಿಕಾರವನ್ನು ಕಿತ್ತುಕೊಳ್ಳದಿರುವುದು ವಿಹಿತವೆಂದೂ ಪ್ರತಿಪಾದಿಸಿದೆನು.

ಎರಡುವಾರಗಳೊಳಗಾಗಿ ಹತ್ತುಸಾವಿರಜನರ ಕೈಯಲ್ಲಿ ಅರ್ಜಿಗೆ ರುಜುಹಾಕಿಸಿದುದಾಯಿತು. ದೇಶದೊಳಗಿಂದಲೆಲ್ಲಾ ಇಷ್ಟೊಂದು ಜನರ ಸಹಿಗಳನ್ನು ಕೂಡಿಸಿದುದು—ಅದರಲ್ಲೂ ಸ್ವಯಂಸೇವಕರಿಗೆ ಈವಿಧದ ಕೆಲಸದ ಅನುಭವವಿರಲೇ ಇಲ್ಲವೆನ್ನುವುದನ್ನು ಗಣನೆಗೆ ತಂದುಕೊಂಡರೆ—ಸುಲಭದ ಮಾತಾಗಿರಲಿಲ್ಲ. ಅರ್ಜಿಯ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳದೆ ಇದ್ದ ಯಾರ ರುಜುವನ್ನೂ ಹಾಕಿಸಕೂಡದೆಂದು ನಿಶ್ಚಯಿಸಿದ್ದುದರಿಂದ ವಿಶೇಷ ಯೋಗ್ಯತೆಯುಳ್ಳ ಸ್ವಯಂಸೇವಕರನ್ನು ಆರಿಸಬೇಕಾಗಿದ್ದಿತು. ಹಳ್ಳಿಗಳು ದೂರದೂರವಾಗಿದ್ದುವು. ಅನೇಕಜನ ಸ್ವಯಂಸೇವಕರು ಮನಃಪೂರ್ವಕವಾಗಿ ಕೆಲಸಮಾಡಿದರೆ ಇದು ಹೊತ್ತಿಗೆ ಸರಿಯಾಗಿ ಮುಗಿಯುವಹಾಗಿದ್ದಿತು. ಅವರೂ ಇದಕ್ಕೆ ಬೇಕಾದ ಶ್ರದ್ಧೆ

ಯನ್ನು ವಹಿಸಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳನ್ನು ಉತ್ಸಾಹದಿಂದ ಪೂರ್ತಿಗೊಳಿಸಿದರು. ಆದರೆ ಈ ವಾಕ್ಯಗಳನ್ನು ಬರೆಯು ತ್ತಿರುವಹಾಗೆ ಸೇಠ್ ದಾವುದ್ ಮಹಮ್ಮದ್, ರುಸ್ತುಮ್‌ಜೀ, ಆದಮ್‌ಜಿ ಮಿಯಾಖಾನ್ ಮತ್ತು ಆಮೋದ್ ಜೀವಾ ಇವರು ನನ್ನ ನೆನಪಿಗೆ ಬರುತ್ತಾರೆ. ಇವರೇ ರುಜುಗಳಲ್ಲಿ ಹೆಚ್ಚಿನ ಭಾಗವನ್ನು ಕೂಡಿಸಿದವರು. ದಾವುದ್ ಸೇಠರು ದಿನವೆಲ್ಲಾ ತಮ್ಮ ಗಾಡಿಯಲ್ಲಿ ತಿರುಗುತ್ತಲೇ ಇದ್ದರು. ಇದೆಲ್ಲವೂ ಕೇವಲ ಪ್ರೀತಿಯಿಂದ ಮಾಡಿದ ಕೆಲಸವಾಗಿದ್ದಿತು. ಅವರಲ್ಲಿ ಒಬ್ಬರೂ ಮೇಲಿನ ಖರ್ಚನ್ನು ಕೂಡ ಕೇಳಲಿಲ್ಲ. ದಾದಾ ಅಬ್ದುಲ್ಲರ ಮನೆಯೇ ಹೋಗಿಬರುವವರು ಇಳಿಯುವ ಛತ್ರವೂ ಈ ಚಳವಳಿಯ ಕಚೇರಿಯೂ ಆಯಿತು. ನನಗೆ ಸಹಾಯ ಮಾಡುತ್ತಿದ್ದ ವಿದ್ಯಾವಂತರಾದ ಮಿತ್ರರೂ ಇನ್ನೂ ಅನೇಕರೂ ಅಲ್ಲಿಯೇ ಊಟಮಾಡುತ್ತಿದ್ದರು. ಹೀಗೆ ಈ ಕೆಲಸದಲ್ಲಿ ಸಹಾಯಮಾಡಿದ ಪ್ರತಿಯೊಬ್ಬರಿಗೂ ಹೆಚ್ಚು ವೆಚ್ಚ ವಾಯಿತು.

ಕಡೆಗೆ ಅರ್ಜಿಯನ್ನು ಒಪ್ಪಿಸಿದೆವು. ಹಂಚಿಕೆಗಾಗಿಯೂ ಪ್ರಸಿದ್ಧ ಪಡಿಸುವುದಕ್ಕಾಗಿಯೂ ಒಂದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿದ್ದೆವು. ಹಿಂದೂದೇಶದ ಜನರಿಗೆ ನೇಟಾಲಿನ ಪರಿಸ್ಥಿತಿಯು ಇದರಿಂದ ಮೊಟ್ಟಮೊದಲು ಗೊತ್ತಾಯಿತು. ನಾನು ಈ ಅರ್ಜಿಯ ಪ್ರತಿಗಳನ್ನು ನನಗೆ ತಿಳಿದ ಎಲ್ಲಾ ವೃತ್ತಪತ್ರಿಕೆಗಳಿಗೂ ಪ್ರಚಾರಕರಿಗೂ ಕಳುಹಿಸಿದೆನು.

ಈ ವಿಷಯವಾಗಿ ಬರೆದ ಒಂದು ಪ್ರಧಾನ ಲೇಖನದಲ್ಲಿ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯು ಭಾರತೀಯರ ಹಕ್ಕುಗಳಿಗೆ ಬೆಂಬಲ ಕೊಟ್ಟು ಬರೆಯಿತು. ಇಂಗ್ಲೆಂಡಿನಲ್ಲಿನ ಬೇರೆಬೇರೆ ರಾಜಕೀಯ ಪಕ್ಷಗಳಿಗೆ ಸೇರಿದ ವೃತ್ತಪತ್ರಿಕೆಗಳಿಗೂ ಪ್ರಚಾರಕರಿಗೂ ಪ್ರತಿಗಳನ್ನು ಕಳುಹಿಸಿಕೊಟ್ಟೆವು. ಲಂಡನಿನ 'ಟೈಮ್ಸ್' ಪತ್ರಿಕೆಯು ನಮಗೆ ಅನುಕೂಲವಾಗಿ ಬರೆಯಿತು. ಕಾನೂನು ರದ್ದಾಗಬಹುದೆಂಬ ಆಸೆಯು ನಮ್ಮಲ್ಲಿ ಅಂಕುರಿಸಿತು.

ಈಗ ನಾನು ನೇಟಾಲನ್ನು ಬಿಟ್ಟು ಹೋಗುವುದು ಅಸಾಧ್ಯವಾಯಿತು. ನನ್ನ ಭಾರತೀಯ ಮಿತ್ರರು ನನ್ನ ಸುತ್ತಲೂ ಮುತ್ತಿಕೊಂಡು ನಾನು ಅಲ್ಲಿಯೇ ನೆಲೆಸಬೇಕೆಂದು ಒತ್ತಾಯಮಾಡಿದರು. ನಾನು ನನ್ನ ತೊಂದರೆಗಳನ್ನು ತಿಳಿಸಿದೆನು. ಇತರರು ಒಟ್ಟುಗೂಡಿಸಿ ಕೊಟ್ಟ ಹಣ ದಿಂದ ಜೀವನ ಮಾಡುವುದಿಲ್ಲವೆಂದು ನಾನು ಮನಸ್ಸು ಮಾಡಿದ್ದೆನು. ನಾನೇ ಒಂದು ಸಂಸಾರವನ್ನು ಹೂಡಬೇಕೆನ್ನುವುದು ನನಗೆ ಆವಶ್ಯಕ ವಾಗಿ ತೋರಿತು. ಮನೆಯು ಚೆನ್ನಾಗಿರಬೇಕೆಂದೂ ಒಳ್ಳೆಯ ಸ್ಥಳ ದಲ್ಲಿರಬೇಕೆಂದೂ ಇಷ್ಟಪಡುತ್ತಿದ್ದೆನು. ಅದೂ ಅಲ್ಲದೆ ಆಗ ನಾನು ನಮ್ಮ ಜನಕ್ಕೆ ಮರ್ಯಾದೆಯನ್ನು ತರಬೇಕಾದರೆ ಬ್ಯಾರಿಸ್ಟರಿಗೆ ತಕ್ಕ ರೀತಿಯಲ್ಲೇ ಜೀವನ ನಡೆಸಬೇಕೆಂಬ ಅಭಿಪ್ರಾಯವುಳ್ಳವನಾಗಿದ್ದೆನು. ವರ್ಷಕ್ಕೆ ಮುನ್ನೂರು ಪೌಂಡು (೪೫೦೦ ರೂಪಾಯಿ) ಗೆ ಕಡಿಮೆ ಯಾಗಿ ಹೀಗೆ ಸಂಸಾರ ನಡೆಸುವುದು ಅಸಾಧ್ಯವೆಂದು ನನಗೆ ತೋರಿತು. ಆದುದರಿಂದ ಅಲ್ಲಿನ ನಮ್ಮ ಜನರು ನನಗೆ ಕಟ್ಟಕಡೆಗೆ ಅಷ್ಟು ವರಮಾನವು ಬರುವಷ್ಟು ವಕೀಲಿ ಕೆಲಸವನ್ನು ಕೊಡಲು ಭರವಸೆ ಕೊಟ್ಟರೆ ಮಾತ್ರ ನಾನು ಅಲ್ಲಿ ನಿಲ್ಲಲಾಗುವುದೆಂದು ನಿರ್ಧರಿಸಿ ಈ ನಿಶ್ಚಯವನ್ನು ಅವರಿಗೆ ತಿಳಿಸಿದೆನು.

ಅದಕ್ಕೆ ಅವರು "ನೀವು ಈ ಹಣವನ್ನು ಸಾರ್ವಜನಿಕ ಕಾರ್ಯಕ್ಕಾಗಿ ತೆಗೆದುಕೊಂಡರೆ ನಮಗೆ ಸಂತೋಷ. ನಾವು ಅದನ್ನು ಸುಲಭವಾಗಿ ಸೇರಿಸಬಲ್ಲೆವು. ನಿಮ್ಮ ವಕೀಲಿ ಕೆಲಸಕ್ಕಾಗಿ ತೆಗೆದುಕೊಳ್ಳುವ ರುಸುಮು ಬೇರೆ." ಎಂದರು.

"ನಾನು ಹಾಗೆ ಸಾರ್ವಜನಿಕ ಕಾರ್ಯಕ್ಕಾಗಿ ನಿಮ್ಮಿಂದ ಹಣ ವನ್ನು ತೆಗೆದುಕೊಳ್ಳಲಾಗುವುದಿಲ್ಲ. ಈ ಕೆಲಸದಲ್ಲಿ ನಾನು ಬ್ಯಾರಿಸ್ಟ ರಾಗಿ ಹೆಚ್ಚು ಬುದ್ಧಿವಂತಿಕೆಯನ್ನೇನೂ ಉಪಯೋಗಿಸಬೇಕಾಗುವುದಿಲ್ಲ. ನಿಮ್ಮ ಕೈಯಲ್ಲಿ ಕೆಲಸಮಾಡಿಸುವುದೇ ನನ್ನ ಮುಖ್ಯ ಕೆಲಸ. ಇದಕ್ಕೆ ನಾನು ಸಂಬಳವನ್ನು ಹೇಗೆ ತೆಗೆದುಕೊಳ್ಳಲಿ? ಇದರ ಜೊತೆಗೆ ನಾನು ಆಗಾಗ ಈ ಕೆಲಸಕ್ಕಾಗಿ ನಿಮ್ಮಿಂದ ಹಣವನ್ನು ಬೇಡಬೇಕಾಗುತ್ತದೆ. ನಾನು ಸಂಬಳ ತೆಗೆದುಕೊಂಡರೆ ನಿಮ್ಮಿಂದ ಹೆಚ್ಚು ಚಂದಾ ಹಣವನ್ನು

ನಿಸ್ಸಂಕೋಚವಾಗಿ ಕೇಳುವುದಕ್ಕಾಗುವುದಿಲ್ಲ. ಕಡೆಗೆ ಕೆಲಸವು ನಿಂತು ಹೋಗುತ್ತದೆ. ಇದೂ ಅಲ್ಲದೆ ನಮ್ಮ ಜನರು ಸಾರ್ವಜನಿಕ ಕಾರ್ಯಕ್ಕಾಗಿ ಮುನ್ನೂರು ಪೌಂಡಿಗಿಂತ ಹೆಚ್ಚಾಗಿ ಹಣವನ್ನು ಕೂಡಿಸಬೇಕೆಂದು ನಾನು ಇಷ್ಟಪಡುತ್ತೇನೆ." ಎಂದೆನು.

"ಆದರೆ ನಾವು ಕೆಲವು ದಿನದಿಂದ ನಿಮ್ಮ ಸ್ವಭಾವವನ್ನು ಅರಿತಿದ್ದೇವೆ. ನಿಮಗೆ ಆವಶ್ಯಕವಾದುದಕ್ಕಿಂತ ಹೆಚ್ಚಾಗಿ ನೀವೇನನ್ನೂ ತೆಗೆದುಕೊಳ್ಳುವುದಿಲ್ಲವೆಂದು ನಮಗೆ ಚೆನ್ನಾಗಿ ಗೊತ್ತು. ಮತ್ತು ನಿಮ್ಮನ್ನು ನಾವು ಇಲ್ಲಿ ನಿಲ್ಲಿಸಿಕೊಂಡರೆ ನಾವೇ ನಿಮ್ಮ ವೆಚ್ಚವನ್ನು ವಹಿಸುವುದು ನ್ಯಾಯವಲ್ಲವೇ ?"

"ನೀವು ಈಗ ಮಾತನಾಡುವುದಕ್ಕೆ ನಿಮ್ಮ ಪ್ರೇಮ ಮತ್ತು ನಿಮ್ಮ ಈಗಿನ ಉತ್ಸಾಹ ಇವೇ ಕಾರಣ. ಈ ಪ್ರೇಮವೂ ಈ ಉತ್ಸಾಹವೂ ಸದಾ ಇರುವುವೆಂದು ನಮಗೆ ಹೇಗೆ ಗೊತ್ತು? ನಿಮ್ಮ ಮಿತ್ರನಾಗಿ ಸೇವಕನಾಗಿ ನಾನು ನಿಮಗೆ ಆಗಾಗ ಕಠಿಣವಾದ ಮಾತುಗಳನ್ನು ಹೇಳಬೇಕಾಗಿಬರಬಹುದು. ಆಗಲೂ ನಾನು ನಿಮ್ಮ ಪ್ರೇಮಕ್ಕೆ ಪಾತ್ರನಾಗಿರುತ್ತೇನೋ ಇಲ್ಲವೋ ಎನ್ನುವುದು ದೇವರಿಗೇ ಗೊತ್ತು. ಆದರೆ ಇದೆಲ್ಲಕ್ಕಿಂತ ಮುಖ್ಯವಾದುದೇನೆಂದರೆ ನಾನು ಸಾರ್ವಜನಿಕ ಕಾರ್ಯಕ್ಕಾಗಿ ಸಂಬಳ ತೆಗೆದುಕೊಳ್ಳಕೂಡದು. ನೀವೆಲ್ಲರೂ ನಿಮ್ಮ ಕೋರ್ಟಿನ ಕೆಲಸವನ್ನು ನನಗೆ ಕೊಡುವುದಕ್ಕೆ ಒಪ್ಪಿಕೊಂಡರೆ ಸಾಕು. ಅದು ಕೂಡ ನಿಮಗೆ ಕಷ್ಟವಾಗಿ ಪರಿಣಮಿಸಬಹುದು. ಮೊಟ್ಟಮೊದಲು ನಾನು ಬಿಳಿಯಬಣ್ಣದ ವಕೀಲನಲ್ಲ. ಆದುದರಿಂದ ಕೋರ್ಟಿನವರು ನನ್ನನ್ನು ಸರಿಯಾಗಿ ಕಾಣುತ್ತಾರೆಂದು ಖಂಡಿತವಾಗಿ ಹೇಳುವುದು ಹೇಗೆ? ಮತ್ತು ವಕೀಲಿ ಕೆಲಸವನ್ನು ಮಾಡುವುದರಲ್ಲಿ ನಾನು ಇಷ್ಟರ ಮಟ್ಟಿನ ಯೋಗ್ಯತೆಯನ್ನು ತೋರಿಸುತ್ತೇನೆಂದು ಹೇಳಲಾಗುತ್ತದೆಯೆ? ಹೀಗಿರುವುದರಿಂದ ನನಗೆ ಕೋರ್ಟಿನ ಕಲಸ ಕೊಡುತ್ತೇವೆಂದು ನೀವು ಮಾತುಕೊಡುವುದೂ ಧೈರ್ಯದ ವಿಷಯವೇ? ಇದನ್ನು ಕೂಡ ನಾನು ನನ್ನ ಸಾರ್ವಜನಿಕ ಕಾರ್ಯದ ಪ್ರತಿಫಲವೆಂದೇ ಎಣಿಸಬೇಕು."

ಈ ಚರ್ಚೆಯಿಂದುಂಟಾದ ಫಲವೇನೆಂದರೆ ಸುಮಾರು ಇಪ್ಪತ್ತು ಜನ ವರ್ತಕರು ನನಗೆ ಒಂದು ವರುಷದ ವರೆಗೆ ಕೋರ್ಟಿನ ಕೆಲಸವನ್ನು ಕೊಡಲು ಒಪ್ಪಿದರು. ಇದರ ಜೊತೆಗೆ ದಾದಾ ಅಬ್ದುಲ್ಲಾರವರು ನಾನು ಹೊರಡುವಾಗ ನನಗೆ ಸಂಭಾವನೆಯ ರೂಪವಾಗಿ ಕೊಡಬೇಕೆಂದಿದ್ದ ಹಣಕ್ಕೆ ಬದಲಾಗಿ ಮನೆಯ ಸಾಮಾನುಗಳನ್ನು ಕೊಂಡು ಕೊಟ್ಟರು.

ಹೀಗೆ ನಾನು ನೇಟಾಲಿನಲ್ಲಿ ನೆಲೆಸಿದೆನು.



# ೧೮

## ವರ್ಣ ದ್ವೇಷ

ನ್ಯಾಯಾಧಿದೇವತೆಯನ್ನು ಒಂದು ತಕ್ಕಡಿಯನ್ನು ಸಮನಾಗಿ ಹಿಡಿದುಕೊಂಡಿರುವ ನಿಷ್ಪಕ್ಷಪಾತಿಯಾದ ಕುರುಡಿಯಾದ—ಆದರೂ ಕುಶಲಳಾದ—ಮುದುಕಿಯಂತೆ ಚಿತ್ರಿಸುವ ಪದ್ಧತಿಯಿದೆ. ಮನುಷ್ಯರ ಮುಖವನ್ನು ನೋಡಿ ಅಲ್ಲ, ಅದರ ನಿಜವಾದ ಯೋಗ್ಯತೆಗನುಸಾರವಾಗಿಯೇ ತೀರ್ಪನ್ನು ಕೊಡಬೇಕೆಂಬ ಉದ್ದೇಶದಿಂದಲೇ ದೈವವು ಆಕೆಯನ್ನು ಕುರುಡಿಯನ್ನಾಗಿ ಮಾಡಿದೆ. ನೇಟಾಲಿನ ವಕೀಲರ ಸಭೆಯು ಅಲ್ಲಿನ ನ್ಯಾಯಾಸ್ಥಾನವು ಈ ತತ್ವಕ್ಕೆ ವಿರುದ್ಧವಾಗಿ ನಡೆಯುವ ಹಾಗೆ ಮಾಡಬೇಕೆಂದು ಹೊರಟಿತು.

ನಾನು ಆ ನ್ಯಾಯಾಸ್ಥಾನದ ವಕೀಲನಾಗಿ ಸೇರಬೇಕಾಗಿದ್ದಿತು. ನನ್ನ ಬಳಿ ನಾನು ಮುಂಬಯಿಯ ಹೈಕೋರ್ಟಿನ ವಕೀಲನಾಗಿ ಸೇರಿಕೊಂಡ ಪ್ರಮಾಣಪತ್ರವಿದ್ದಿತು. ನಾನು ಅಲ್ಲಿ ಸೇರಿದಾಗ ವಿಲಾಯತಿಯ ಪ್ರಮಾಣಪತ್ರವನ್ನು ಆ ಕೋರ್ಟಿಗೆ ಕೊಡಬೇಕಾಯಿತು. ನೇಟಾಲಿನ ಕೋರ್ಟಿಗೆ ಸೇರಿಕೊಳ್ಳುವುದಕ್ಕಾಗಿ ಹಾಕಿದ ಅರ್ಜಿಯ ಜೊತೆಗೆ ನನ್ನ ನಡತೆಯ ವಿಚಾರವಾಗಿ ಎರಡು ಸಿಫಾರಸುಪತ್ರಗಳನ್ನು ಆವಶ್ಯಕವಾಗಿ ಕಳುಹಿಸಬೇಕಾಗಿದ್ದಿತು. ಇವು ಐರೋಪ್ಯರು ಕೊಟ್ಟಿದುದಾದ್ದರೆ ಇನ್ನೂ ಒಳ್ಳೆಯದೆಂದು ಯೋಚಿಸಿ ಸೇಠ್ ಅಬ್ದುಲ್ಲಾರವರ ಮೂಲಕ ಪರಿಚಿತರಾದ ಇಬ್ಬರು ಐರೋಪ್ಯರಿಂದ ಪ್ರಮಾಣಪತ್ರಗಳನ್ನು ಪಡೆದೆನು. ಈ ಅರ್ಜಿಯನ್ನು ಯಾರಾದರೂ ಒಬ್ಬ ವಕೀಲರ ಮೂಲಕ ಕೊಡಬೇಕಾಗಿದ್ದಿತು. ಸಾಮಾನ್ಯವಾಗಿ ಇಂತಹ ಅರ್ಜಿಗಳನ್ನು ಅಟಾರ್ನಿ ಜನರಲ್ (ಸರಕಾರದ ವಕೀಲರು) ರವರು ರುಸುಮಿಲ್ಲದೆ ಕೊಡುತ್ತಿದ್ದರು. ಮಿ. ಎಸ್ಕೊಂಬರು ಈ ಕೆಲಸದಲ್ಲಿದ್ದರು. ನಮಗೆ ತಿಳಿದಂತೆಯೇ ಇವರು ದಾದಾ ಅಬ್ದುಲ್ಲಾ ಕಂಪನಿಯ ವಕೀಲರಾಗಿಯೂ

ಇದ್ದರು. ನಾನು ಅವರನ್ನು ಹೋಗಿ ನೋಡಿದೆನು. ನನ್ನ ಅರ್ಜಿಯನ್ನು ಕೊಡುವೆನೆಂದು ಅವರು ಸಂತೋಷದಿಂದ ಒಪ್ಪಿಕೊಂಡರು.

ಇಷ್ಟರಲ್ಲೇ ಇದ್ದಕ್ಕಿದ್ದಂತೆಯೇ ನನಗೆ ವಕೀಲರ ಸಭೆಯಿಂದ ನಾನು ವಕೀಲನಾಗಿ ಸೇರುವುದನ್ನು ಅವರು ವಿರೋಧಿಸುವುದಾಗಿ ಒಂದು ಸೂಚನಾಪತ್ರವು ಬಂದಿತು. ನನ್ನನ್ನು ವಿರೋಧಿಸುವುದಕ್ಕೆ ಅದರಲ್ಲಿದ್ದ ಒಂದು ಕಾರಣವೇನೆಂದರೆ ನಾನು ಅರ್ಜಿಯ ಜೊತೆಯಲ್ಲಿ ಮೂಲ ಇಂಗ್ಲಿಷ್ ಪ್ರಮಾಣಪತ್ರವನ್ನು ಕಳುಹಿಸಿರಲಿಲ್ಲವೆಂದು. ಆದರೆ ಮುಖ್ಯವಾದ ಕಾರಣವು ಬೇರೆಯಾಗಿದ್ದಿತು. ಅದೇನೆಂದರೆ ಕೋರ್ಟಿನಲ್ಲಿ ವಕೀಲರನ್ನು ಸೇರಿಸಿಕೊಳ್ಳುವುದಕ್ಕೆ ಸಂಬಂಧಿಸಿದ ಕಾನೂನನ್ನು ಮಾಡಿದಾಗ ಕಪ್ಪುಬಣ್ಣದ ಅಥವಾ ಹಳದಿಬಣ್ಣದ ಮನುಷ್ಯರು ಸೇರಲು ಹೀಗೆ ಅರ್ಜಿಕೊಡುವರೆಂದು ಯಾರ ಕನಸಿನಲ್ಲೂ ಇರಲಿಲ್ಲ. ನೇಟಾಲು ಬಿಳಿಯ ಜನರ ಸಾಹಸದಿಂದಲೇ ಅಭಿವೃದ್ಧಿಗೆ ಬಂದಿದ್ದುದರಿಂದ ಅಲ್ಲಿನ ಕೋರ್ಟಿನಲ್ಲಿ ಯುರೋಪ್ಯರಿಗೆ ಪ್ರಾಧಾನ್ಯವು ಇರಬೇಕು. ಕಪ್ಪುಜನರನ್ನು ಸೇರಿಸಿದರೆ ಫರಂಗಿಯವರ ಪ್ರಾಧಾನ್ಯವು ಬರಬರುತ್ತಾ ಕಡಿಮೆಯಾಗಿ ಅವರ ರಕ್ಷಣೆಗೆ ಕೂಡ ಅಪಾಯ ಬರಬಹುದು.

ನನ್ನ ಅರ್ಜಿಯನ್ನು ವಿರೋಧಿಸುವದಕ್ಕೆ ವಕೀಲರ ಸಭೆಯವರು ಒಬ್ಬ ಪ್ರಖ್ಯಾತ ವಕೀಲರನ್ನು ಗೊತ್ತುಮಾಡಿದರು. ಇವರಿಗೂ ದಾದಾ ಅಬ್ದುಲ್ಲಾ ಕಂಪೆನಿಯವರೊಡನೆ ಸಂಬಂಧವಿದ್ದುದರಿಂದ ಅವರು ಅಬ್ದುಲ್ಲಾ ಸೇಠರ ಮೂಲಕ ನನಗೆ ಹೇಳಿಕಳುಹಿಸಿ ನನ್ನೊಡನೆ ಈ ವಿಷಯವಾಗಿ ಏನೂ ಮರೆಮಾಚದೆ ಮಾತನಾಡಿದರು. ಅವರು ನನ್ನ ಪೂರ್ವಚರಿತ್ರೆಯನ್ನು ಕೇಳಲು ನಾನು ಅದನ್ನು ಅವರಿಗೆ ತಿಳಿಸಿದೆನು. ಆಗ ಅವರು "ನಿಮಗೆ ವಿರೋಧವಾಗಿ ನಾನು ಹೇಳತಕ್ಕುದೇನೂ ಇಲ್ಲ. ನನಗೆ ನೀವು ಇಲ್ಲಿಯೇ ಹುಟ್ಟಿದ ಧೂರ್ತರಲ್ಲಿ ಒಬ್ಬರಾಗಿದ್ದರೂ ಇರಬಹುದೆಂಬ ಶಂಕೆಯಿದ್ದಿತು. ಇದೇ ಅಲ್ಲದೆ ನಿಮ್ಮ ಅರ್ಜಿಯೊಡನೆ ನೀವು ನಿಮ್ಮ ಮೂಲ ಪ್ರಮಾಣಪತ್ರವನ್ನು ಕಳುಹಿಸಲಿಲ್ಲವಾದುದರಿಂದ ನನ್ನ ಸಂಶಯವು ಬಲಪಟ್ಟಿತು. ಇತರರ ಪ್ರಮಾಣಪತ್ರಗಳನ್ನು ಉಪಯೋಗಿಸುವ ಜನರೇನೂ ಇಲ್ಲಿ ಕಂಡುಬರದೆ ಇಲ್ಲ. ನೀವು ಯುರೋಪ್ಯರಿಂದ ತಂದಿರುವ

ಶಿಫಾರಸು ಪತ್ರಗಳಿಗೆ ನಾನೇನೂ ಬೆಲೆಕೊಡುವುದಿಲ್ಲ. ಅವರಿಗೆ ನಿಮ್ಮ ವಿಚಾರವೇನು ಗೊತ್ತು? ಅವರಿಗೆ ನಿಮ್ಮ ಪರಿಚಯವು ಕೂಡ ಎಷ್ಟರ ಮಟ್ಟಿಗೆ ಇದ್ದೀತು?" ಎಂದರು.

ನಾನು "ನನಗೆ ಇಲ್ಲಿ ಎಲ್ಲರೂ ಹೊಸಬರೆ! ಅಬ್ದುಲ್ಲಾ ಸೇಠರು ಕೂಡ ನನಗೆ ಇಲ್ಲೇ ಮೊಟ್ಟಮೊದಲು ಗುರುತಾದುದು." ಎಂದೆನು.

ಅದಕ್ಕೆ ಅವರು "ಆದರೆ ಅಬ್ದುಲ್ಲಾಸೇಠರೂ ನೀವೂ ಒಂದೇ ಸ್ಥಳದಿಂದ ಬಂದವರೆಂದು ಹೇಳುತ್ತೀರಿ! ಅಲ್ಲಿ ನಿಮ್ಮ ತಂದೆಯವರು ದಿವಾನರಾಗಿದ್ದರೆ ಅಬ್ದುಲ್ಲಾ ಸೇಠರಿಗೆ ನಿಮ್ಮ ಕುಟುಂಬದ ಪರಿಚಯು ಇದ್ದೇ ಇರುತ್ತದೆ. ನೀವು ಅವರಿಂದ ಸಿಫಾರಸು ಪತ್ರವನ್ನು ತಂದು ದೇ ಆದರೆ ನನಗೆ ಯಾವ ಅಭ್ಯಂತರವೂ ಇರುವುದಿಲ್ಲ. ಆಗ ನಾನು ನೀವು ವಕೀಲರಾಗಿ ಸೇರುವುದನ್ನು ವಿರೋಧಿಸುವುದಕ್ಕಾಗುವುದಿಲ್ಲನೆಂದು ವಕೀಲರ ಸಭೆಗೆ ಸಂತೋಷದಿಂದ ಬರೆಯಬಹುದು." ಎಂದರು.

ನನಗೆ ಇದನ್ನು ಕೇಳಿ ಕೋಪವೇರಿತು. ಆದರೆ ನಾನು ಅದನ್ನು ತಡೆದುಕೊಂಡೆನು. ನನ್ನಲ್ಲಿಯೇ ನಾನು "ಅಬ್ದುಲ್ಲಾ ಸೇಠರಿಂದಲೇ ಸಿಫಾರಸುಪತ್ರವನ್ನು ತಂದಿದ್ದರೆ ಸ್ವೀಕರಿಸದೆ ಫರಂಗಿಯವರಿಂದ ತೆಗೆದು ಕೊಂಡು ಬರಬೇಕೆಂದು ಹೇಳುತ್ತಿದ್ದರು. ನಾನು ವಕೀಲನಾಗಿ ಸೇರುವುದಕ್ಕೂ ನನ್ನ ಹುಟ್ಟಿಗೂ ನನ್ನ ಚರಿತ್ರೆಗೂ ಏನು ಸಂಬಂಧ? ನಾನು ದರಿದ್ರರ ಮಗನಾಗಲಿ ದುಶ್ಚರಿತ್ರರ ಮಗನಾಗಲಿ ಅದನ್ನು ನನಗೆ ವಿರೋಧವಾಗಿ ಉಪಯೋಗಿಸುವುದೇತು?" ಎಂದುಕೊಂಡೆನು. ಆದರೆ ಇದನ್ನೆಲ್ಲಾ ನುಂಗಿಕೊಂಡು "ವಕೀಲ ಸಭೆಯವರಿಗೆ ಈ ವಿಚಾರ ಗಳನ್ನೆಲ್ಲಾ ಕೇಳಲು ಅಧಿಕಾರವಿದೆಯೆಂದು ನಾನು ಒಪ್ಪುವುದಿಲ್ಲ ವಾದರೂ ನೀವು ಕೇಳುವಂತೆ ಅಬ್ದುಲ್ಲಾ ಸೇಠರಿಂದ ಸಿಫಾರಸುಪತ್ರ ವನ್ನು ತರಲು ಸಿದ್ಧನಾಗಿದ್ದೇನೆ." ಎಂದೆನು.

ಅಬ್ದುಲ್ಲಾ ಸೇಠರ ಪ್ರಮಾಣಪತ್ರವನ್ನು ಸಿದ್ಧಪಡಿಸಿ ಈ ವಕೀಲ ರಿಗೆ ಕಳುಹಿಸಿಕೊಟ್ಟದ್ದಾಯಿತು. ಅವರು ತಮ್ಮ ಒಪ್ಪಿಗೆಯನ್ನು ಸೂಚಿ ಸಿದರು. ಆದರೆ ಇದು ವಕೀಲರ ಸಭೆಗೆ ರುಚಿಸಲಿಲ್ಲ. ಅವರು ನನ್ನನ್ನು ವಕೀಲನಾಗಿ ಸೇರಿಸಿಕೊಳ್ಳುವುದನ್ನು ವಿರೋಧಿಸಿದರು. ಕೋರ್ಟಿನವರು

ಮಿ. ಎಸ್ಕೂಂಬರ ಉತ್ತರವನ್ನು ಕೂಡ ಕೇಳದೆ ಅರ್ಜಿಯನ್ನು ವಜಾಮಾಡಿದರು. ಶ್ರೇಷ್ಠ ನ್ಯಾಯಾಧೀಶರು "ಅರ್ಜಿದಾರರು ಮೂಲಪ್ರಮಾಣ ಪತ್ರವನ್ನು ಕಳುಹಿಸಲಿಲ್ಲವೆನ್ನುವ ವಾದದಲ್ಲಿ ಏನೂ ತೂಕವಿಲ್ಲ. ಅವರೇನಾದರೂ ಸುಳ್ಳು ಪ್ರಮಾಣ ಪತ್ರವನ್ನು ಕಳುಹಿಸಿದುದೇ ಆದರೆ ಅವರ ಮೇಲೆ ಕಟ್ಟಳೆ ನಡೆಸಿ ಅವರು ತಪ್ಪಿತಸ್ಥರೆಂದು ಕಂಡುಬಂದರೆ ವಕೀಲರ ಪಟ್ಟಿಯಿಂದ ಅವರ ಹೆಸರನ್ನು ಹೊಡೆದು ಹಾಕಬಹುದು. ನ್ಯಾಯದ ದೃಷ್ಟಿಯಲ್ಲಿ ಕಪ್ಪು ಜನರು ಬಿಳಿಯ ಜನರು ಎಂಬ ಭೇದವಿಲ್ಲ. ಮಿ. ಗಾಂಧಿಯವರು ವಕೀಲರಾಗಿ ಸೇರುವುದನ್ನು ತಡೆ ಮಾಡಲು ಕೋರ್ಟಿನವರಿಗೆ ಅಧಿಕಾರವಿಲ್ಲ. ಅವರ ಅರ್ಜಿಯನ್ನು ನಾವು ಮಂಜೂರುಮಾಡುತ್ತೇವೆ. ಗಾಂಧಿಯವರೇ, ನೀವು ಈಗ ಪ್ರಮಾಣವನ್ನು ಮಾಡಿರಿ." ಎಂದರು.

ನಾನು ಎದ್ದುನಿಂತುಕೊಂಡು ರಜಿಸ್ಟ್ರಾರರ ಬಳಿಗೆ ಹೋಗಿ ಪ್ರಮಾಣ ಮಾಡಿದೆನು. ಇದು ಮುಗಿದೊಡನೆಯೇ ನ್ಯಾಯಾಧೀಶರು ನನ್ನನ್ನು ಕರಿತು "ನೀವು ಈಗ ನಿಮ್ಮ ರುಮಾಲನ್ನು ತೆಗೆಯಬೇಕು. ವಕೀಲರು ಹಾಕಿಕೊಳ್ಳಬೇಕಾದ ಉಡುಪಿಗೆ ಸಂಬಂಧಪಟ್ಟ ನಿಯಮಗಳನ್ನು ನೀವೂ ಅನುಸರಿಸಬೇಕು." ಎಂದರು.

ನಾನು ನನ್ನ ಆಗಿನ ಪರಿಸ್ಥಿತಿಯನ್ನು ನೋಡಿಕೊಂಡೆನು. ಡರ್ಬನಿನ ಕೋರ್ಟಿನಲ್ಲಿ ಯಾವ ರುಮಾಲನ್ನು ತೆಗೆಯುವುದಿಲ್ಲವೆಂದು ಹಟ ಮಾಡಿದೆನೋ ಅದೇ ರುಮಾಲನ್ನು ಇಲ್ಲಿ ತೆಗೆದೆನು. ಇಲ್ಲಿಯೂ ಕೂಡ ತೆಗೆಯುವುದಿಲ್ಲವೆಂದು ಹಟಮಾಡಿದ್ದರೆ ಅದಕ್ಕೆ ಕಾರಣಗಳಿರುತ್ತಿರಲಿಲ್ಲವೆಂದಲ್ಲ. ಆದರೆ ನಾನು ಇದಕ್ಕಿಂತ ದೊಡ್ಡ ಕದನಗಳನ್ನು ಕಾಯುವುದಕ್ಕಾಗಿ ನನ್ನ ಶಕ್ತಿಯನ್ನು ಉಳಿಸಿಕೊಳ್ಳಬೇಕಾಗಿದ್ದಿತು. ಹೋರಾಡುವುದರಲ್ಲಿ ನನಗಿರುವ ಕುಶಲತೆಯನ್ನು ಈ ರುಮಾಲಿಟ್ಟುಕೊಳ್ಳುವ ಹಟದಲ್ಲಿಯೇ ಖರ್ಚುಮಾಡಿಬಿಡಕೂಡದು. ಇದನ್ನು ಉಪಯೋಗಿಸುವುದಕ್ಕೆ ಇನ್ನೂ ಒಳ್ಳೆಯ ಸಮಯವನ್ನು ಕಾಯಬೇಕು.

ಅಬ್ದುಲ್ಲಾ ಸೇಠರಿಗೂ ಇತರ ಮಿತ್ರರಿಗೂ ನಾನು ಈ ರೀತಿಯಾಗಿ ಒಪ್ಪಿದುದು (ಅಥವಾ ನನ್ನ ನಿರ್ಬಲತೆಯೋ ?) ಸರಿಬೀಳಲಿಲ್ಲ. ಅವರ

ಅಭಿಪ್ರಾಯದಲ್ಲಿ ನಾನು ವಕೀಲನಾಗಿಯೂ ರುಮಾಲು ಇಟ್ಟುಕೊಂಡೇ ಇರುವ ಅಧಿಕಾರವನ್ನು ಬಿಡಕೂಡದಾಗಿದ್ದಿತು. ನಾನು ಅವರಿಗೆ ತಿಳಿಯ ಹೇಳುವುದಕ್ಕೆ ಪ್ರಯತ್ನಪಟ್ಟೆನು. "ಮಲೆಯಾಳದಲ್ಲಿದ್ದಾಗ ಮಲೆಯಾಳಿಯಂತೆನಡೆ." ಎಂಬ ಗಾದೆಯ ರಹಸ್ಯವನ್ನು ಅವರಿಗೆ ತಿಳಿಸಿದೆನು. "ಹಿಂದೂಸ್ಥಾನದಲ್ಲಿ ಫರಂಗಿಯ ಅಧಿಕಾರಿಗಳಾಗಲಿ ಅಥವಾ ನ್ಯಾಯಾಧೀಶರಾಗಲಿ ನಿಮಗೆ ರುಮಾಲನ್ನು ತೆಗೆಯಬೇಕೆಂದು ಹೇಳಿದರೆ ನೀವು ಅವಶ್ಯಕವಾಗಿ ವಿರೋಧಿಸಬಹುದು. ಆದರೆ ನೇಟಾಲಿನಂತಹ ವಿದೇಶದಲ್ಲಿ ನಾನು ಕೋರ್ಟಿನ ಕೆಲಸನಡೆಸುವವನಾಗಿದ್ದು ಕೋರ್ಟಿನ ಪದ್ಧತಿಗಳಿಗೆ ವಿರೋಧವಾಗಿ ನಡೆಯುವುದು ನನಗೆ ಒಪ್ಪುವುದಿಲ್ಲ." ಎಂಬದಾಗಿಯೂ ಮತ್ತು ಇದೇರೀತಿಯಾದ ಇತರ ಯುಕ್ತಿಗಳನ್ನೂ ಹೇಳಿ ನನ್ನ ಮಿತ್ರರನ್ನು ತಕ್ಕಮಟ್ಟಿಗೆ ಸಮಾಧಾನಪಡಿಸಿದೆನು. ಆದರೆ ಒಂದು ವಿಷಯವನ್ನು ಬೇರೆಬೇರೆ ಸಂದರ್ಭಗಳ ಬೇರೆಬೇರೆ ದೃಷ್ಟಿಯಿಂದ ನೋಡಬೇಕು ಎಂಬ ತತ್ವವನ್ನು ಈ ಪ್ರಸಂಗದಲ್ಲಿಯೂ ಉಪಯೋಗಿಸಬೇಕೆನ್ನುವುದನ್ನು ಅವರು ಮನಗಾಣುವಂತೆ ಮಾಡಿದೆನೆಂದು ಹೇಳಲಾರೆನು. ಆದರೆ ಇತರರ ಅಭಿಪ್ರಾಯವನ್ನು ನಾವು ಮನ್ನಿಸುವುದರಿಂದುಟಾಗುವ ಸುಖವು ನನ್ನ ಜೀವನದಲ್ಲೆಲ್ಲಾ ಸತ್ಯದ ಅನುಸರಣೆಯಿಂದ ನನಗೆ ಮುಂದಟ್ಟಾಗಿದೆ. ಆಮೇಲೆ ಈ ತತ್ವವು ಸತ್ಯಾಗ್ರಹದ ಜೀವಾಳವೆಂಬ ಅನುಭವವು ನನಗೆ ಉಂಟಾಯಿತು. ಈ ಸಮಾಧಾನವೃತ್ತಿಯಿಂದ ನನ್ನ ಜೀವನದಲ್ಲಿ ನನಗೆ ಅನೇಕಬಾರಿ ಪ್ರಾಣಾಪಾಯವೂ ಮಿತ್ರರ ಅಸಂತೋಷವೂ ಸಂಭವಿಸಿವೆ. ಆದರೆ ಸತ್ಯವು ವಜ್ರದಂತೆ ಕಠೋರವಾಗಿಯೂ ಕಮಲದಂತೆ ಕೋಮಲವಾಗಿಯೂ ಇದೆ.

ವಕೀಲರ ಸಭೆಯು ಹೀಗೆ ವಿರೋಧಿಸಿದುದರಿಂದ ನಾನು ಪುನಃ ಪ್ರಸಿದ್ಧಿಯನ್ನು ಪಡೆದೆನು. ಅನೇಕ ವೃತ್ತಪತ್ರಗಳು ವಕೀಲರ ಸಭೆಯು ಮಾಡಿದುದು ತಪ್ಪೆಂದೂ ಅವರ ಅಸೂಯೆಯೇ ಇದಕ್ಕೆ ಕಾರಣವೆಂದೂ ಬರೆದುವು. ಮತ್ತು ಈರೀತಿಯ ಟೀಕೆಟಿಪ್ಪಣಿಗಳಿಂದ ನನ್ನ ಕೆಲಸವು ತಕ್ಕಮಟ್ಟಿಗೆ ಸುಲಭವಾಯಿತು.

೧೯

## ನೇಟಾಲ್ ಇಂಡಿಯನ್ ಕಾಂಗ್ರೆಸ್

ವಕೀಲಿಯನ್ನು ನಾನು ಪ್ರಧಾನವಾದ ಕೆಲಸವಾಗಿ ಎಣಿಸುವಹಾಗಿರಲಿಲ್ಲ. ನಾನು ನೇಟಾಲಿನಲ್ಲಿ ನೆಲೆಸಿದುದು ಸರಿಯೆನಿಸಬೇಕಾದರೆ ನನ್ನ ಲಕ್ಷ್ಯವನ್ನೆಲ್ಲಾ ಸಾರ್ವಜನಿಕ ಕಾರ್ಯಗಳಮೇಲೆ ಇಡಬೇಕಾಗಿದ್ದಿತು. ನಮ್ಮ ಮತಾಧಿಕಾರವನ್ನು ತಪ್ಪಿಸುವ ಕಾನೂನಿನ ವಿಷಯವಾಗಿ ಅರ್ಜಿಯನ್ನು ಕಳುಹಿಸಿ ಕೊಟ್ಟುದಷ್ಟೇ ಸಾಕಾಗಿರಲಿಲ್ಲ. ಈ ವಿಚಾರವು ಸ್ವಾಸ್ಥ್ಯಗಳ ಮೇಲ್ವಿಚಾರಕರಾದ ಸಚಿವರ ಮನಸ್ಸಿಗೆ ಬರುವುದಕ್ಕೆ ಒಂದೇ ಸಮನಾದ ಚಳವಳಿಯನ್ನು ನಡೆಸುವುದು ಮುಖ್ಯವಾಗಿದ್ದಿತು. ಈ ಉದ್ದೇಶಕ್ಕಾಗಿ ಒಂದು ಶಾಶ್ವತವಾದ ಮಂಡಲಿಯನ್ನು ಸ್ಥಾಪಿಸುವುದು ಆವಶ್ಯಕವೆಂದು ಯೋಚಿಸಿದೆವು. ಆದುದರಿಂದ ಅಬ್ದುಲ್ಲಾ ಸೇಠರೇ ಮೊದಲಾದ ಮಿತ್ರರ ಸಲಹೆಯನ್ನು ಕೇಳಿದೆನು. ಸ್ಥಿರಸ್ವರೂಪದ ಸಾರ್ವಜನಿಕ ಮಂಡಲಿಯನ್ನು ಸ್ಥಾಪಿಸಬೇಕೆಂದು ನಾವೆಲ್ಲರೂ ನಿರ್ಧರಿಸಿದೆವು.

ಈ ಹೊಸ ಮಂಡಲಿಗೆ ಹೆಸರನ್ನಿಡುವುದು ನನಗೆ ಬಹಳ ಕಷ್ಟದ ಕೆಲಸವಾಗಿ ಪರಿಣಮಿಸಿತು. ಅದು ಯಾವ ಪಂಗಡದವರ ಪಕ್ಷವನ್ನೂ ವಹಿಸಕೂಡದಾಗಿದ್ದಿತು. ಸೀಮೆಯಲ್ಲಿನ 'ಪ್ರಾಚೀನತಾಪ್ರೇಮಿ' (ಕನ್ಸರ್ವೆಟಿವ್) ಪಕ್ಷದವರಿಗೆ ಕಾಂಗ್ರೆಸ್ ಎನ್ನುವ ಹೆಸರು ಸರಿಬೀಳುತ್ತಿರಲಿಲ್ಲವೆಂದು ನನಗೆ ತಿಳಿದಿದ್ದಿತು. ಆದರೂ ಭರತವರ್ಷದ ಚೈತನ್ಯವೆಲ್ಲಾ ಕಾಂಗ್ರೆಸಿನಲ್ಲಿದ್ದಿತು. ನನಗೆ ಅದನ್ನು ನೇಟಾಲಿನಲ್ಲಿ ಪ್ರಸಿದ್ಧಪಡಿಸಬೇಕೆಂಬ ಇಚ್ಛೆಯಿದ್ದಿತು. ಆ ಹೆಸರನ್ನಿಡುವುದಕ್ಕೆ ಹಿಂದು ಮುಂದು ನೋಡುವುದು ಹೇಡಿತನದಂತೆ ಕಂಡಿತು. ಆದುದರಿಂದ ನನ್ನ ಕಾರಣಗಳನ್ನೆಲ್ಲಾ ಸಮಗ್ರವಾಗಿ ತಿಳಿಸಿ ಈ ಮಂಡಲಿಗೆ 'ನೇಟಾಲ್ ಇಂಡಿಯನ್ ಕಾಂಗ್ರೆಸ್' ಎಂಬ ಹೆಸರನ್ನು ಇಡಬೇಕೆಂದು ಸೂಚಿಸಿದೆನು, ಮೇ

೨೨ನೆಯ ದಿನ 'ನೇಟಾಲ್ ಇಂಡಿಯನ್ ಕಾಂಗ್ರೆಸ್' ಸ್ಥಾಪಿತವಾಯಿತು.

ಆ ದಿನ ದಾದಾ ಅಬ್ದುಲ್ಲಾರವರ ವಿಶಾಲವಾದ ಕೊಠಡಿಯು ತುಂಬ ಜನರು ಸೇರಿದ್ದರು. ಅಲ್ಲಿಗೆ ಬಂದಿದ್ದವರೆಲ್ಲಾ ಉತ್ಸಾಹಪೂರ್ವಕವಾಗಿ ಹೊಸ ಮಂಡಲಿಯ ವಿಷಯದಲ್ಲಿ ತಮ್ಮ ಮೆಚ್ಚಿಗೆಯನ್ನು ಸೂಚಿಸಿದರು. ಇದರ ಆಡಳಿತದ ಕ್ರಮವು ಸರಳವಾಗಿದ್ದಿತು. ಅದಕ್ಕೆ ಕೊಡಬೇಕಾದ ಚಂದಾಹಣವು ಹೆಚ್ಚಾಗಿದ್ದಿತು. ತಿಂಗಳಿಗೆ ೫ ಷಿಲಿಂಗ್ (ಸುಮಾರು ೩||| ರೂ.) ಕೊಟ್ಟವರು ಮಾತ್ರ ಸದಸ್ಯರಾಗಿರಬಹುದಾಗಿದ್ದಿತು. ದುಡ್ಡಿದ್ದವರನ್ನು ತಮ್ಮ ಕೈಲಾದಷ್ಟು ಹಣವನ್ನು ಕೊಡಬೇಕೆಂದು ಪ್ರೇರಿಸಿದೆವು. ತಿಂಗಳಿಗೆ ೨ ಪೌಂಡು (ಸುಮಾರು ೩೦ ರೂ.) ಕೊಡಲು ಒಪ್ಪಿ ಅಬ್ದುಲ್ಲಾಸೇಠರು ಚಂದಾಪಟ್ಟಿಯಲ್ಲಿ ಮೊದಲನೆಯವರಾದರು. ಇನ್ನಿಬ್ಬರು ಮಿತ್ರರು ಅಷ್ಟೇ ಚಂದಾವನ್ನು ಕೊಡಲು ಸಮ್ಮತಿಸಿದರು. ನಾನು ಕೂಡ ಈ ವಿಷಯದಲ್ಲಿ ಹಿಂತೆಗೆಯಕೂಡದೆಂದು ಯೋಚಿಸಿ ತಿಂಗಳಿಗೆ ೧ ಪೌಂಡು (ಸುಮಾರು ೧೫ ರೂ.) ಕೊಡಲು ಒಪ್ಪಿದೆನು. ಇದೇನೂ ನನಗೆ ಸುಲಭದ ಮಾತಾಗಿರಲಿಲ್ಲ. ಆದರೆ ನನ್ನ ಜೀವನವನ್ನು ನಡೆಸಿಕೊಳ್ಳುವ ಚೈತನ್ಯವು ನನಗಿದ್ದುದೇ ಆದರೆ ಇದೇನೂ ನನ್ನ ಶಕ್ತಿಗೆ ಮೀರಿದುದಲ್ಲವೆಂದು ಯೋಚಿಸಿದೆನು. ದೇವರೂ ನನಗೆ ಸಹಾಯಮಾಡಿದನು. ಹೀಗೆ ನಾವು ತಿಂಗಳಿಗೆ ೧ ಪೌಂಡು ಕೊಡುವ ಅನೇಕ ಸದಸ್ಯರನ್ನು ಕೂಡಿಸಿದೆವು. ೧೦ ಷಿಲಿಂಗುಗಳನ್ನು (ಸುಮಾರು ೭-೮-೦ ರೂ.) ಕೊಡುವವರ ಸಂಖ್ಯೆಯು ಇನ್ನೂ ಹೆಚ್ಚಾಗಿದ್ದಿತು. ಇದಲ್ಲದೆ ಇತರರು ಹಣವನ್ನು ಧರ್ಮವಾಗಿ ಕೊಟ್ಟರು. ಅದನ್ನೂ ಕೃತಜ್ಞತೆಯಿಂದ ಸ್ವೀಕರಿಸಿದೆವು.

ಕೇಳಿದ ಮಾತ್ರಕ್ಕೆ ಯಾರೂ ತಮ್ಮ ಚಂದಾ ಹಣವನ್ನು ಕೊಡುವುದಿಲ್ಲವೆಂದು ಅನುಭವದಿಂದ ಗೊತ್ತಾಯಿತು. ಡರ್ಬನಿನ ಹೊರಗಿರುವ ಸದಸ್ಯರನ್ನು ಬಾರಿಬಾರಿಗೂ ಹೋಗಿ ನೋಡುವುದು ಅಸಾಧ್ಯವಾಗಿದ್ದಿತು. ಈ ಕ್ಷಣದಲ್ಲಿದ್ದ ಉತ್ಸಾಹವು ಮುಂದಿನ ಕ್ಷಣದಲ್ಲಿ ಮಾಯವಾದಂತೆ

ತೋರುತ್ತಿದ್ದಿತು. ಡರ್ಬನಿನಲ್ಲಿದ್ದ ಸದಸ್ಯರ ಚಂದಾವನ್ನು ಪಡೆಯುವು ದಕ್ಕೆ ಕೂಡ ಅವರನ್ನು ಅನೇಕಸಲ ಕೇಳಬೇಕಾಗಿದ್ದಿತು.

ನಾನು ಕಾರ್ಯದರ್ಶಿಯಾಗಿದ್ದುದರಿಂದ ಚಂದಾಹಣವನ್ನು ವಸೂಲು ಮಾಡುವ ಭಾರವು ನನ್ನದಾಗಿದ್ದಿತು. ಬರಬರುತ್ತಾ ನನ್ನ ಗುಮಾಸ್ತನು ದಿನವನ್ನೆಲ್ಲಾ ಬಾಕಿ ವಸೂಲು ಮಾಡುವುದರಲ್ಲಿಯೇ ಕಳೆಯುವ ಸ್ಥಿತಿಗೆ ಬಂದಿತು. ಆತನಿಗೆ ಇದರಿಂದ ಬೇಸರಿಕೆಯೂ ಆಯಿತು. ಈ ದುಃಸ್ಥಿತಿಯನ್ನು ಸರಿಪಡಿಸಬೇಕಾದರೆ ಚಂದಾಹಣವನ್ನು ವರ್ಷ ಕ್ಕೊಮ್ಮೆ—ಅದೂ ಖಂಡಿತವಾಗಿ ವರ್ಷದ ಮೊದಲಲ್ಲಿಯೇ—ಕೊಡುವ ಹಾಗೆ ಏರ್ಪಾಡು ಮಾಡಬೇಕೆಂದು ನನಗೆ ತೋರಿತು. ಇದಕ್ಕಾಗಿ ಕಾಂಗ್ರೆಸಿನ ಒಂದು ಸಭೆಯನ್ನು ಕೂಡಿಸಿದೆನು. ತಿಂಗಳಿಗೆ ಬದಲಾಗಿ ವರ್ಷಕ್ಕೆ ಒಂದುಸಲ ಚಂದಾಹಣವನ್ನು ಕೊಡಬೇಕೆಂದೂ ಚಂದವು ವರ್ಷಕ್ಕೆ ೩ ಪೌಂಡ್ (ಸುಮಾರು ೪೫—೦—೦ ರೂ.)ಗೆ ಕಡಿಮೆಯಿ ಲ್ಲದೆ ಇರಬೇಕೆಂದೂ ಸೂಚಿಸಿದುದನ್ನು ಎಲ್ಲರೂ ಅನುಮೋದಿಸಿದರು. ಈ ರೀತಿಯಾಗಿ ಹಣದ ವಸೂಲಿಯು ಮೊದಲಿಗಿಂತ ಬಹಳ ಸುಲಭ ವಾಯಿತು.

ಸಾಲಮಾಡಿದ ಹಣದಿಂದ ಸಾರ್ವಜನಿಕ ಕಾರ್ಯಗಳನ್ನು ನಡೆ ಸಬಾರದೆಂದು ನಾನು ಮೊದಲೇ ಅರಿತಿದ್ದೆನು. ಜನರು ಕೊಟ್ಟ ಮಾತನ್ನು ಉಳಿದ ಎಲ್ಲಾ ವಿಷಯಗಳಲ್ಲಿಯೂ ನಂಬಬಹುದು, ಆದರೆ ಹಣದ ವಿಚಾ ರದಲ್ಲಿ ಮಾತ್ರ ನಂಬಲಾಗುವುದಿಲ್ಲ. ವಾಗ್ದಾನಮಾಡಿದ ಹಣವನ್ನು ಜನರು ಜಾಗ್ರತೆಯಾಗಿ ಕೊಟ್ಟುದು ಯಾವಾಗಲೂ ನನ್ನ ಅನುಭವಕ್ಕೆ ಬಂದಿರಲಿಲ್ಲ. ನೇಟಾಲಿನ ಭಾರತೀಯರು ಕೂಡ ಈ ಅನುಭವಕ್ಕೆ ವಿರೋಧವಾಗಿ ನಡೆಯುತ್ತಿರಲಿಲ್ಲ. 'ನೇಟಾಲ್ ಇಂಡಿಯನ್ ಕಾಂಗ್ರೆಸ್' ಹಣವಿಲ್ಲದೆ ಯಾವ ಕೆಲಸವನ್ನೂ ಕೈಕೊಳ್ಳುತ್ತಿರಲಿಲ್ಲ. ಆದುದರಿಂದ ಅದು ಯಾವಾಗಲೂ ಸಾಲವನ್ನು ಮಾಡಿಲ್ಲ. ನನ್ನ ಜೊತೆಯಲ್ಲಿ ಕೆಲಸ ಮಾಡುತ್ತಿ ದ್ದವರು ವಿಶೇಷ ಉತ್ಸಾಹದಿಂದ ಹೊಸ ಸದಸ್ಯರನ್ನು ಕೂಡಿಸುತ್ತಿದ್ದರು. ಈ ಕೆಲಸದಲ್ಲಿ ಅವರಿಗೆ ಅಭಿರುಚಿಯಿದ್ದಿತಲ್ಲದೆ ಇದರಿಂದ ಅಮೂಲ್ಯವಾದ ಅನುಭವವೂ ಉಂಟಾಯಿತು. ಅನೇಕಮಂದಿ ನಗದು ಹಣವನ್ನು

ಕೊಟ್ಟು ಸದಸ್ಯರಾದರು. ಒಳದೇಶದಲ್ಲಿ ದೂರದೂರವಾಗಿದ್ದ ಹಳ್ಳಿಗಳಲ್ಲಿ ಕೆಲಸವು ಕಷ್ಟವಾಗಿದ್ದಿತು. ಜನರಿಗೆ ಸಾರ್ವಜನಿಕ ಕಾರ್ಯಗಳ ಸ್ವರೂಪವು ತಿಳಿದಿರಲಿಲ್ಲ. ಆದರೂ ದೂರದಲ್ಲಿನ ಸ್ಥಳಗಳಿಗೆ ಬರಬೇಕೆಂದು ನಮ್ಮನ್ನು ಕರೆದರು. ಪ್ರತಿಯೊಂದು ಸ್ಥಳದ ಮುಖ್ಯ ವರ್ತಕರೂ ನಮ್ಮನ್ನು ಆದರದಿಂದ ಕಂಡರು.

ಹೀಗೆ ತಿರುಗಾಡುತ್ತಿರುವಾಗ ಒಂದು ಸಮಯದಲ್ಲಿ ನಮ್ಮ ಸ್ಥಿತಿಯು ಬಹಳ ಕಷ್ಟಕ್ಕೆ ಬಂದಿತು. ನಾವು ಒಬ್ಬ ವರ್ತಕನ ಮನೆಯಲ್ಲಿ ಇಳಿದಿದ್ದೆವು. ಆತನು ೬ ಪೌಂಡು ಚಂದಾ ಕೊಡುವನೆಂದು ನಿರೀಕ್ಷಿಸಿದ್ದೆವು. ಆದರೆ ಆತನು ೩ ಪೌಂಡಿಗೆ ಹೆಚ್ಚಾಗಿ ಕೊಡಲು ಒಪ್ಪಲಿಲ್ಲ. ನಾವು ಅಷ್ಟಕ್ಕೇ ಸಮ್ಮತಿಸಿದ್ದರೆ ಇತರರು ಆತನ ಮಾದರಿಯನ್ನನುಸರಿಸುತ್ತಿದ್ದರು. ಹಣ ಕೂಡಿಸುವ ಕೆಲಸವು ಕೆಟ್ಟುಹೋಗುತ್ತಿದ್ದಿತು. ರಾತ್ರಿ ಬಹು ಹೊತ್ತಾಗಿದ್ದಿತು. ನಾವೆಲ್ಲರೂ ಹಸಿದಿದ್ದೆವು. ಆದರೆ ನಾವು ಪಡೆಯಲೇಬೇಕೆಂದು ಮನಸ್ಸು ಮಾಡಿದ್ದ ಹಣವನ್ನು ಪಡೆಯದೆಯೇ ಊಟಮಾಡುವುದು ಹೇಗೆ? ಆತನನ್ನು ಒಪ್ಪಿಸಲು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತು. ಆತನು ವಜ್ರದಂತೆ ಮನಸ್ಸುಮಾಡಿದ್ದಂತೆ ತೋರಿತು. ಅಲ್ಲಿನ ಇತರ ವರ್ತಕರೂ ಆತನನ್ನು ದಾರಿಗೆ ತರಲು ಪ್ರಯತ್ನಪಟ್ಟರು. ಆತನೂ ನಾವೂ ಇಬ್ಬರೂ ಒಂದು ಗೇಣು ಕೂಡ ಬಿಟ್ಟುಕೊಡಕೂಡದೆಂದು ಹಟಹಿಡಿದು ರಾತ್ರಿಯೆಲ್ಲಾ ಎದ್ದು ಕುಳಿತಿದ್ದೆವು. ನನ್ನ ಜೊತೆಗೆ ಬಂದಿದ್ದವರಲ್ಲಿ ಮುಕ್ಕಾಲು ಪಾಲು ಜನ ರೋಷದಿಂದ ಉರಿಯುತ್ತಿದ್ದರೂ ಅದನ್ನು ನುಂಗಿಕೊಂಡಿದ್ದರು. ಕಟ್ಟಕಡೆಗೆ ಆಗಲೇ ಬೆಳಕು ಹರಿಯುತ್ತಿರುವಾಗ ಆತನು ಸೋತು ೬ ಪೌಂಡನ್ನು ಕೊಟ್ಟು ನಮಗೆ ಔತಣವನ್ನು ಮಾಡಿದನು. ಈ ಘಟನೆಯು ಟೋಂಗಾಟಿನಲ್ಲಿ ನಡೆಯಿತು. ಆದರೆ ಇದರ ಪರಿಣಾಮವು ಅಲ್ಲಿಯೇ ನಿಲ್ಲದೆ ಉತ್ತರತೀರದಲ್ಲಿರುವ ಸ್ಟೇಂಗರದವರೆಗೂ ಒಳದೇಶದಲ್ಲಿರುವ ಚಾರ್ಲ್ಸ್‌ಟೌನಿನ ವರೆಗೂ ಹರಡಿತು. ಇದರಿಂದ ನಮ್ಮ ಹಣಕೂಡಿಸುವ ಕೆಲಸವೂ ಜಾಗ್ರತೆಯಾಗಿ ನಡೆಯಿತು.

ಆದರೆ ನಮ್ಮ ಕೆಲಸವು ಹಣ ಕೂಡಿಸುವಷ್ಟಕ್ಕೇ ಮುಗಿಯಲಿಲ್ಲ. ವಾಸ್ತವಿಕವಾಗಿ ಎಷ್ಟು ಬೇಕೋ ಅಷ್ಟಕ್ಕಿಂತ ಹೆಚ್ಚಾಗಿ ಹಣವನ್ನು ಹತ್ತಿರ ಇಟ್ಟುಕೊಳ್ಳಬಾರದೆಂಬ ತತ್ತ್ವವನ್ನು ನಾನು ಹಿಂದೆಯೇ ಕಲಿತು ಕೊಂಡಿದ್ದೆನು.

ಮಂಡಲಿಯು ತಿಂಗಳಿಗೊಮ್ಮೆ ಅಥವಾ ಸಂದರ್ಭವೊದಗಿದರೆ ವಾರಕ್ಕೊಮ್ಮೆ ಸಭೆಗೂಡುತ್ತಿದ್ದಿತು. ಹಿಂದಿನ ಸಭೆಯಲ್ಲಿ ನಡೆದ ವಿಷಯಗಳ ವರದಿಯನ್ನು ಓದಿದಮೇಲೆ ಎಲ್ಲಾ ತೆರದ ವಿಚಾರಗಳ ಚರ್ಚೆಯೂ ನಡೆಯುತ್ತಿದ್ದಿತು. ಜನರಿಗೆ ಹೀಗೆ ಸಭೆಯಲ್ಲಿ ಚರ್ಚಿಸುವ ಅಥವಾ ಅಸಂಗತವಾದ ವಿಚಾರಕ್ಕೆ ಹೋಗದೆ ಸಂಕ್ಷೇಪವಾಗಿ ಮಾತ ನ್ಯಾಡುವ ಅಭ್ಯಾಸವಿರಲಿಲ್ಲ ಎದ್ದುನಿಂತು ಮಾತನಾಡುವುದಕ್ಕೆ ಪ್ರತಿ ಯೊಬ್ಬರೂ ಹಿಂಜರಿಯುತ್ತಿದ್ದರು. ಇಂತಹ ಸಭೆಗಳಲ್ಲಿ ಅನುಸರಿಸ ಬೇಕಾದ ನಿಯಮಗಳನ್ನು ಅವರಿಗೆ ವಿವರಿಸಿದೆನು. ಅವರು ಅವುಗಳಂತೆ ನಡೆದರು. ಇದೂ ಒಂದು ಶಿಕ್ಷಣವೆಂದು ಅವರ ಮನಸ್ಸಿಗೆ ಬಂದಿತು. ಹಿಂದೆ ನಾಲ್ಕು ಜನರ ಮುಂದೆ ಮಾತನಾಡುವ ಅಭ್ಯಾಸವಿಲ್ಲದ ಅನೇಕರಿಗೆ ಸಾರ್ವಜನಿಕ ವಿಷಯಗಳ ವಿಚಾರವಾಗಿ ಚೆನ್ನಾಗಿ ಯೋಚಿಸಿ ಸಭೆಯ ಮುಂದೆ ಮಾತನಾಡುವ ಅಭ್ಯಾಸವುಂಟಾಯಿತು.

ಸಾರ್ವಜನಿಕ ಕಾರ್ಯಗಳಲ್ಲಿ ಚಿಲ್ಲರೆ ವೆಚ್ಚವೇ ಬಹಳ ಹಣವನ್ನು ನುಂಗಿಬಿಡುವುದೆಂದು ನನಗೆ ಗೊತ್ತಿದ್ದುದರಿಂದ ಮೊದಲುಮೊದಲು ರಸೀತಿಯ ಪುಸ್ತಕಗಳನ್ನುಕೂಡ ಅಚ್ಚು ಹಾಕಿಸಕೂಡದೆಂದು ನಾನು ನಿರ್ಧರಿಸಿದ್ದೆನು. ನನ್ನ ಕಚೇರಿಯಲ್ಲಿದ್ದ ಒಂದು ನಕಲುಮಾಡುವ ಯಂತ್ರದಲ್ಲಿ (ಸ್ಕೈಕ್ಲೋಸ್ಟೈಲ್ ಮೆಷೀನ್) ರಸೀತಿಗಳ ಮತ್ತು ವರದಿ ಗಳ ನಕಲುಗಳನ್ನು ಮಾಡುತ್ತಿದ್ದೆನು. ಕಾಂಗ್ರೆಸಿನ ಖಜಾನೆಯು ತುಂಬ ಹಣ ಬಂದು ಸದಸ್ಯರ ಸಂಖ್ಯೆಯೂ ಮಂಡಲಿಯ ಕೆಲಸವೂ ಹೆಚ್ಚಾದ ಮೇಲೆಯೇ ನಾನು ಇಂತಹವುಗಳನ್ನು ಅಚ್ಚು ಹಾಕಿಸಲು ಮೊದಲು ಮಾಡಿದೆನು. ಪ್ರತಿಯೊಂದು ಸಂಸ್ಥೆಗೂ ಈ ರೀತಿಯಾದ ಮಿತ ವ್ಯಯವು ಆವಶ್ಯಕ. ಆದರೂ ಸಂಸ್ಥೆಗಳ ಚಾಲಕರು ಸದಾ ಹಿಡಿತದಿಂದ ನಡೆಯುವುದಿಲ್ಲವೆಂದು ನನಗೆ ಗೊತ್ತು. ಆದುದರಿಂದಲೇ ನಾನು

ಹುಟ್ಟುತ್ತ ಸಣ್ಣದಾಗಿದ್ದು ಬರಬರುತ್ತ ದೊಡ್ಡದಾಗಿ ಬೆಳೆದ ಒಂದು ಸಂಸ್ಥೆಯ ಪ್ರಾರಂಭಕ್ಕೆ ಸಂಬಂಧಪಟ್ಟ ಸಣ್ಣಸಣ್ಣ ವಿಚಾರಗಳನ್ನು ವಿವರಿಸಿದ್ದೇನೆ.

ಜನರು ತಾವುಕೊಟ್ಟ ಹಣಕ್ಕೆ ರಸೀತಿಯನ್ನು ಪಡೆಯುವ ವಿಷಯದಲ್ಲಿ ಲಕ್ಷ್ಯವನ್ನೇ ಇಡುತ್ತಿರಲಿಲ್ಲ. ಆದರೆ ನಾವು ಯಾವಾಗಲೂ ರಸೀತಿಯನ್ನು ಕೊಡಲೇಬೇಕೆಂದು ಕಟ್ಟುಮಾಡಿದ್ದೆವು. ಈ ರೀತಿಯಾಗಿ ಪ್ರತಿಯೊಂದು ಕಾಸಿಗೂ ಲೆಕ್ಕವಿರುತಿದ್ದಿತು. ಇಂದುಕೂಡ "ನೇಟಾಲ ಇಂಡಿಯನ್ ಕಾಂಗ್ರೆಸ್" ನ ಕಾಗದಪತ್ರಗಳಲ್ಲಿ ೧೮೯೪ ನೆಯ ಇಸವಿಯ ಲೆಕ್ಕವು ಸಂಪೂರ್ಣವಾಗಿ ಸಿಕ್ಕುವುದೆಂದು ಹೇಳಬಲ್ಲೆನು. ಜಾಗರೂಕತೆಯಿಂದ ಲೆಕ್ಕವನ್ನಿಡುವುದು ಪ್ರತಿಯೊಂದು ಸಂಸ್ಥೆಗೂ ಅತ್ಯಾವಶ್ಯಕವಾದ ವಿಷಯ. ಹಾಗೆ ಮಾಡದಿರುವ ಸಂಸ್ಥೆಯು ಅಪಕೀರ್ತಿಗೀಡಾಗುತ್ತದೆ. ಸರಿಯಾಗಿ ಲೆಕ್ಕವನ್ನು ಇಡದಿದ್ದರೆ ಸತ್ಯಕ್ಕೆ ಸ್ವಲ್ಪವೂ ಕುಂದುಂಟಾಗದಂತೆ ನೋಡಿಕೊಳ್ಳುವುದು ಅಸಾಧ್ಯ.

ಮಂಡಲಿಯು ಕೈಕೊಂಡ ಇನ್ನೊಂದು ವಿಷಯವೇನೆಂದರೆ, ಅಲ್ಲಿಯೇ ಹುಟ್ಟಿ ಬೆಳೆದ ಸುಶಿಕ್ಷಿತರಾದ ಭಾರತೀಯರ ಸೇವೆ. "ದಿ ಕಲೋನಿಯಲ್ ಬಾರ್ನ್ ಇಂಡಿಯನ್ ಎಜುಕೇಷನಲ್ ಅಸೋಸಿಯೇಷನ್" (ಸ್ವಾಸ್ಥ್ಯದಲ್ಲಿಯೇ ಹುಟ್ಟಿಬೆಳೆದ ಭಾರತೀಯರ ವಿದ್ಯಾವರ್ಧಕ ಸಂಘ) ಎಂಬ ಸಂಸ್ಥೆಯು ಕಾಂಗ್ರೆಸಿನ ಆಶ್ರಯದಲ್ಲಿಯೇ ಸ್ಥಾಪಿಸಲ್ಪಟ್ಟಿತು. ಇದರ ಸದಸ್ಯರಲ್ಲಿ ಮುಕ್ಕಾಲುಪಾಲುಜನ ಈ ಸುಶಿಕ್ಷಿತರಾದ ಯುವಕರಾಗಿದ್ದರು. ಅವರು ಹೆಸರಿಗೆ ಮಾತ್ರ ಚಂದಾ ಹಣವನ್ನು ಕೊಡಬೇಕಾಗಿದ್ದಿತು. ತಮ್ಮ ಕೊರತೆಗಳನ್ನೂ ಆವಶ್ಯಕತೆಗಳನ್ನೂ ವ್ಯಕ್ತಪಡಿಸುವುದಕ್ಕೂ ತಮ್ಮ ಆಲೋಚನಾಶಕ್ತಿಯನ್ನು ಅಭಿವೃದ್ಧಿಪಡಿಸುವುದಕ್ಕೂ ಭಾರತೀಯ ವರ್ತಕರ ಪರಿಚಯವನ್ನು ಸಂಪಾದಿಸುವುದಕ್ಕೂ ಸಾರ್ವಜನಿಕ ಸೇವೆಗೆ ಅವಕಾಶವನ್ನು ಪಡೆಯುವುದಕ್ಕೂ ಈ ಸಂಘವು ಇವರಿಗೆ ಸಹಾಯಕವಾಗಿದ್ದಿತು. ಇದು ಒಂದು ತೆರನಾದ ಚರ್ಚಾಸಂಘವಾಗಿದ್ದಿತು. ಸದಸ್ಯರು ತಪ್ಪದೆ ಸೇರಿ ವಿವಿಧ ವಿಷಯಗಳನ್ನು ಕುರಿತು ಭಾಷಣ ಮಾಡುತ್ತಿದ್ದರು. ಅಥವಾ ಪ್ರಬಂಧ

ಗಳನ್ನು ಓದುತ್ತಿದ್ದರು. ಈ ಸಂಸ್ಥೆಯ ಸಂಬಂಧವಾಗಿ ಒಂದು ಸಣ್ಣ ಪುಸ್ತಕ ಭಂಡಾರವೂ ಸ್ಥಾಪಿಸಲ್ಪಟ್ಟಿತು.

ಮಂಡಲಿಯು ಕೈಕೊಂಡ ಮೂರನೆಯ ಕೆಲಸವೇನೆಂದರೆ ವಿಲಾಯಿತಿಯಲ್ಲಿಯೂ ದಕ್ಷಿಣ ಆಫ್ರಿಕದಲ್ಲಿಯೂ ಇದ್ದ ಆಂಗ್ಲೇಯರಿಗೂ ಮತ್ತು ಭಾರತದೇಶದಲ್ಲಿನ ಜನರಿಗೂ ನೇಟಾಲಿನ ನಿಜವಾದ ಪರಿಸ್ಥಿತಿಯನ್ನು ತಿಳಿಸುವುದು. ಈ ಉದ್ದೇಶದಿಂದ ನಾನು ಎರಡು ಚಿಕ್ಕ ಪುಸ್ತಕಗಳನ್ನು ಬರೆದೆನು. ಮೊದಲನೆಯದರ ಹೆಸರು 'ದಕ್ಷಿಣ ಆಫ್ರಿಕದಲ್ಲಿರುವ ಪ್ರತಿಯೊಬ್ಬ ಆಂಗ್ಲೇಯನಲ್ಲೂ ಬಿನ್ನಹ' ಎಂದು. ಇದರಲ್ಲಿ ನೇಟಾಲಿನ ಭಾರತೀಯರ ಸಾಮಾನ್ಯ ಪರಿಸ್ಥಿತಿಯು ಪ್ರಮಾಣಸಹಿತವಾಗಿ ವಿವರಿಸಲ್ಪಟ್ಟಿದ್ದಿತು. ಇನ್ನೊಂದರ ಹೆಸರು 'ಭಾರತೀಯರ ಮತಾಧಿಕಾರ—ಒಂದು ಬಿನ್ನಹ' ಎಂದು. ಇದರಲ್ಲಿ ಭಾರತೀಯರ ಮತಾಧಿಕಾರದ ಸಂಕ್ಷಿಪ್ತ ಚರಿತ್ರೆಯೂ ಅದಕ್ಕೆ ಸಂಬಂಧಪಟ್ಟ ಸಂಗತಿಗಳೂ ಸಂಖ್ಯೆಗಳೂ ಕೊಡಲ್ಪಟ್ಟಿದ್ದುವು. ಈ ಸಂಬಂಧವಾದ ವಿಷಯಗಳನ್ನು ಓದಿ ತಿಳಿದುಕೊಂಡು ಚೆನ್ನಾಗಿ ಆಲೋಚಿಸಿ ಬಹು ಶ್ರಮದಿಂದ ಈ ಪುಸ್ತಕಗಳನ್ನು ಸಿದ್ಧಪಡಿಸಿದ್ದೆನು. ಈ ಶ್ರಮಕ್ಕೆ ತಕ್ಕ ಫಲವನ್ನೂ ಹೊಂದಿದೆನು. ಅನೇಕ ಜನರು ಅವುಗಳನ್ನು ಓದಿದರು.

ಈ ಚಳವಳಿಯ ಫಲವಾಗಿ ನಮಗೆ ದಕ್ಷಿಣ ಆಫ್ರಿಕದಲ್ಲಿ ಅನೇಕರ ಬೆಂಬಲವೂ ಹಿಂದೂಸ್ಥಾನದಲ್ಲಿ ಎಲ್ಲಾ ಪಕ್ಷದವರ ಕಾರ್ಯರೂಪವಾದ ಸಹಾನುಭೂತಿಯೂ ದೊರಕಿದುವು. ಇದರಿಂದ ದಕ್ಷಿಣ ಆಫ್ರಿಕದ ಭಾರತೀಯರು ಮುಂದೆ ನಡೆಸಬೇಕಾದ ಕಾರ್ಯದ ಕ್ರಮವೂ ಸ್ಪಷ್ಟವಾಗಿ ಗೋಚರಕ್ಕೆ ಬಂದಿತು.



# ೧೦

# ಬಾಲಸುಂದರಂ

ಮನುಷ್ಯನು ಯಾವುದನ್ನಾದರೂ ಶುದ್ಧ ಅಂತಃಕರಣದಿಂದಲೂ ಮನಃಪೂರ್ವಕವಾಗಿಯೂ ಬಯಸಿದರೆ ಆ ಇಷ್ಟಾರ್ಥವು ಯಾವಾಗಲೂ ನೆರವೇರುತ್ತದೆ. ಈ ನಿಯಮದ ವ್ಯಾಪಾರವನ್ನು ನನ್ನ ಅನುಭವದಲ್ಲಿಯೇ ಎಷ್ಟೋ ಸಲ ನೋಡಿದ್ದೇನೆ. ಬಡವರ ಸೇವೆಯೇ ನನ್ನ ಅಂತರಾತ್ಮನ ಬಯಕೆ. ಈ ಬಯಕೆಯೇ ನನ್ನನ್ನು ಸದಾ ಬಡವರೊಡನೆ ಸೇರಿಸಿ ನಾನೂ ಅವರಲ್ಲಿ ಒಬ್ಬನಾಗಿರುವುದನ್ನು ಸಾಧ್ಯಮಾಡಿದೆ.

ಅಲ್ಲಿಯೇ ಹುಟ್ಟಿ ಬೆಳೆದ ಭಾರತೀಯರೂ ಗುಮಾಸ್ತ ವರ್ಗದವರೂ 'ನೇಟಾಲ್ ಇಂಡಿಯನ್ ಕಾಂಗ್ರೆಸ್'ನ ಸದಸ್ಯರಾಗಿದ್ದರೂ ಸಾಮಾನ್ಯ ಕೂಲಿಗಾರರೂ 'ಕರಾರು' ಕೂಲಿಗಾರರೂ ಇನ್ನೂ ಇದರ ಹೊರಗೇ ಇದ್ದರು. ಕಾಂಗ್ರೆಸ್ ಇನ್ನೂ ಅವರದಾಗಿರಲಿಲ್ಲ. ಅದರ ಚಂದಾಹಣವನ್ನು ಕೊಟ್ಟು ಸದಸ್ಯರಾಗಿ ಅದಕ್ಕೆ ಸೇರುವ ಚೈತನ್ಯವು ಅವರಲ್ಲಿರಲಿಲ್ಲ. ಅವರ ಸೇವೆಯಿಂದ ಕಾಂಗ್ರೆಸಿಗೆ ಅವರ ಸ್ನೇಹವನ್ನು ಸಂಪಾದಿಸುವುದು ಸಾಧ್ಯವಾಗಿದ್ದಿತು. ನಾನಾಗಲಿ ಕಾಂಗ್ರೆಸಾಗಲಿ ಸಿದ್ಧವಾಗಿರುವುದಕ್ಕೆ ಮುಂಚೆಯೇ ಇದಕ್ಕೆ ಒಂದು ಅವಕಾಶವು ದೊರಕಿತು. ನಾನು ಇನ್ನೂ ೩—೪ ತಿಂಗಳ ವಕೀಲಿಯ ಕೆಲಸವನ್ನು ಕೂಡ ಮಾಡಿರಲಿಲ್ಲ. ಕಾಂಗ್ರೆಸು ಇನ್ನು ಎಳೆತನದಲ್ಲಿಯೇ ಇದ್ದಿತು. ಆಗ ಒಂದು ದಿನ ಒಬ್ಬ ತಮಿಳನು ಚಿಂದಿಯ ಬಟ್ಟೆಗಳನ್ನುಟ್ಟುಕೊಂಡು ರುಮಾಲನ್ನು ಕೈಯಲ್ಲಿ ಹಿಡಿದುಕೊಂಡು ಅಳುವಿನಿಂದ ಕಂಪಿಸುತ್ತಾ ನನ್ನಿದಿರಿಗೆ ಬಂದು ನಿಂತುಕೊಂಡನು. ಮುಂದಿನ ಎರಡು ಹಲ್ಲುಗಳು ಮುರಿದುಹೋಗಿ ಅವನ ಬಾಯಲ್ಲಿ ರಕ್ತವು ಸುರಿಯುತ್ತಿದ್ದಿತು. ಅವನು ತನ್ನ ಯಜಮಾನನ ಕೈಲಿ ಬಲವಾಗಿ ಏಟು ತಿಂದಿದ್ದನು. ನನ್ನ ಗುಮಾಸ್ತನೂ ತಮಿಳನಾಗಿದ್ದನು. ಆತನ ಮೂಲಕ ಅವನ ವಿಚಾರವನ್ನೆಲ್ಲಾ

ತಿಳಿದುಕೊಂಡೆನು. ಬಾಲಸುಂದರಂ—ಅದೇ ನನ್ನ ಹತ್ತಿರ ಬಂದಿದ್ದವನ ಹೆಸರು—ಡರ್ಬನಿನಲ್ಲಿದ್ದ ಒಬ್ಬ ಪ್ರಸಿದ್ಧ ಫರಂಗಿಯವನ ಹತ್ತಿರ ಕರಾರಿನ ಕೂಲಿಯವನಾಗಿದ್ದನು. ಯಜಮಾನನಿಗೆ ಸಿಟ್ಟುಬಂದು ಮೈಮೇಲಿನ ಎಚ್ಚರ ತಪ್ಪಿ ಆತನು ಬಾಲಸುಂದರನನ್ನು ಎರಡು ಹಲ್ಲು ಮುರಿದುಹೋಗುವಂತೆ ಬಲವಾಗಿ ಹೊಡೆದಿದ್ದನು.

ನಾನು ಅವನನ್ನು ಒಬ್ಬ ವೈದ್ಯರ ಬಳಿಗೆ ಕಳುಹಿಸಿದೆನು. ಆಗಿನ ಕಾಲದಲ್ಲಿ ಫರಂಗಿ ವೈದ್ಯರು ಮಾತ್ರ ಸಿಕ್ಕುತ್ತಿದ್ದರು. ಬಾಲಸುಂದರಂಗೆ ಆದ ಗಾಯದ ಸ್ವರೂಪದ ವಿಚಾರವಾಗಿ ನನಗೆ ಆ ವೈದ್ಯರಿಂದ ಒಂದು ನಿರ್ಣಯಪತ್ರ ಬೇಕಾಗಿದ್ದಿತು. ನಾನು ಇದನ್ನು ಪಡೆದ ಒಡನೆಯೇ ಗಾಯಹೊಂದಿದ ಆತನನ್ನು ಕರೆದುಕೊಂಡು ಮ್ಯಾಜಿಸ್ಟ್ರೇಟರ ಬಳಿಗೆ ಹೋಗಿ ಅವನ ಪ್ರಮಾಣಸಹಿತವಾದ ಹೇಳಿಕೆಯನ್ನು ಅವರ ಮುಂದೆ ಇಟ್ಟೆನು. ಮ್ಯಾಜಿಸ್ಟ್ರೇಟರು ಇದನ್ನು ಓದುತ್ತಲೇ ಕೋಪಗೊಂಡು ಯಜಮಾನನಿಗೆ ಸಮನ್ಸನ್ನು (ಆಜ್ಞಾಪತ್ರ) ಕಳುಹಿಸಿದರು.

ಯಜಮಾನನಿಗೆ ಶಿಕ್ಷೆ ಮಾಡಿಸಬೇಕೆನ್ನುವುದು ನನ್ನ ಮನಸ್ಸಿನಲ್ಲಿ ಇರಲೇ ಇಲ್ಲ. ಆತನ ಕೈಯಿಂದ ಬಾಲಸುಂದರಂ ಬಿಡುಗಡೆಯಾಗಬೇಕೆನ್ನುವುದು ಮಾತ್ರ ನನಗೆ ಬೇಕಾಗಿದ್ದಿತು. ನಾನು 'ಕರಾರಿನ' ಕೂಲಿತನಕ್ಕೆ ಸಂಬಂಧಪಟ್ಟ ಕಾಯಿದೆಯನ್ನು ಓದಿದೆನು. ಒಬ್ಬ ಸಾಧಾರಣ ಆಳು ಹೇಳದೆ ಕೆಲಸವನ್ನು ಬಿಟ್ಟುಹೋದರೆ ಅವನ ಯಜಮಾನನು ಸಿವಿಲ್ (ದಿವಾನಿ) ಕೋರ್ಟಿನಲ್ಲಿ ಅವನಮೇಲೆ ಕಟ್ಟಳೆ ನಡೆಸಬಹುದಾಗಿದ್ದಿತು. ಕರಾರಿನ ಕೂಲಿಗಾರನ ವಿಷಯವಾದರೋ ಬೇರೆಯಾಗಿದ್ದಿತು. ಅದೇ ಸಂದರ್ಭದಲ್ಲಿ ಅವನಮೇಲೆ ಕ್ರಿಮಿನಲ್ (ಫೌಜುದಾರಿ) ಕೋರ್ಟಿನಲ್ಲಿ ಕಟ್ಟಳೆ ನಡೆಸಬಹುದಾಗಿದ್ದಿತು. ಅವನು ತಪ್ಪಿತಸ್ಥನೆಂದು ಗೊತ್ತಾದರೆ ಅವನಿಗೆ ಸಜವಾಗುತ್ತಿದ್ದಿತು. ಆದುದರಿಂದಲೇ ಸರ್ ವಿಲಿಯಮ್ ಹಂಟರರು ಕರಾರು ಕೂಲಿ ಕೆಲಸವು ಹೆಚ್ಚುಕಡಿಮೆ ಗುಲಾಮಗಿರಿಯಷ್ಟೇ ಕೇಡಾದುದೆಂದು ಹೇಳಿದುದು. ಗುಲಾಮನು ಹೇಗೋ ಹಾಗೆಯೇ ಕರಾರಿನ ಕೂಲಿಗಾರನು ಕೂಡ ತನ್ನ ಯಜಮಾನನ ಸ್ವತ್ತಾಗಿದ್ದನು.

ಬಾಲಸುಂದರಂನನ್ನು ಬಿಡುಗಡೆ ಮಾಡಲು ಎರಡೇ ದಾರಿಯಿದ್ದಿತು. 'ಕರಾರಿನ ಕೂಲಿಗಾರರ ರಕ್ಷಕರು ' (ಪ್ರೊಟೆಕ್ಟರ್ ಆಫ್ ಇಂಡೆಂಚರ್ಡ್ ಲೇಬರರ್ಸ್) ಎಂಬ ಅಧಿಕಾರಿಗೆ ಹೇಳಿ ಅವನನ್ನು ಬಿಡುಗಡೆ ಮಾಡಿಸುವುದು ಅಥವಾ ಬೇರೆ ಯಜಮಾನನ ವಶಕ್ಕೆ ಒಪ್ಪಿಸುವುದು; ಇಲ್ಲದಿದ್ದರೆ ಬಾಲಸುಂದರಂನ ಯಜಮಾನನ ಕೈಯಿಂದಲೇ ಅವನನ್ನು ಬಿಡಿಸುವುದು. ನಾನು ಆ ಯಜಮಾನನ ಬಳಿಗೆ ಹೋಗಿ "ನನಗೆ ನಿಮ್ಮ ಮೇಲೆ ಕಟ್ಟಳೆ ನಡೆಸಬೇಕೆಂಬ ಇಚ್ಛೆಯೇನೂ ಇಲ್ಲ. ನೀವು ಈ ಮನುಷ್ಯನನ್ನು ಬಲವಾಗಿ ಹೊಡೆದಿರುವುದು ನಿಮ್ಮ ಮನಸ್ಸಿಗೆ ತಟ್ಟಿದೆಯೆಂದು ನಾನು ತಿಳಿಯುತ್ತೇನೆ. ನೀವು ಇವನನ್ನು ಇನ್ನೊಬ್ಬರಿಗೆ ಕೂಲಿಗಾರನಾಗಿ ಒಪ್ಪಿಸಿದರೆ ನನಗೆ ಸಾಕು." ಎಂದು ಹೇಳಿದೆನು. ಇದಕ್ಕೆ ಅವರು ಒಡನೆಯೇ ಒಪ್ಪಿದರು. ಆಮೇಲೆ ನಾನು 'ರಕ್ಷಕ' ರನ್ನು ನೋಡಿದೆನು. ಇನ್ನೊಬ್ಬ ಯಜಮಾನನ್ನು ನಾನು ಗೊತ್ತುಮಾಡುವುದೇ ಆದರೆ ಆಗಬಹುದೆಂದು ಅವರೂ ಈ ಏರ್ಪಾಟಿಗೆ ಒಪ್ಪಿದರು.

ಇದಕ್ಕಾಗಿ ನಾನು ಇನ್ನೊಬ್ಬರ ಬಳಿ ಇವನನ್ನು ಕೆಲಸಕ್ಕೆ ಗೊತ್ತುಮಾಡಲು ಹೊರಟೆನು. ಭಾರತೀಯರಿಗೆ 'ಕರಾರು' ಕೂಲಿಯವರನ್ನು ಇಟ್ಟುಕೊಳ್ಳುವ ಅಧಿಕಾರವಿರಲಿಲ್ಲ. ಆದುದರಿಂದ ಈ ಹೊಸ ಯಜಮಾನನು ಫರಂಗಿಯವನೇ ಆಗಿರಬೇಕಾಗಿದ್ದಿತು. ಆಗ ನನಗೆ ಎಲ್ಲೋ ಸ್ವಲ್ಪಮಂದಿ ಫರಂಗಿಯವರ ಪರಿಚಯವಿದ್ದಿತು. ನಾನು ಅವರಲ್ಲಿ ಒಬ್ಬರನ್ನು ಹೋಗಿ ನೋಡಿದೆನು. ಅವರು ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳಬೇಕೆಂಬ ನನ್ನ ಕೋರಿಕೆಗೆ ಆದರದಿಂದ ಒಪ್ಪಿದರು. ಅವರ ಸಹಾಯಕ್ಕಾಗಿ ನಾನು ಕೃತಜ್ಞತೆಯನ್ನು ವ್ಯಕ್ತಪಡಿಸಿದೆನು. ಮ್ಯಾಜಿಸ್ಟ್ರೇಟರು ಬಾಲಸುಂದರಂನ ಯಜಮಾನನನ್ನು ತಪ್ಪಿತಸ್ಥನೆಂದು ತೀರ್ಮಾನ ಮಾಡಿ ಆತನು ಅವನನ್ನು ಇನ್ನೊಬ್ಬ ಯಜಮಾನನ ವಶಕ್ಕೆ ಕೊಡಲು ಒಪ್ಪಿರುವುದಾಗಿ ತೀರ್ಪಿನಲ್ಲಿ ಬರೆದರು.

ಬಾಲಸುಂದರಂನ ಮೊಕದ್ದಮೆಯು ಪ್ರತಿಯೊಬ್ಬ 'ಕರಾರು' ಕೂಲಿಗಾರನ ಕಿವಿಗೂ ಬಿದ್ದಿತು. ಅವರು ನನ್ನನ್ನು ತಮ್ಮ ಸ್ನೇಹಿತನೆಂದು ಭಾವಿಸತೊಡಗಿದರು. ನನಗೆ ಈ ಸಂಬಂಧದಿಂದ ಆನಂದವಾಯಿತು.

ಈ ಕೂಲಿಗಾರರ ಒಂದು ಪ್ರವಾಹವೇ ನನ್ನ ಕಚೇರಿಗೆ ಹರಿಯುವುದಕ್ಕೆ ಪ್ರಾರಂಭವಾಯಿತು. ಇದರಿಂದ ಅವರ ಸುಖದುಃಖಗಳನ್ನು ತಿಳಿಯುವುದಕ್ಕೆ ಅತ್ಯುತ್ತಮವಾದ ಅವಕಾಶವು ದೊರಕಿತು.

ಈ ಮೊಕದ್ದಮೆಯ ಪ್ರಥೆಯು ದೂರದಲ್ಲಿರುವ ಮದರಾಸಿನವರೆಗೂ ಹರಡಿತು. ಈ ಪ್ರಾಂತ್ಯದ ಬೇರೆಬೇರೆ ಭಾಗಗಳಿಂದ ಬರುತ್ತಿದ್ದ ಕರಾರಿನ ಕೂಲಿಗಾರರಿಗೆ ಈ ಮೊಕದ್ದಮೆಯ ವಿಷಯವು ತಮ್ಮ ಜೊತೆಗಾರರಿಂದ ತಿಳಿಯಿತು.

ಈ ಮೊಕದ್ದಮೆಯಲ್ಲಿ ಅಸಾಧಾರಣವಾದ ವಿಷಯವೇನೂ ಇಲ್ಲದಿದ್ದರೂ ನೇಟಾಲಿನಲ್ಲಿ ಅವರ ಪಕ್ಷವನ್ನು ವಹಿಸಿ ಎಲ್ಲರಿದಿರಿಗೂ ಅವರಿಗಾಗಿ ಕೆಲಸ ಮಾಡುವರು ಒಬ್ಬರಿರುವರಲ್ಲಾ ಎನ್ನುವುದರಿಂದ ಕರಾರಿನ ಕೂಲಿಗಾರರಿಗೆ ಆಶ್ಚರ್ಯವೂ ಸಂತೋಷವೂ ಭರವಸೆಯೂ ಉಂಟಾಯಿತು.

ಬಾಲಸುಂದರಂ ತನ್ನ ಕೈಯಲ್ಲಿ ರುಮಾಲನ್ನು ಹಿಡಿದುಕೊಂಡು ನನ್ನ ಕಚೇರಿಯೊಳಕ್ಕೆ ಬಂದನೆಂದು ಹೇಳಿದ್ದೇನೆ. ಇದೊಂದು ವಿಶೇಷ ರೀತಿಯ ಮನಮರುಕಕ್ಕೆ ಕಾರಣವಾದ ವಿಷಯವಾಗಿದ್ದಿತಲ್ಲದೆ ಇದರಿಂದ ನಮ್ಮ ಅವನತಸ್ಥಿತಿಯೂ ವ್ಯಕ್ತವಾಗುತ್ತಿದ್ದಿತು. ನನಗೆ ರುಮಾಲನ್ನು ತೆಗೆದಿಡಬೇಕೆಂದು ಹೇಳಿದ ಸಂಗತಿಯನ್ನು ನಾನು ಹಿಂದೆಯೇ ವಿವರಿಸಿದ್ದೇನೆ. ಪ್ರತಿಯೊಬ್ಬ ಕರಾರಿನ ಕೂಲಿಗಾರನೂ ಹೊರಗಿನಿಂದ ಬಂದ ಭಾರತೀಯನೂ ಐರೋಪ್ಯರನ್ನು ನೋಡಬೇಕಾದರೆ ತಾನು ತಲೆಗೆ ಟೋಪಿಯನ್ನು ಇಟ್ಟುಕೊಂಡಿರಲಿ, ರುಮಾಲನ್ನು ಹಾಕಿಕೊಂಡಿರಲಿ, ಅಥವಾ ಚೌಕವನ್ನು ಕಟ್ಟಿಕೊಂಡಿರಲಿ ಅವನ್ನು ತೆಗೆಯಲೇಬೇಕೆಂಬ ಒತ್ತಾಯದ ಪದ್ಧತಿಯು ಬಂದುಹೋಗಿದ್ದಿತು. ಎರಡು ಕೈ ಜೋಡಿಸಿ ನಮಸ್ಕಾರ ಮಾಡುವುದು ಕೂಡ ಸಾಕಾಗಲಿಲ್ಲ. ನನ್ನೆದಿರಿಗೂ ಈ ಅಭ್ಯಾಸವನ್ನು ಅನುಸರಿಸಬೇಕೆಂದು ಬಾಲಸುಂದರಂ ತಿಳಿದುಕೊಂಡನು. ಇಂತಹ ವಿಷಯವು ನನ್ನ ಅನುಭವಕ್ಕೆ ಬಂದುದು ಇದೇ ಮೊದಲು. ನನಗೆ ಅವಮಾನವೂ ಸಂಕಟವೂ ಉಂಟಾಗಿ ರುಮಾಲನ್ನು ಕಟ್ಟಿಕೋ ಎಂದು ಅವನಿಗೆ ಹೇಳಿದೆನು. ಅವನು ಸ್ವಲ್ಪ ಸಂಕೋಚಪಟ್ಟುಕೊಂಡೇ

ಹಾಗೆ ಮಾಡಿದನು. ಆದರೆ ಅವನಿಗೆ ಇದರಿಂದ ಸಂತೋಷವಾಯಿತೆನ್ನು ವುದು ಅವನ ಮುಖವನ್ನು ನೋಡುವುದರಿಂದ ನನಗೆ ಗೊತ್ತಾಯಿತು.

ತಮ್ಮಂತೆಯೇ ಮನುಷ್ಯರಾಗಿರುವ ಇತರರ ಅವಮಾನದಿಂದ ತಮ್ಮ ದೊಡ್ಡಸ್ತಿಕೆಯು ಏರುವುದೆಂದು ಜನರು ಹೇಗೆ ತಿಳಿದು ಕೊಳ್ಳುತ್ತಾರೋ ಅದು ನನಗೆ ಯಾವಾಗಲೂ ಅರ್ಥವಾಗದ ಮರ್ಮ ವಾಗಿದೆ.



# ೨೧

## ೩ ಪೌಂಡಿನ ತೆರಿಗೆ

ಬಾಲಸುಂದರಂನ ಮೊಕದ್ದಮೆಯಿಂದ ಕರಾರಿನ ಕೂಲಿಗಾರರಾದ ಭಾರತೀಯರ ಪರಿಚಯವುಂಟಾಯಿತು. ಆದರೆ ಅವರ ಪರಿಸ್ಥಿತಿಯನ್ನು ನಾನು ಚೆನ್ನಾಗಿ ಪರಿಶೀಲಿಸಿ ತಿಳಿದುಕೊಳ್ಳುವುದಕ್ಕೆ ಅವರ ಮೇಲೆ ಪ್ರತ್ಯೇಕವಾಗಿ ಹೆಚ್ಚಾದ ತಲೆಗಂದಾಯವನ್ನು ಹೊರಿಸುವುದಕ್ಕೆ ಅಲ್ಲಿನ ಬಿಳಿಯ ಜನರು ಮಾಡಿದ ಸನ್ನಾಹವು ಪ್ರೇರಿಸಿತು.

ಆ ವರ್ಷದಲ್ಲಿ ಎಂದರೆ ೧೮೯೪ರಲ್ಲಿ ನೇಟಾಲಿನ ಸರಕಾರವು ಕರಾರಿನ ಕೂಲಿಗಾರರ ಮೇಲೆ ವರ್ಷಕ್ಕೆ ೨೫ ಪೌಂಡಿನ (ಸುಮಾರು ೩೭೫ ರೂ.) ತೆರಿಗೆಯನ್ನು ಹೊರಿಸಲು ಹೊರಟಿತು. ಇದನ್ನು ನೋಡಿ ನನಗೆ ಸೋಜಿಗವಾಯಿತು. ನಾನು ಈ ವಿಷಯವನ್ನು ಕಾಂಗ್ರೆಸಿನ ಮುಂದೆ ಚರ್ಚೆಗೆ ತಂದೆನು. ಇದನ್ನು ವಿರೋಧಿಸುವುದಕ್ಕೆ ಬೇಕಾದ ಏರ್ಪಾಡನ್ನು ಮಾಡಬೇಕೆಂದು ಒಡನೆಯೇ ನಿಶ್ಚಯವಾಯಿತು.

ಮೊಟ್ಟಮೊದಲು ನಾನು ಈ ಕಂದಾಯದ ಮೂಲವನ್ನು ಸಂಕ್ಷೇಪವಾಗಿ ವಿವರಿಸಬೇಕು.

ಸುಮಾರು ೧೮೬೦ ನೆಯ ಇಸವಿಯಲ್ಲಿ ನೇಟಾಲಿನಲ್ಲಿನ ಫರಂಗಿಯವರಿಗೆ ಅಲ್ಲಿ ಕಬ್ಬಿನ ವ್ಯವಸಾಯಕ್ಕೆ ಒಳ್ಳೆಯ ಅವಕಾಶವಿದೆಯೆಂದು ತಿಳಿದು ಅದನ್ನು ನಡೆಸಲು ಅವರಿಗೆ ಕೂಲಿಗಾರರ ಆವಶ್ಯಕತೆಯು ತೋರಿತು. ಹೊರಗಿನ ಸಹಾಯವಿಲ್ಲದೆ ಕಬ್ಬಿನ ವ್ಯವಸಾಯವೂ ಸಕ್ಕರೆಯನ್ನು ಮಾಡುವುದೂ ಸಾಧ್ಯವಿರಲಿಲ್ಲ. ನೇಟಾಲಿನ ಜೂಲೂ ಜನರು ಈ ಕೆಲಸಕ್ಕೆ ತಕ್ಕವರಾಗಿರಲಿಲ್ಲ. ಆದುದರಿಂದ ನೇಟಾಲಿನ ಸರಕಾರವು ಹಿಂದೂಸ್ಥಾನದ ಸರಕಾರದೊಡನೆ ಪತ್ರವ್ಯವಹಾರ ನಡೆಸಿ ಹಿಂದೂಸ್ಥಾನದಿಂದ ಕೂಲಿಯವರನ್ನು ಕರೆಯಿಸಲು ಅಪ್ಪಣೆಯನ್ನು ಪಡೆಯಿತು. ಈ ಏರ್ಪಾಡಿನ ಪ್ರಕಾರ ಈ ಕೂಲಿಗಾರರು ನೇಟಾಲಿನಲ್ಲಿ ಐದುವರ್ಷ ಕೂಲಿ

ಮಾಡುವೆನೆಂದು ಮುಚ್ಚಳಿಕೆಯನ್ನು ಬರೆದು ಕೊಡಬೇಕಾಗಿದ್ದಿತು ; ಮತ್ತು ಈ ಐದು ವರ್ಷವಾದಮೇಲೆ ಅವರು ಅಲ್ಲಿಯೇ ನೆಲೆಸುವುದಕ್ಕೂ ಸ್ವಂತವಾಗಿ ಭೂಮಿಯನ್ನು ಮಾಡಿಕೊಳ್ಳುವುದಕ್ಕೂ ಅಧಿಕಾರವಿರಬೇಕೆಂದಿದ್ದಿತು. ಕೂಲಿಗಾರರನ್ನು ಬರಮಾಡಿಕೊಳ್ಳುವುದಕ್ಕೆ ಈ ಆಸೆಯನ್ನು ಅವರಿಗೆ ತೋರಿಸಿದರು. ಏಕೆಂದರೆ ಕರಾರಿನ ಕಾಲವು ಮುಗಿದಮೇಲೆ ಈ ಕೂಲಿಗಾರರ ಶ್ರಮದಿಂದ ತಮ್ಮ ವ್ಯವಸಾಯವನ್ನು ಅಭಿವೃದ್ಧಿಪಡಿಸಿಕೊಳ್ಳುವ ನಿರೀಕ್ಷಣೆಯನ್ನು ಅಲ್ಲಿಯ ಬಿಳಿಯಜನರು ಇಟ್ಟುಕೊಂಡಿದ್ದರು.

ಆದರೆ ಭಾರತೀಯರು ತಮ್ಮ ಮೇಲಿನ ಎಣಿಕೆಯನ್ನು ಮೀರಿಸಿದರು. ಅವರು ಬೇಕಾದಷ್ಟು ತರಕಾರಿಯನ್ನು ಬೆಳೆದರು. ತಮ್ಮ ದೇಶದ ತರಕಾರಿಯನ್ನು ಅಲ್ಲಿ ಬೆಳೆದುದಲ್ಲದೆ ಅಲ್ಲಿಯ ತರಕಾರಿಗಳನ್ನು ಇನ್ನೂ ಅಗ್ಗವಾಗಿ ಬೆಳೆಯುವುದನ್ನು ಸಾಧ್ಯಮಾಡಿದರು. ಮತ್ತು ಆ ದೇಶದಲ್ಲಿ ಮಾವಿನ ಬೆಳೆಯನ್ನು ಇವರೇ ಪ್ರಾರಂಭಮಾಡಿದುದು. ಇವರ ಸಾಹಸವು ವ್ಯವಸಾಯದ ಮಟ್ಟಿಗೇ ನಿಲ್ಲಲಿಲ್ಲ. ಇವರು ವ್ಯಾಪಾರದಲ್ಲಿಯೂ ತೊಡಗಿದರು. ಇವರು ಕಟ್ಟಡಗಳನ್ನು ಕಟ್ಟುವುದಕ್ಕಾಗಿ ಭೂಮಿಯನ್ನು ಕೊಂಡುಕೊಂಡರು. ಇವರಲ್ಲಿ ಕೂಲಿಗಾರರಾಗಿದ್ದ ಅನೇಕರು ಭೂಮಿಕಾಣಿ–ಮನೆಮಠಗಳ ಮಾಲಿಕರಾದರು. ಹಿಂದೂದೇಶದ ವರ್ತಕರು ಇವರನ್ನು ಹಿಂಬಾಲಿಸಿ ವ್ಯಾಪಾರಕ್ಕಾಗಿ ಅಲ್ಲಿ ನೆಲಸಿದರು. ಇವರಲ್ಲಿ ದಿವಂ. ಅಬೂ ಬಾಕರ್ ಆಮೂದ್ ಸೇಠರು ಮೊದಲನೆಯವರು. ಸೇಠರ ವ್ಯಾಪಾರವು ಜಾಗ್ರತೆಯಾಗಿ ಹರಡಿತು.

ಇದನ್ನು ನೋಡಿ ಬಿಳಿಯ ವರ್ತಕರು ಭೀತಿಗೊಂಡರು. ಹಿಂದೂದೇಶದ ಕೂಲಿಗಾರರನ್ನು ಮೊದಲು ಬರಮಾಡಿಕೊಂಡಾಗ ಅವರು ವ್ಯಾಪಾರದಲ್ಲಿ ಕುಶಲರೆನ್ನುವುದನ್ನು ಈ ವರ್ತಕರು ಎಣಿಕೆಗೆ ತಂದುಕೊಂಡಿರಲಿಲ್ಲ. ಅವರು ಸ್ವತಂತ್ರವಾಗಿ ಬೇಸಾಯ ಮಾಡುವುದನ್ನು ತಡೆದುಕೊಂಡಿರಬಹುದಾದರೂ ವ್ಯಾಪಾರದಲ್ಲಿ ಅವರ ಪೋಟಾಪೋಟಿಯು ಬಿಳಿಯಜನರು ಸಹಿಸುವ ಮಾತಾಗಿರಲಿಲ್ಲ.

ಇದು ಭಾರತೀಯರ ಮೇಲಿನ ದ್ವೇಷದ ಬೀಜವನ್ನು ಬಿತ್ತಿತು. ಇನ್ನೂ ಅನೇಕ ವಿಷಯಗಳು ಇದರ ಬೆಳವಣಿಗೆಗೆ ಸಹಾಯಕವಾದುವು. ನಮ್ಮ ಜೀವನದ ರೀತಿಗೂ ಅವರ ಜೀವನದ ರೀತಿಗೂ ಇರುವ ಭೇದ, ನಮ್ಮ ಸರಳತೆ, ಅಲ್ಪ ಲಾಭದಿಂದ ನಮಗುಂಟಾಗುವ ತೃಪ್ತಿ, ಆರೋಗ್ಯದ ಮತ್ತು ಶುಚಿಯ ವಿಚಾರದಲ್ಲಿ ನಮ್ಮ ಅಸಡ್ಡೆ, ನಮ್ಮ ಸುತ್ತಮುತ್ತಲಿನ ಪ್ರದೇಶವನ್ನು ಕೊಳೆಯಿಲ್ಲದೆಯೂ ಅಂದವಾಗಿಯೂ ಇಟ್ಟುಕೊಳ್ಳುವುದರಲ್ಲಿ ನಮ್ಮ ಔದಾಸೀನ್ಯ, ಮನೆಯು ಸುದೃಢವಾಗಿ ಇರುವಂತೆ ನೋಡಿಕೊಳ್ಳುವುದರಲ್ಲಿ ನಾವು ತೋರಿಸುವ ಜಿಪುಣತನ—ಇವೂ ಇದರ ಜೊತೆಗೆ ನಮ್ಮಿಬ್ಬರ ಮತಭೇದವೂ ಸೇರಿ ಈ ದ್ವೇಷದ ಉರಿಯನ್ನು ಹೆಚ್ಚಿಸಿದುವು. ಕಾಯಿದೆಯ ಮೂಲಕವಾಗಿ ಭಾರತೀಯರ ಮತಾಧಿಕಾರವನ್ನು ಕಿತ್ತುಕೊಳ್ಳುವ ಕಾನೂನಿನ ರೂಪದಲ್ಲಿಯೂ ಕರಾರಿನ ಕೂಲಿಗಾರರ ಮೇಲೆ ತೆರಿಗೆಯನ್ನು ಹೊರಿಸುವ ಕಾನೂನಿನ ರೂಪದಲ್ಲಿಯೂ ಈ ದ್ವೇಷವು ಕಾಣಿಸಿಕೊಂಡಿತು. ಇದಲ್ಲದೆ ಬೇರೆ ವಿಧವಾದ ಕಿರುಕುಳವೂ ಆಗಲೇ ಪ್ರಾರಂಭವಾಗಿದ್ದಿತು.

ಭಾರತೀಯ ಕೂಲಿಗಾರರನ್ನು ಬಲವಂತದಿಂದ ಅವರ ಸ್ವದೇಶಕ್ಕೆ ಅಟ್ಟಿ ಅವರ ಕರಾರಿನ ಕಾಲವು ಅಲ್ಲಿಯೇ ತೀರುವಂತೆ ಮಾಡಬೇಕೆನ್ನುವುದು ಮೊದಲನೆಯ ಸೂಚನೆಯಾಗಿದ್ದಿತು. ಹಿಂದೂಸ್ಥಾನದ ಸರ್ಕಾರದವರು ಇದಕ್ಕೆ ಒಪ್ಪುವ ಸಂಭವವಿರಲಿಲ್ಲ. ಆದುದರಿಂದ ಇನ್ನೊಂದು ಸೂಚನೆಯು ಮಾಡಲ್ಪಟ್ಟಿತು. ಅದೇನೆಂದರೆ :—

೧. ಕರಾರಿನ ಕಾಲವು ಮುಗಿದಮೇಲೆ ಕೂಲಿಗಾರನು ಹಿಂದೂಸ್ಥಾನಕ್ಕೆ ಹಿಂತಿರುಗಬೇಕು. ಅಥವಾ

೨. ಪ್ರತಿ ಎರಡು ವರ್ಷಕ್ಕೂ ಹೊಸ ಮುಚ್ಚಳಿಕೆಯನ್ನು ಕೊಡಬೇಕು. ಈ ಪ್ರತಿಯೊಂದು ಸಲವೂ ಕೂಲಿಯು ಹೆಚ್ಚಿಸಲ್ಪಡುವುದು ; ಮತ್ತು

೩. ಕೂಲಿಗಾರನು ಹಿಂದೂಸ್ಥಾನಕ್ಕೆ ಹಿಂತಿರುಗುವುದಕ್ಕಾಗಲಿ ಪುನಃ ಮುಚ್ಚಳಿಕೆಯನ್ನು ಬರೆದುಕೊಡುವುದಕ್ಕಾಗಲಿ ಒಪ್ಪದಿದ್ದರೆ ಅವನು ವರ್ಷಕ್ಕೆ ೨೫ ಪೌಂಡಿನ ತೆರಿಗೆಯನ್ನು ತೆರಬೇಕು.

ಈ ಸೂಚನೆಗೆ ಇಂಡಿಯಾ ಸರಕಾರದವರ ಅನುಮತಿಯನ್ನು ಪಡೆಯಲು ನೇಟಾಲಿನ ಸರಕಾರದವರು ಸರ್ ಹೆನ್ರಿ ಬಿನ್ಸ್ ಮತ್ತು ಮಿ. ಮೇಸನ್ ಎಂಬ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟರು. ಆಗ ಲಾರ್ಡ್ ಎಲ್ಗಿನರು ಹಿಂದೂಸ್ಥಾನದ ವೈಸರಾಯರಾಗಿದ್ದರು. ಅವರು ೨೫ ಪೌಂಡಿನ ತೆರಿಗೆಗೆ ಒಪ್ಪದಿದ್ದರೂ ೩ ಪೌಂಡಿನ (ಸುಮಾರು ೪೫ ರೂ.) ತಲೆಗಂದಾಯಕ್ಕೆ ಒಪ್ಪಿದರು. ಹೀಗೆ ಮಾಡಿದುದು ವೈಸರಾಯರಲ್ಲಿ ದೊಡ್ಡ ಕರ್ತವ್ಯಲೋಪವೆಂದು ಆಗ ನಾನು ಎಣಿಸಿದೆನು. ಈಗಲೂ ಹಾಗೆಯೇ ಎಣಿಸುತ್ತೇನೆ. ಹೀಗೆ ಒಪ್ಪಿಗೆಯನ್ನು ಕೊಡುವಾಗ ಅವರು ಭಾರತದೇಶದ ಹಿತವನ್ನು ಮನಸ್ಸಿನಲ್ಲಿ ಇಟ್ಟೇ ಇರಲಿಲ್ಲ. ಈ ರೀತಿಯಾಗಿ ನೇಟಾಲಿನ ಫರಂಗಿಯವರಿಗೆ ಅನುಕೂಲ ಮಾಡಿಕೊಡುವುದು ಯಾವ ವಿಧದಲ್ಲಿಯೂ ಇವರ ಕರ್ತವ್ಯವಾಗಿರಲಿಲ್ಲ. ಇದಾದ ಮೂರು ನಾಲ್ಕು ವರ್ಷದಲ್ಲಿ ಪ್ರತಿಯೊಬ್ಬ ಕರಾರಿನ ಕೂಲಿಗಾರನೂ ಅವನ ಹೆಂಡತಿಯೂ ೧೬ ವರ್ಷಕ್ಕೆ ಮೀರಿದ ಮಗನೂ ೧೩ ವರ್ಷಕ್ಕೆ ಮೀರಿದ ಮಗಳೂ ಈ ತೆರಿಗೆಯನ್ನು ತರಬೇಕಾಗಿದ್ದಿತು. ಮನೆಯ ಯಜಮಾನನ ವರಮಾನವು ಸರಾಸರಿ ತಿಂಗಳಿಗೆ ೧೪ ಷಿಲಿಂಗ್ (ರೂ. ೧೦—೮—೦) ಗೆ ಯಾವಾಗಲೂ ಹೆಚ್ಚಾಗಿಲ್ಲದಿರುವಾಗ ನಾಲ್ಕು ಜನರು—ಗಂಡ, ಹೆಂಡತಿ ಇಬ್ಬರು ಮಕ್ಕಳು—ಇರುವ ಒಂದು ಕುಟುಂಬದಿಂದ ೧೨ ಪೌಂಡ್ (ಸುಮಾರು ೧೮೦ ರೂ.) ತೆರಿಗೆಯನ್ನು ವಸೂಲು ಮಾಡುವುದು ತೀರ ಅನ್ಯಾಯವಾಗಿದ್ದಿತು. ಇಂತಹ ಅನ್ಯಾಯವು ಪ್ರಪಂಚದಲ್ಲಿ ಇನ್ನೆಲ್ಲಿಯೂ ಕಾಣಬರುತ್ತಿರಲಿಲ್ಲ.

ನಾವು ಈ ತೆರಿಗೆಗೆ ವಿರೋಧವಾಗಿ ಪ್ರಚಂಡವಾದ ಚಳವಳಿಯನ್ನು ಹೂಡಿದೆವು. ನೇಟಾಲ್ ಇಂಡಿಯನ್ ಕಾಂಗ್ರೆಸು ಈ ವಿಷಯದಲ್ಲಿ ಸುಮ್ಮನಿದ್ದಿದ್ದರೆ ವೈಸರಾಯರು ೨೫ ಪೌಂಡಿನ ತೆರಿಗೆಗೆ ಒಪ್ಪಿದ್ದರೂ ಒಪ್ಪಿಬಿಡುತ್ತಿದ್ದರು. ಇದನ್ನು ೨೫ ಪೌಂಡಿನಿಂದ ೩ ಪೌಂಡಿಗೆ ಇಳಿಸುವುದಕ್ಕೆ ಬಹಳಮಟ್ಟಿಗೆ ಕಾಂಗ್ರೆಸಿನ ಚಳವಳಿಯೊಂದೇ ಕಾರಣವಾಗಿದ್ದಿತು. ಆದರೆ ನಾನು ಹೀಗೆ ತಿಳಿದುಕೊಂಡಿರುವುದು ತಪ್ಪಿರಬಹುದು. ಇಂಡಿಯಾ ಸರ್ಕಾರದವರು ಮೊದಲಿನಿಂದ ೨೫ ಪೌಂಡಿನ ಕಂದಾಯಕ್ಕೆ

ಒಪ್ಪದೆ ಕಾಂಗ್ರೆಸಿನವರು ವಿರೋಧಿಸಲಿ ವಿರೋಧಿಸಿರಲಿ ಇದನ್ನು ಮೂರುಪೌಂಡಿಗೆ ಇಳಿಸಿರುವುದೂ ಸಾಧ್ಯವಿರಬಹುದು. ಇದು ಹೇಗಾದರೂ ಇರಲಿ ಹೀಗೆ ಒಪ್ಪಿದುದುರಿಂದ ಇಂಡಿಯಾ ಸರಕಾರದ ವರು ವಿಶ್ವಾಸಘಾತವನ್ನು ಮಾಡಿದರು. ಹಿಂದೂಸ್ಥಾನದ ಹಿತಕ್ಕಾಗಿ ಇರುವ ಮೈಸ್‌ರಾಯರು ಈ ಕ್ರೂರವಾದ ತೆರಿಗೆಗೆ ಎಂದಿಗೂ ಒಪ್ಪಿಗೆ ಯನ್ನು ಕೊಡಬಾರದಾಗಿದ್ದಿತು.

ಕಾಂಗ್ರೆಸು ತೆರಿಗೆಯನ್ನು ೨೫ ಪೌಂಡಿನಿಂದ ೩ ಪೌಂಡಿಗೆ ಕಡಿಮೆ ಮಾಡಿಸಿದ್ದುದು ಅಷ್ಟೇನೂ ದೊಡ್ಡ ಕೆಲಸವೆಂದು ಎಣಿಸುವ ಹಾಗಿರ ಲಿಲ್ಲ. ಕರಾರು ಕೂಲಿಗಾರರ ಸ್ವಾತಂತ್ರ್ಯಕ್ಕೆ ಉಂಟಾದ ಭಂಗವನ್ನು ಪೂರ್ತಿ ಯಾಗಿ ತೊಲಗಿಸಲಿಲ್ಲವೆನ್ನುವ ಅಳುಕು ಇದ್ದೇ ಇದ್ದಿತು. ಈ ಕಂದಾ ಯವನ್ನು ತೊಲಗಿಸಬೇಕೆನ್ನುವುದೇ ಸದಾ ಇದರ ಧ್ಯೇಯವಾಗಿ ನಿಂತಿತು. ಆದರೆ ಈ ಉದ್ದೇಶವು ಸಫಲವಾಗಲು ಇಪ್ಪತ್ತು ವರ್ಷ ಹಿಡಿಯಿತು. ಮತ್ತು ಇದು ಸಫಲವಾದಾಗಲೂಕೂಡ ಇದು ನೇಟಾಲಿನ ಭಾರತೀಯರು ಮಾತ್ರವಲ್ಲದೆ ದಕ್ಷಿಣ ಆಫ್ರಿಕದ ಎಲ್ಲಾ ಭಾರತೀಯರು ಪಟ್ಟ ಶ್ರಮದ ಫಲವಾಗಿ ಬಂದಿತು. ದಿವಂ. ಗೋಖಲೆಯವರಿಗೆ ಕೊಟ್ಟ ಮಾತನ್ನು ಮುರಿದುದೇ ಕಡೆಯ ಕದನಕ್ಕೆ ಕಾರಣವಾಯಿತು. ಈ ಹೋರಾಟ ದಲ್ಲಿ ಕೂಲಿಗಾರರು ತಮ್ಮ ಭಾರವನ್ನು ಪೂರ್ತಿಯಾಗಿ ಹೊತ್ತರು. ಅವ ರಲ್ಲಿ ಕೆಲವರು ಸರಕಾರದ ಗುಂಡಿನೇಟಿಗೆ ಸಿಕ್ಕಿ ಪ್ರಾಣವನ್ನು ತೆತ್ತರು. ಹತ್ತು ಸಾವಿರಮಂದಿಗೆ ಹೆಚ್ಚಾಗಿ ಸೆರೆಮನೆಯ ವಾಸವನ್ನನುಭವಿಸಿ ದರು.

ಆದರೆ ಕಡೆಗೆ ಸತ್ಯಕ್ಕೆ ಜಯವುಂಟಾಯಿತು. ಭಾರತೀಯರು ಅನುಭವಿಸಿದ ದುಃಖಸಂಕಟಗಳ ರೂಪದಲ್ಲಿ ಆ ಸತ್ಯವು ಮೂರ್ತಿಗೊಂ ಡಿತು. ಆದರೆ ಹಿಂಜರಿಯದ ಶ್ರದ್ಧೆಯೂ ಅಮಿತವಾದ ತಾಳ್ಮೆಯೂ ಎಡೆಬಿಡದ ಯತ್ನವೂ ಇದಲ್ಲದಿದ್ದರೆ ಸತ್ಯಕ್ಕೆ ಜಯವುಂಟಾಗುತ್ತಿರ ಲಿಲ್ಲ. ನಮ್ಮ ಪಂಗಡದವರು ಕದನದಿಂದ ಓಡಿ ಕಾಂಗ್ರೆಸಿನವರು ಹೋರಾಟವನ್ನು ನಿಲ್ಲಿಸಿ ಇದೆಂದಿಗೂ ತಪ್ಪದೆಂದು ತೆರಿಗೆಗೆ ತಲೆ ಬಗ್ಗಿಸಿದ್ದರೆ

ಈ ಮೈಯುರಿಸುವ ತಲೆಗಂದಾಯವನ್ನು ಕರಾರಿನ ಕೂಲಿಗಾರರು ಇಂದಿನವರೆಗೂ ತೆರುತ್ತಿದ್ದರಲ್ಲದೆ ದಕ್ಷಿಣ ಆಫ್ರಿಕದ ಭಾರತೀಯರ ಮತ್ತು ಹಿಂದೂಸ್ಥಾನದ ಭಾರತೀಯರ ಅಪಮಾನವೂ ಶಾಶ್ವತವಾಗಿ ನಿಂತುಹೋಗುತ್ತಿದ್ದಿತು.



# ೨೨

# ತುಲನಾತ್ಮಕದೃಷ್ಟಿಯಿಂದ ಧರ್ಮಗಳ ಜ್ಞಾನವನ್ನು ಪಡೆದುದು

ಜನರ ಸೇವೆಯಲ್ಲಿ ನಾನು ಸಂಪೂರ್ಣನಾಗಿ ಮಗ್ನನಾದೆನಷ್ಟೆ. ನಾನು ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕೆನ್ನುವ ಇಚ್ಛೆಯೇ ಇದಕ್ಕೆ ಕಾರಣ. ಸೇವೆಯ ಮೂಲಕವೇ ದೇವರ ಸಾನ್ನಿಧ್ಯವನ್ನು ಪಡೆಯುವುದು ಸಾಧ್ಯವೆಂದು ನನಗೆ ತೋರಿದುದರಿಂದ ಸೇವಾಧರ್ಮವನ್ನೇ ನನ್ನ ಧರ್ಮವನ್ನಾಗಿ ಮಾಡಿಕೊಂಡಿದ್ದೆನು. ನನ್ನ ದೃಷ್ಟಿಯಲ್ಲಿ ಸೇವೆಯೆಂದರೆ ಭಾರತದೇಶದ ಸೇವೆಯಾಗಿದ್ದಿತು. ಏಕೆಂದರೆ ಇದು ನಾನು ಕೇಳದೆ ತಾನಾಗಿಯೇ ನನ್ನ ಜೀವನದಲ್ಲಿ ಪ್ರವೇಶಿಸಿತು. ಇದು ನನ್ನ ಸ್ವಭಾವಕ್ಕೆ ಅನುಗುಣವಾಗಿದ್ದಿತು. ನಾನು ಕಾಠ್ಯವಾಡದ ಪಿತೂರಿಗಳಿಂದ ದೂರವಾಗಿರಲು ಮತ್ತು ನನ್ನ ಜೀವನವನ್ನು ಸಂಪಾದಿಸಿಕೊಳ್ಳಲು ದಕ್ಷಿಣ ಆಫ್ರಿಕಕ್ಕೆ ಹೋಗಿದ್ದೆನು. ಆದರೆ ಮೇಲೆ ಹೇಳಿದಂತೆ ಈಶ್ವರನನ್ನು ಅರಸುವುದರಲ್ಲಿಯೂ ಆತ್ಮಸಾಕ್ಷಾತ್ಕಾರವನ್ನು ಸಾಧಿಸುವುದರಲ್ಲಿಯೂ ನಾನು ತೊಡಗಿದ್ದೆನು.

ಈಸಾಯಿಮಿತ್ರರು ನನಗೆ ಜ್ಞಾನಾರ್ಜನೆಯಲ್ಲಿದ್ದ ಆಸಕ್ತಿಯನ್ನು ತೃಪ್ತಿಪಡಿಸುವುದು ಅಸಾಧ್ಯವಾಗಿದ್ದಿತೆಂದು ಹೇಳಬಹುದು. ಒಂದು ವೇಳೆ ನಾನು ಇವುಗಳಲ್ಲಿ ಆಸಕ್ತಿಯಿಟ್ಟುಕೊಳ್ಳಬಾರದೆಂದು ಇಚ್ಛಿಸಿದ್ದರೂ ಅವರು ನನ್ನನ್ನು ಸುಮ್ಮನೆ ಬಿಡುವಹಾಗಿರಲಿಲ್ಲ. ಡರ್ಬನಿನಲ್ಲಿ ದಕ್ಷಿಣ ಆಫ್ರಿಕದ ಜನರಲ್ ಮಿಷನಿನ ಮುಖ್ಯಸ್ಥರಾದ ಸ್ಪೆನ್ಸರ್ ವಾಲ್ಟನರ ದೃಷ್ಟಿಯು ನನ್ನಮೇಲೆ ಬಿದ್ದಿತು. ನಾನು ಅವರ ಕುಟುಂಬಕ್ಕೆ ಸೇರಿದವನಂತೆ ಆದೆನು. ಪ್ರಿಟೋರಿಯಾದಲ್ಲಿ ಈಸಾಯಿಗಳ ಸಂಪರ್ಕವೇ ಈ ಪರಿಚಯಕ್ಕೆ ಕಾರಣವೆಂದು ಹೊಸದಾಗಿ ಹೇಳಬೇಕಾದುದಿಲ್ಲ. ಮಿ. ವಾಲ್ಟನರ ರೀತಿಯೇ ಒಂದು ವಿಧವಾಗಿದ್ದಿತು. ಈಸಾಯಿಮಿತ್ರ

ವನ್ನು ಸ್ವೀಕರಿಸೆಂದು ಅವರು ನನಗೆ ಯಾವಾಗಲೂ ಹೇಳಿದುದು ನನಗೆ ನೆನಪಿಲ್ಲ. ಆದರೆ ಅವರು ತಮ್ಮ ಜೀವನವನ್ನೆಲ್ಲಾ ಬಿಚ್ಚಿದ ಓಲೆಯಂತೆ ನನ್ನ ಮುಂದೆ ಇಟ್ಟರು; ತಮ್ಮ ನಡೆನುಡಿಗಳನ್ನೆಲ್ಲಾ ನಾನು ಲೆಕ್ಕಿಸುವಂತೆ ಮಾಡಿದರು. ಅವರ ಹೆಂಡತಿಯು ಸೌಮ್ಯಪ್ರಕೃತಿಯ ಮತ್ತು ಕುಶಲರಾದ ಮಹಿಳೆಯಾಗಿದ್ದರು. ನಾನು ಈ ದಂಪತಿಗಳ ರೀತಿಯನ್ನು ಮೆಚ್ಚಿದೆನು. ನಮ್ಮ ಮಧ್ಯೆ ಮುಖ್ಯಾಂಶಗಳಲ್ಲಿ ಇದ್ದ ವ್ಯತ್ಯಾಸವು ನಮಗೆ ಗೊತ್ತಿದ್ದಿತು. ಇದು ಎಷ್ಟು ಚರ್ಚೆಯಿಂದಲೂ ಅಳಿಸಿಹೋಗುವಹಾಗಿರಲಿಲ್ಲ. ಸಹನೆಯೂ ಮನಸ್ಸಿನ ಔದಾರ್ಯವೂ ಸತ್ಯವೂ ಇರುವಕಡೆ ಇಂತಹ ವ್ಯತ್ಯಾಸಗಳು ಕೂಡ ಸಹಾಯಕವಾಗುತ್ತವೆ. ಈ ದಂಪತಿಗಳ ನಮ್ರತೆ, ಕೆಲಸದಲ್ಲಿರುವ ಶ್ರದ್ಧೆ ಮತ್ತು ತಾಳ್ಮೆಗಳನ್ನು ನೋಡಿ ನನಗೆ ಸಂತೋಷವಾಗುತ್ತಿದ್ದಿತು. ನಾವು ಹಗಲೆಲ್ಲಾ ಸೇರುತ್ತಿದ್ದೆವು.

ಈ ಸ್ನೇಹವು ನನಗೆ ಧರ್ಮದಲ್ಲಿದ್ದ ಆಸಕ್ತಿಯನ್ನು ಕುಂದದಂತೆ ಇಟ್ಟಿತು. ಧರ್ಮವಿಚಾರದ ಅಭ್ಯಾಸಕ್ಕಾಗಿ ಪ್ರಿಟೋರಿಯಾದಲ್ಲಿ ಸಿಕ್ಕುತ್ತಿದ್ದಹಾಗೆ ಈಗ ವಿರಾಮವು ದೊರಕುವುದು ಅಸಾಧ್ಯವಾಗಿದ್ದಿತು. ಆದರೆ ನನಗೆ ದೊರಕಿದ ಅಲ್ಪಸ್ವಲ್ಪ ಕಾಲವನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸುತ್ತಿದ್ದೆನು. ಧರ್ಮಸಂಬಂಧವಾದ ನನ್ನ ಪತ್ರವ್ಯವಹಾರವು ಇನ್ನೂ ನಡೆಯುತ್ತಲೇ ಇದ್ದಿತು. ರಾಯಚಂದಭಾಯಿಯವರು ನನಗೆ ದಾರಿಯನ್ನು ತೋರಿಸುತ್ತಿದ್ದರು. ಯಾರೋ ಒಬ್ಬ ಮಿತ್ರನು ನನಗೆ ನರ್ಮದಾಶಂಕರರ "ಧರ್ಮವಿಚಾರ" ಎಂಬ ಪುಸ್ತಕವನ್ನು ಕಳುಹಿಸಿಕೊಟ್ಟನು. ಅದರ ಪೀಠಿಕೆಯಿಂದ ನನಗೆ ಬಹಳ ಸಹಾಯವಾಯಿತು. ಒಂದುಕಡೆ ನಿಲ್ಲದೆ ತಿರುಗುತ್ತಾ ಇದ್ದ ಆತನ ಜೀವನದ ವಿಚಾರವನ್ನು ನಾನು ಕೇಳಿದ್ದೆನು. ತನ್ನ ಧರ್ಮಸಂಬಂಧವಾದ ಅಭ್ಯಾಸದಿಂದ ಆತನ ಜೀವನವು ಮಾರ್ಪಟ್ಟ ವಿಚಾರವಾಗಿ ಪೀಠಿಕೆಯಲ್ಲಿದ್ದ ವರ್ಣನೆಯು ನನ್ನ ಮನಸ್ಸನ್ನು ಸೆಳೆಯಿತು. ಈ ಪುಸ್ತಕದಮೇಲೆ ಇಷ್ಟವುಂಟಾಗಿ ನಾನು ಅದನ್ನು ಮೊದಲಿನಿಂದ ಕೊನೆಯವರೆಗೂ ಲಕ್ಷ್ಯವಿಟ್ಟು ಓದಿದೆನು. ಮ್ಯಾಕ್ಸ್‌ಮುಲ್ಲರರ "ಇಂಡಿಯಾ—ಇದರಿಂದ ನಾವು ಕಲಿತುಕೊಳ್ಳತಕ್ಕುದೇನು?" ಎಂಬ ಪುಸ್ತಕವನ್ನೂ ಬ್ರಹ್ಮಜ್ಞಾನಮಂಡಲ (ಥಿಯಸಾಫಿ

ಕಲ್ ಸೊಸೈಟಿ)ದವರು ಪ್ರಕಟಿಸಿರುವ ಉಪನಿಷತ್ತುಗಳ ಭಾಷಾಂತರವನ್ನೂ ಆಸಕ್ತಿಯಿಂದ ಓದಿದೆನು. ಇದೆಲ್ಲದರಿಂದ ನನಗೆ ಹಿಂದೂಧರ್ಮದಲ್ಲಿ ಅಭಿಮಾನ ಹೆಚ್ಚಿತಲ್ಲದೆ ಅದರ ಸೌಂದರ್ಯವು ವ್ಯಕ್ತವಾಗುತ್ತಾ ಬಂದಿತು. ಆದರೆ ಇದರಿಂದ ನನಗೆ ಇತರ ಮತಗಳಮೇಲೆ ತಾತ್ಸಾರವುಂಟಾಗಲಿಲ್ಲ. ವಾಷಿಂಗ್‌ಟನ್ ಇರ್ವಿಂಗನ "ಮಹಮ್ಮದ್ ಮತ್ತು ಆತನ ಉತ್ತರಾಧಿಕಾರಿಗಳು" ಎಂಬ ಪುಸ್ತಕವನ್ನೂ ಕಾರ್ಲೈಲನು ಬರೆದಿರುವ ಮಹಮದನ ಪ್ರಶಂಸೆಯನ್ನೂ ಓದಿದೆನು. ಪುಸ್ತಕಗಳಿಂದ ನನಗೆ ಮಹಮದನಲ್ಲಿ ಒಳ್ಳೆಯ ಅಭಿಪ್ರಾಯವುಂಟಾಯಿತು ಇವಲ್ಲದೆ "ಜಾರಥೂಷ್ಟ್ರನ ವಚನಗಳು" ಎಂಬ ಪುಸ್ತಕವನ್ನೂ ಓದಿದೆನು.

ಈ ರೀತಿಯಾಗಿ ಬೇರೆಬೇರೆ ಧರ್ಮಗಳ ಜ್ಞಾನವನ್ನು ವೃದ್ಧಿಪಡಿಸಿಕೊಂಡೆನು. ಇದರಿಂದ ನನ್ನ ಆತ್ಮ ಪರಾಮರ್ಶವು ಬಲಪಟ್ಟಿತಲ್ಲದೆ ಈ ಅಭ್ಯಾಸದಲ್ಲಿ ಸರಿಯಾಗಿ ಕಂಡುಬಂದುದನ್ನೆಲ್ಲಾ ನನ್ನ ನಡತೆಯಲ್ಲಿ ತೋರಿಸುವ ಅಭ್ಯಾಸವು ಬೆಳೆಯಿತು. ಈ ರೀತಿಯಾಗಿ ನಾನು ಹಿಂದೂ ಪುಸ್ತಕಗಳನ್ನು ಓದಿದುದರಿಂದ ತಿಳಿದಮಟ್ಟಿಗೆ ಯೋಗಾಭ್ಯಾಸಮಾಡಲು ಪ್ರಾರಂಭಿಸಿದೆನು. ಆದರೆ ಇದರಲ್ಲಿ ಬಹುದೂರ ಹೋಗುವುದಕ್ಕಾಗಲಿಲ್ಲ. ಆದುದರಿಂದ ನಾನು ಹಿಂದೂಸ್ಥಾನಕ್ಕೆ ಹಿಂತಿರುಗಿದಮೇಲೆ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವವರ ಸಹಾಯದಿಂದ ಅಭ್ಯಾಸಮಾಡಬೇಕೆಂದು ನಿಶ್ಚಯಿಸಿದೆನು. ಆದರೆ ಈ ಇಚ್ಛೆಯು ಇಂದಿನವರೆಗೂ ಕೈಗೂಡಿಲ್ಲ.

ಟಾಲಸ್ಟಾಯರ ಪುಸ್ತಕಗಳನ್ನೂ ನಾನು ಸೂಕ್ಷ್ಮವಾಗಿ ಓದಿದೆನು. 'ಯೇಸುವಿನ ಬೋಧನೆಯ ಸಾರಾಂಶ', 'ಮಾಡತಕ್ಕುದೇನು?' ಮುಂತಾದ ಪುಸ್ತಕಗಳು ನನ್ನ ಮನಸ್ಸಿನಲ್ಲಿ ಚೆನ್ನಾಗಿ ನಾಟಿದುವು. ವಿಶ್ವಪ್ರೇಮದ ಅನಂತಶಕ್ತಿಯು ನನಗೆ ಚೆನ್ನಾಗಿ ಗೊತ್ತಾಗುತ್ತಾ ಬಂದಿತು.

ಸುಮಾರು ಇದೇ ಸಮಯದಲ್ಲಿ ನನಗೆ ಇನ್ನೊಂದು ಈಸಾಯಿ ಕುಟುಂಬದ ಸಂಪರ್ಕವುಂಟಾಯಿತು. ಅವರ ಸೂಚನೆಯ ಮೇರೆಗೆ

ನಾನು ಪ್ರತಿಭಾನುವಾರವೂ ವೆಸ್ಲಿಯನ್ ಪ್ರಾರ್ಥನಾಮಂದಿರ (ಚರ್ಚ್) ಕ್ಕೆ ಹೋಗುತ್ತಿದ್ದೆನು. ಆ ದಿನಗಳೆಲ್ಲಾ ಅವರ ಮನೆಗೆ ಊಟಕ್ಕೆ ಬರಬೇಕೆಂದೂ ಕರೆದಿದ್ದರು. ಪ್ರಾರ್ಥನಾಮಂದಿರದ ವಿಷಯದಲ್ಲಿ ನನಗೆ ಒಳ್ಳೆಯ ಅಭಿಪ್ರಾಯವೇನೂ ಉಂಟಾಗಲಿಲ್ಲ. ಅಲ್ಲಿನ ಉಪನ್ಯಾಸಗಳು ಸ್ಫೂರ್ತಿಯುಂಟುಮಾಡುವವುಗಳಾಗಿ ಕಾಣಲಿಲ್ಲ. ಅಲ್ಲಿ ನೆರೆದಿದ್ದವರಿಗೆ ಧರ್ಮದ ವಿಷಯದಲ್ಲಿ ಅಷ್ಟೇನೂ ಶ್ರದ್ಧೆಯಿದ್ದಂತೆ ತೋರಲಿಲ್ಲ. ಅದು ಭಕ್ತಿಭಾವದಿಂದ ಕೂಡಿದ ಮಂಡಲಿಯಾಗಿರಲಿಲ್ಲ. ಅವರು ಬೇಸರವನ್ನು ಕಳೆದುಕೊಳ್ಳುವುದಕ್ಕಾಗಿಯೂ ವಾಡಿಕೆಯನ್ನನುಸರಿಸುವುದಕ್ಕಾಗಿಯೂ ಚರ್ಚಿಗೆ ಹೋಗತಕ್ಕ ಲೌಕಿಕ ಮನಸ್ಸುಳ್ಳ ಜನರಂತೆಯೇ ತೋರುತ್ತಿದ್ದರು. ಅಲ್ಲಿ ಒಂದೊಂದುಸಲ ನನಗೆ ಮೈಮರೆತು ನಿದ್ದೆಬಂದುಬಿಡುತ್ತಿದ್ದಿತು. ಇದರಿಂದ ನನಗೆ ನಾಚಿಕೆಯಾಗುತ್ತಿದ್ದಿತು. ಆದರೆ ನನ್ನ ಸುತ್ತಮುತ್ತಲಿದ್ದ ಕೆಲವರ ಸ್ಥಿತಿಯೂ ಇದೇ ಆಗಿರುತ್ತಿದ್ದಿತಾದುದರಿಂದ ನನಗೆ ಅಷ್ಟೇನೂ ನಾಚಿಕೆಗೆ ಅವಕಾಶವಿರಲಿಲ್ಲ. ಈರೀತಿಯಾಗಿ ಬಹಳದಿನ ಇರಲು ನನಗೆ ಸಾಧ್ಯವಾಗಲಿಲ್ಲ. ಕೆಲವುದಿನಗಳಲ್ಲಿಯೇ ಅಲ್ಲಿಗೆ ಹೋಗುವುದನ್ನು ಬಿಟ್ಟುಬಿಟ್ಟೆನು.

ನಾನು ಪ್ರತಿ ಭಾನುವಾರವೂ ನೋಡುವುದಕ್ಕೆ ಹೋಗುತ್ತಿದ್ದ ಕುಟುಂಬದೊಡನೆ ನನ್ನ ಸಂಬಂಧವು ಇದ್ದಕ್ಕಿದ್ದಹಾಗೆಯೇ ತಪ್ಪಿಹೋಯಿತು. ವಸ್ತುತಃ ಅವರು ನನಗೆ ಬರಬೇಡವೆಂದು ತಿಳಿಸಿದರೆಂದೇ ಹೇಳಬಹುದು. ಅದುನಡೆದುದು ಹೀಗೆ:—ಆ ಮನೆಯ ಯಜಮಾನಿಯು ಒಳ್ಳೆಯವರೂ ಸರಳಸ್ವಭಾವದವರೂ ಆಗಿದ್ದರು. ಆದರೆ ಸ್ವಲ್ಪ ಸಣ್ಣಮನಸ್ಸು. ನಾವು ಯಾವಾಗಲೂ ಧರ್ಮಸಂಬಂಧವಾದ ಚರ್ಚೆಯನ್ನು ಮಾಡುತ್ತಿದ್ದೆವು. ನಾನು ಆಗ ಆರ್ನಾಲ್ಡರ "ಏಷಿಯದ ಜ್ಯೋತಿ" ಎಂಬ ಪುಸ್ತಕವನ್ನು ಪುನಃ ಓದುತ್ತಿದ್ದೆನು. ಒಂದುಸಲ ನಾವು ಯೇಸುವಿನ ಜೀವನವನ್ನೂ ಬುದ್ಧನ ಜೀವನವನ್ನೂ ಹೋಲಿಸುವುದಕ್ಕೆ ಮೊದಲು ಮಾಡಿದೆವು. ನಾನು "ಗೌತಮನ ಕನಿಕರವನ್ನು ನೋಡಿ! ಅದು ಮನುಷ್ಯರಷ್ಟಕ್ಕೇ ನಿಲ್ಲಲಿಲ್ಲ, ಸಕಲ ಜೀವಜಂತುಗಳಮೇಲೂ ಹರಡಿತು. ಆತನ ಭುಜದಮೇಲೆ ಆನಂದದಿಂದ ಕುಳಿತಿದ್ದ ಆಡಿನ ಮರಿಯನ್ನು

ನೆನಪಿಗೆ ತಂದುಕೊಂಡರೆ ನಮ್ಮ ಹೃದಯವು ಪ್ರೇಮಭಾವದಿಂದ ತುಂಬಿ ತುಳುಕುವುದಿಲ್ಲವೆ! ಸಕಲ ಪ್ರಾಣಿಗಳ ಮೇಲೂ ಈರೀತಿಯಾಗಿ ಪ್ರೇಮವನ್ನಿಟ್ಟಿರುವುದು ಯೇಸುವಿನಲ್ಲಿ ಕಾಣಬರುವುದಿಲ್ಲ." ಎಂದೆನು. ಈ ಹೋಲಿಕೆಯನ್ನು ಕೇಳಿ ಆಕೆಗೆ ವ್ಯಾಕುಲವಾಯಿತು. ಆಕೆಯ ಚಿತ್ತವೃತ್ತಿಯು ನನಗೆ ತಿಳಿಯಿತು. ನಾನು ಆ ಮಾತನ್ನು ಅಲ್ಲಿಗೇ ನಿಲ್ಲಿಸಿದೆನು. ನಾವು ಊಟದ ಮನೆಗೆ ಹೋದೆವು. ಇನ್ನೂ ಐದು ವರ್ಷ ತುಂಬದ ಆಕೆಯ ಮುದ್ದುಮಗನೂ ನಮ್ಮ ಜೊತೆಯಲ್ಲಿದ್ದನು. ಮಕ್ಕಳ ಮಧ್ಯದಲ್ಲಿರುವಾಗ ಆಗುವಷ್ಟು ಆನಂದವು ನನಗೆ ಇನ್ನಾವಾಗಲೂ ಆಗುವುದಿಲ್ಲ. ಈ ಹುಡುಗನೂ ನಾನೂ ಬಹು ಕಾಲದಿಂದ ಸ್ನೇಹಿತರಾಗಿದ್ದೆವು. ನಾನು ಅವನ ತಟ್ಟೆಯಮೇಲಿದ್ದ ಮಾಂಸವನ್ನು ಹೀನಾಯಮಾಡಿ ನನ್ನ ತಟ್ಟೆಯಮೇಲಿದ್ದ ಸೇಬಿನ ಹಣ್ಣನ್ನು ಬಹುವಾಗಿ ಹೊಗಳಿದೆನು. ಏನೂ ಅರಿಯದ ಆ ಹುಡುಗನ ಮನಸ್ಸಿಗೆ ಇದು ನಾಟಿ ಅವನೂ ನನ್ನ ಜೊತೆಗೆ ಹಣ್ಣನ್ನು ಹೊಗಳತೊಡಗಿದನು.

ಆದರೆ ತಾಯಿಯೋ? ಆಕೆಯು ಗಾಬರಿಯಾದಳು.

ನಾನು ಎಚ್ಚರಗೊಂಡೆನು. ಆ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಬೇರೆ ವಿಚಾರವನ್ನು ತೆಗೆದೆನು. ಮುಂದಿನವಾರ ಯಥಾಪ್ರಕಾರ ಅವರ ಮನೆಗೆ ಹೋದೆನು. ಆದರೆ ಮನಸ್ಸಿನಲ್ಲಿ ಅಧೈರ್ಯವಿಲ್ಲದೆ ಇರಲಿಲ್ಲ. ಅಲ್ಲಿಗೆ ಹೋಗದೆ ನಿಲ್ಲಬೇಕೆಂದೂ ತೋರಲಿಲ್ಲ. ಹಾಗೆ ನಿಲ್ಲುವುದು ಸರಿಯೆಂದೂ ತೋರಲಿಲ್ಲ. ಆದರೆ ಆಕೆಯು ನನ್ನ ಮಾರ್ಗವನ್ನು ಸುಲಭಮಾಡಿದರು.

ಆಕೆಯು "ಗಾಂಧಿಯವರೇ" ನಿಮ್ಮ ಸಹವಾಸದಿಂದ ನನ್ನ ಮಗನಿಗೆ ಏನೂ ಒಳ್ಳೆತಾಗುವುದಿಲ್ಲವೆಂದು ನಾನು ಹೇಳಿದರೆ ನೀವು ಏನೂ ತಿಳಿದುಕೊಳ್ಳಕೂಡದು. ದಿನವೂ ನೀವು ಹೇಳಿದ ಕಾರಣಗಳನ್ನೇ ಹೇಳಿ ಮಾಂಸ ತಿನ್ನುವುದಕ್ಕೆ ಹಿಂಜರಿದು ಹಣ್ಣು ಬೇಕೆಂದು ಕೇಳುತ್ತಾನೆ. ಇದನ್ನು ತಡೆಯಲಾಗುವುದಿಲ್ಲ. ಅವನು ಮಾಂಸವನ್ನು ಬಿಡುವುದರಿಂದ ಕಾಹಿಲೆ ಬೀಳದಿದ್ದರೆ ಅವನಿಗೆ ನಿಶ್ಶಕ್ತಿಯಾದರೂ ಉಂಟಾಗುತ್ತದೆ. ಇದನ್ನು ನಾನು ಸಹಿಸುವುದು ಹೇಗೆ? ಇನ್ನುಮೇಲೆ ನೀವು ಚರ್ಚಿಸಬೇ

ಕಾದರೆ ದೊಡ್ಡವರಾದ ನನ್ನೊಡನೆ ಚರ್ಚೆಮಾಡಬೇಕು. ಇಂತಹ ಚರ್ಚೆಯಿಂದ ಹುಡುಗರಿಗೆ ಖಂಡಿತ ಕೇಡುಂಟಾಗುತ್ತದೆ." ಎಂದರು.

"....ವರೆ, ನಾನು ದುಃಖಪಡುತ್ತೇನೆ. ನನಗೂ ಮಕ್ಕಳಿರುವುದರಿಂದ ನಿಮ್ಮ ಮಗನ ಸಲುವಾಗಿ ನೀವು ಚಿಂತಿಸುವುದು ನನಗೆ ಗೊತ್ತಾಗುತ್ತದೆ. ನಾವು ಬಹು ಸುಲಭವಾಗಿ ಈಗಿನ ದುಃಸ್ಥಿತಿಯನ್ನು ಹೋಗಲಾಡಿಸ ಬಹುದು. ನನ್ನ ಮಾತಿಗಿಂತ ನಾನು ಏನನ್ನು ತಿನ್ನುತ್ತೇನೆ, ಏನನ್ನು ತಿನ್ನು ವುದಿಲ್ಲ ಎಂಬುದನ್ನು ನೋಡುವುದರಿಂದ ಈ ಮಗುವಿನಮೇಲೆ ಹೆಚ್ಚು ಪರಿಣಾಮವುಂಟಾಗುತ್ತದೆ. ಆದುದರಿಂದ ನಾನು ಇಲ್ಲಿ ಬರುವುದನ್ನು ನಿಲ್ಲಿಸುವುದೇ ಎಲ್ಲಕ್ಕಿಂತ ಒಳ್ಳೆಯ ಉಪಾಯ. ಇದರಿಂದ ನಮ್ಮ ಮೈತ್ರಿಗೆ ಕುಂದುಂಟಾಗಬೇಕಾದುದೇನೂ ಇಲ್ಲ." ಎಂದೆನು.

ನನಗೆ ಕಂಡಂತೆಯೆ ಆಕೆಯ ಮನಸ್ಸಿನ ಮೇಲಿನ ಭಾರವು ಹೋಗಿ ಆಕೆಯು " ನಾನು ನಿಮಗೆ ಕೃತಜ್ಞಳು." ಎಂದರು.



೨೩

## ಮನೆಯ ಯಜಮಾನನಾಗಿ

ಸಂಸಾರವನ್ನು ಹೂಡುವುದು ನನಗೇನೂ ಹೊಸ ಅನುಭವವಾಗಿರಲಿಲ್ಲ. ಆದರೆ ನಾನು ಮುಂಬಯಿ ಮತ್ತು ಲಂಡನಿನಲ್ಲಿ ಸಂಸಾರ ನಡೆಸಿದುದಕ್ಕೂ ಇಲ್ಲಿ ನಡೆಸುವುದಕ್ಕೂ ವ್ಯತ್ಯಾಸವಿದ್ದಿತು. ಈ ಸಲ ದೊಡ್ಡಸ್ತಿಕೆಗಾಗಿಯೇ ಬೇರೆ ವೆಚ್ಚವಾಗುತ್ತಿದ್ದಿತು. ನೇಟಾಲಿನಲ್ಲಿ ಒಬ್ಬ ಭಾರತೀಯ ವಕೀಲನ ಮತ್ತು ಭಾರತೀಯರ ಪ್ರತಿನಿಧಿಯ ಯೋಗ್ಯತೆಗೆ ತಕ್ಕಂತೆ ಸಂಸಾರವನ್ನು ನಡೆಸಬೇಕೆಂದು ನಾನು ತಿಳಿದಿದ್ದೆನು. ಆದುದರಿಂದ ಒಳ್ಳೆಯ ಸ್ಥಳದಲ್ಲಿ ಅಂದವಾದ ಒಂದು ಸಣ್ಣ ಮನೆಯನ್ನು ಗೊತ್ತುಮಾಡಿದೆನು. ಅದಕ್ಕೆ ತಕ್ಕ ಸಾಮಾನುಗಳನ್ನು ಒದಗಿಸಿದುದಾಯಿತು. ನಾವು ಸಾದಾ ಆಹಾರವನ್ನು ತೆಗೆದುಕೊಳ್ಳುತ್ತಿದ್ದರೂ ನಾನು ಆಂಗ್ಲೇಯ ಸ್ನೇಹಿತರನ್ನೂ ಭಾರತೀಯ ಸಂಗಡಿಗರನ್ನೂ ಆಗಾಗ ಊಟಕ್ಕೆ ಕರೆಯುತ್ತಿದ್ದುದರಿಂದ ಈ ಭಾಗದ ವೆಚ್ಚವು ಯಾವಾಗಲೂ ಹೆಚ್ಚಾಗಿರುತ್ತಿದ್ದಿತು.

ಪ್ರತಿಯೊಂದು ಸಂಸಾರದಲ್ಲಿಯೂ ಒಳ್ಳೆಯ ಸೇವಕನು ಆವಶ್ಯಕ. ಆದರೆ ನನಗೆ ಯಾರನ್ನೇ ಆಗಲಿ ಸೇವಕನಂತೆ ಕಾಣುವ ಅಭ್ಯಾಸವೇ ಇಲ್ಲ.

ನನಗೆ ಜೊತೆಗಾರನಾಗಿಯೂ ಸಹಾಯಕನಾಗಿಯೂ ಒಬ್ಬ ಸ್ನೇಹಿತನೂ ಮತ್ತು ಸಂಸಾರಕ್ಕೆ ಸೇರಿದವನಂತೆಯೇ ಆಗಿದ್ದ ಒಬ್ಬ ಅಡಿಗೆಯವನೂ ಇದ್ದರು. ನನ್ನ ಕಚೇರಿಯ ಗುಮಾಸ್ತರು ನನ್ನ ಜೊತೆಯಲ್ಲಿಯೇ ಊಟಮಾಡುತ್ತ ಮತ್ತು ವಾಸಿಸುತ್ತ ಇದ್ದರು. ಈ ಪ್ರಯತ್ನದಲ್ಲಿ ನನಗೆ ತಕ್ಕಮಟ್ಟಿಗೆ ಫಲವುಂಟಾಯಿತೆಂದು ತೋರುತ್ತದೆಯಾದರೂ ಜೀವನದ ಕಟುವಾದ ಅನುಭವವಿಲ್ಲದೆ ಇರಲಿಲ್ಲ.

ನನ್ನ ಜೊತೆಗಾರನು ಬಹು ಬುದ್ಧಿವಂತನು. ಆತನು ಪ್ರಾಮಾಣಿಕನೆಂದೂ ನಾನು ತಿಳಿದುಕೊಂಡಿದ್ದೆನು. ಆದರೆ ಇದರಲ್ಲಿ ನಾನು ಮೋಸಹೋದೆನು. ಅವನು ನನ್ನ ಮನೆಯಲ್ಲೇ ಇದ್ದ ಒಬ್ಬ ಗುಮಾಸ್ತನ ಮೇಲೆ ಅಸೂಯೆಪಟ್ಟು ಅವನ ವಿಷಯದಲ್ಲಿ ಎಂತಹ ಕತೆಯನ್ನು ಹುಟ್ಟಿಸಿದನೆಂದರೆ ಅದರಿಂದ ಆ ಗುಮಾಸ್ತನ ಮೇಲೆ ನನಗೆ ಸಂಶಯವುಂಟಾಯಿತು. ಈ ಗುಮಾಸ್ತನು ಬಹು ಸ್ವತಂತ್ರಪ್ರಕೃತಿಯವನಾದ್ದರಿಂದ ನನಗೆ ತನ್ನ ಮೇಲೆ ಸಂಶಯ ಹುಟ್ಟಿತೆಂದು ತಿಳಿದೊಡನೆಯೇ ಆತನು ನನ್ನ ಮನೆಯನ್ನೂ ಕೆಲಸವನ್ನೂ ಒಟ್ಟಿಗೆ ಬಿಟ್ಟು ಬಿಟ್ಟನು. ಇದರಿಂದ ನನಗೆ ಸಂಕಟವುಂಟಾಯಿತು. ಒಂದುವೇಳೆ ನಾನು ಆತನಿಗೆ ಅನ್ಯಾಯ ಮಾಡಿರಬಹುದೆಂಬ ಯೋಚನೆಯು ಸದಾ ನನ್ನ ಮನಸ್ಸಿನಲ್ಲಿ ಕೊರೆಯುತ್ತಲೇ ಇದ್ದಿತು.

ಈ ಮುಖ್ಯ ಅಡಿಗೆಯವನು ಕೆಲವು ದಿನಗಳು ರಜಾ ಬೇಕೆಂದು ಕೇಳಿದನೋ ಅಥವಾ ಇನ್ನಾವ ಕಾರಣವೋ ನೆನಪಿಲ್ಲ, ಹೊರಟುಹೋದನು. ಆದುದರಿಂದ ಇವನಿಲ್ಲದಿರುವಾಗ ಬೇರೊಬ್ಬನನ್ನು ಗೊತ್ತುಮಾಡುವುದು ಆವಶ್ಯಕವಾಯಿತು. ಇವನು (ಈ ಎರಡನೇ ಅಡಿಗೆಯವನು) ಶುದ್ಧ ಪೋಕರಿಯೆಂದು ನನಗೆ ಆಮೇಲೆ ತಿಳಿಯಬಂದಿತು. ಆದರೆ ಇವನಿಂದ ನನಗೆ ಬಹಳ ಉಪಯೋಗವಾಯಿತೆಂದರೆ ಇವನು ನನ್ನ ಒಳಿತಿಗಾಗಿಯೇ ದೇವದೂತನಂತೆ ಬಂದನೆಂದು ಹೇಳಬಹುದು.

ತಾನು ಬಂದ ಎರಡು ಮೂರು ದಿನಗಳಲ್ಲಿಯೇ ಇವನು ನನಗೆ ತಿಳಿಯದಂತೆ ನನ್ನ ಮನೆಯಲ್ಲೇ ನಡೆಯುತ್ತಿದ್ದ ಅಕ್ರಮಘಟನೆಗಳನ್ನು ಕಂಡುಹಿಡಿದು ಈ ವಿಷಯವಾಗಿ ನನ್ನನ್ನು ಎಚ್ಚರಿಸಲು ಮನಸ್ಸುಮಾಡಿದನು. ವಿಚಾರಮಾಡದೆ ನಂಬುತ್ತಿದ್ದರೂ ನಾನು ಖಂಡಿತವಾದ ಮನುಷ್ಯನೆಂದು ಜನರು ತಿಳಿದುಕೊಂಡಿದ್ದರು. ಈ ಕಾರಣದಿಂದ ಅವನಿಗೆ ತಾನು ಕಂಡುಹಿಡಿದುದು ಇನ್ನೂ ಭಯಂಕರವಾಗಿ ಕಾಣಿಸಿತು.

ನಾನು ಪ್ರತಿದಿನವೂ ಮಧ್ಯಾಹ್ನ ಒಂದು ಗಂಟೆಗೆ ನನ್ನ ಕಚೇರಿಯಿಂದ ಮನೆಗೆ ಊಟಕ್ಕೆ ಹೋಗುತ್ತಿದ್ದೆನು. ಒಂದು ದಿವಸ ಸುಮಾರು ೧೨ ಗಂಟೆಯ ಹೊತ್ತಿನಲ್ಲಿ ಈ ಅಡಿಗೆಯವನು ಒಂದೇ ಉಸಿರಿನಲ್ಲಿ ನನ್ನ

ಒಳಗೆ ಓಡಿಬಂದು "ಬರುವಿರೋ? ಮನೆಗೆ ಬನ್ನಿ. ಅಕ್ರಮವು ನಡೆದು ಪ್ರೊಂದಿದ" ಎಂದು ಹೇಳಿದನು.

ನಾನು "ಹೇಗೆಂದರೇನು? ಅದೇನೆಂದು ಹೇಳಬೇಕು? ಅದನ್ನು ನೋಡುವುದಕ್ಕಾಗಿ ನಾನು ಈಗ ಕಚೇರಿಯನ್ನು ಹೇಗೆ ಬಿಟ್ಟು ಬರಲಿ?" ಎಂದು ಕೇಳಿದೆನು.

"ನೀವು ಬರದೆ ಇದ್ದರೆ ಇದಕ್ಕಾಗಿ ನೀವು ಆಮೇಲೆ ಪಶ್ಚಾತ್ತಾಪ ಪಡುತ್ತೀರಿ. ನಾನು ಇದಕ್ಕೆ ಹೆಚ್ಚಾಗಿ ಹೇಳಲಾರೆನು."

ಅವನ ರೀತಿಯಿಂದ ಅವನು ಹೇಳುವುದು ಸತ್ಯವೆಂದು ನನಗೆ ತೋರಿತು. ಒಬ್ಬ ಗುಮಾಸ್ತನನ್ನು ಸಂಗಡ ಕರೆದುಕೊಂಡು ನಾನು ಮನೆಗೆ ಹೊರಟೆನು. ಅಡಿಗೆಯವನು ನನ್ನ ಮುಂದೆ ಹೋದನು. ಅವನು ನನ್ನನ್ನು ನೆಟ್ಟಗೆ ಮಹಡಿಗೆ ಕರೆದುಕೊಂಡು ಹೋಗಿ ನನ್ನ ಮಿತ್ರನ ಕೊಠಡಿಯನ್ನು ತೋರಿಸಿ "ಇಲ್ಲಿ ಆ ಕೋಣೆಯ ಬಾಗಿಲನ್ನು ತೆಗೆದು ನೋಡಿರಿ!" ಎಂದನು.

ಆಗ ನನಗೆ ಗೊತ್ತಾಯಿತು. ನಾನು ಬಾಗಿಲನ್ನು ತಟ್ಟಿದೆನು. ಮಾತಿಲ್ಲ. ಗೋಡೆಗಳೇ ಅದರುವಂತೆ ಬಲವಾಗಿ ಬಾಗಿಲನ್ನು ಹೊಡೆದೆನು. ಬಾಗಿಲು ತೆರೆಯಿತು. ಒಳಗೆ ನೋಡಲು ಒಬ್ಬ ಸ್ತ್ರೀಯಿದ್ದಳು.

ನಾನು ಆಕೆಗೆ "ತಂಗೀ, ನೀನು ಇಲ್ಲಿಂದ ತೆರಳು. ಇನ್ನುಮೇಲೆ ಇಲ್ಲಿ ಕಾಲಿಡಬೇಡ." ಎಂದೆನು.

ನನ್ನ ಜೊತೆಗಾರನಿಗೆ "ಇಂದಿನಿಂದ ನಿನಗೂ ನನಗೂ ಯಾವ ಸಂಬಂಧವೂ ಇಲ್ಲ. ನಾನು ತೀರ ಮೋಸಹೋಗಿ ಬುದ್ಧಿಹೀನನಾದೆನು. ನಾನು ನಿನ್ನಲ್ಲಿಟ್ಟ ವಿಶ್ವಾಸಕ್ಕೆ ಇದೇ ಅಲ್ಲವೇ ನೀನು ನನಗೆ ಮಾಡಿದ ಉಪಕಾರ." ಎಂದೆನು.

ಜೊತೆಗಾರನು ಎಚ್ಚೆತ್ತುಕೊಳ್ಳುವುದಕ್ಕೆ ಬದಲಾಗಿ ಗರ್ವಾಂಧನಾಗಿ "ನಾನು ನಿನ್ನನ್ನು ಬಯಲಿಗೆ ಎಳೆಯುತ್ತೇನೆ" ಎಂದು ಹೆದರಿಸಿದನು.

ಅದಕ್ಕೆ ನಾನು "ನನ್ನಲ್ಲಿ ಮುಚ್ಚಿಟ್ಟುಕೊಳ್ಳುವುದೇನೂ ಇಲ್ಲ. ಅಂತಹ ವಿಷಯವೇನಾದರೂ ಇದರೆ ನೀನು ಆಗತ್ಯವಾಗಿ ಹೇಳಬಹುದು. ಆದರೆ ನೀನು ಈ ಕ್ಷಣವೇ ಬಿಟ್ಟುಹೋಗಬೇಕು." ಎಂದೆನು.

ಇದನ್ನು ಕೇಳಿ ಜೊತೆಗಾರನ ಅವಿವೇಕವು ಇನ್ನೂ ಹೆಚ್ಚಿತು. ಇದಕ್ಕೆ ಉಪಾಯವೇನೂ ಇರಲಿಲ್ಲ. ಆದುದರಿಂದ ನಾನು ಕೆಳಗೆ ಇರು ತಿದ್ದ ಗುಮಾಸ್ತನಿಗೆ "ಪೋಲೀಸ್ ಸೂಪರಿಂಟೆಂಡೆಂಟರ ಬಳಿಗೆ ಹೋಗಿ ಅವರಿಗೆ ನನ್ನ ವಂದನೆಗಳನ್ನು ತಿಳಿಸಿ ನನ್ನ ಜೊತೆಯಲ್ಲಿರುವ ಒಬ್ಬ ಮನು ಷ್ಯನು ದುರ್ನಡತೆಯಿಂದ ನಡೆದುಕೊಂಡಿದ್ದಾನೆಂದೂ ನನಗೆ ಅವನನ್ನು ಮನೆಯಲ್ಲಿ ಇಟ್ಟುಕೊಳ್ಳಲು ಇಷ್ಟವಿಲ್ಲದಿದ್ದರೂ ಅವನು ಹೋಗುವುದಿಲ್ಲ ವೆಂದು ಹಟ ಮಾಡುತ್ತಾನೆಂದೂ ಕೃಪೆಮಾಡಿ ನನಗೆ ಸಹಾಯಮಾಡಬೇ ಕೆಂದೂ ಅವರಿಗೆ ತಿಳಿಸು." ಎಂದೆನು.

ಇದನ್ನು ಕೇಳಿ ಅವನಿಗೆ ನಾನು ಹಿಂದೆ ಹೇಳಿದುದೇನೂ ಗೊಡ್ಡು ಬೆದ ರಿಕೆಯಲ್ಲವೆಂದು ಗೊತ್ತಾಯಿತು. ತಾನು ಅಪರಾಧಿಯೆಂಬ ಭಾವ ದಿಂದ ಅವನು ಸಡಲಿದನು. ನನ್ನ ಕ್ಷಮೆಯನ್ನು ಬೇಡಿ ಪೋಲೀಸಿನವ ರನ್ನು ಕರೆಸಕೂಡದೆಂದು ಕೇಳಿಕೊಂಡು ಒಡನೆಯೇ ಮನೆ ಬಿಡುವುದಕ್ಕೆ ಒಪ್ಪಿದನು. ಅದರಂತೆಯೇ ಹೊರಟೂ ಹೋದನು.

ಈ ಘಟನೆಯಿಂದ ನನ್ನ ಜೀವನಮಾನದಲ್ಲಿ ನನಗೆ ಸರಿಹೋದ ಕಾಲ ದಲ್ಲಿ ಎಚ್ಚರಿಕೆಯುಂಟಾಯಿತು. ಈ ಜೊತೆಗಾರನು ನನಗೆ ಮೋಹರೂಪ ವಾಗಿದ್ದನೆಂದೂ ನನ್ನ ಅನಿಷ್ಟಕ್ಕೆ ಕಾರಣನಾಗಿದ್ದನೆಂದೂ ಈಗ ನನಗೆ ಸ್ಪಷ್ಟವಾಗಿ ತಿಳಿಯಿತು. ಅವನಿಗೆ ಆಶ್ರಯಕೊಟ್ಟುದರಿಂದ ನಾನು ಒಳ್ಳೆಯ ಉದ್ದೇಶಕ್ಕಾಗಿ ಕೆಟ್ಟ ಸಾಧನವನ್ನು ಉಪಯೋಗಿಸಿದ್ದೆನು. ನಾನು ಬೇವಿನ ಮರದಲ್ಲಿ ಮಾವಿನ ಹಣ್ಣನ್ನು ಬೆಳೆಯುವ ಆಸೆಯನ್ನಿಟ್ಟು ಕೊಂಡಿದ್ದೆನು. ನನ್ನ ಜೊತೆಗಾರನ ನಡತೆಯು ಸರಿಯಾಗಿರಲಿಲ್ಲವೆಂದು ನನಗೆ ಗೊತ್ತಿದ್ದರೂ ಅವನು ನನ್ನ ವಿಶ್ವಾಸಕ್ಕೆ ಅರ್ಹನೆಂದುಕೊಂಡಿದ್ದೆನು ಅವನನ್ನು ತಿದ್ದುವ ಪ್ರಯತ್ನದಲ್ಲಿ ನಾನೇ ಹಾಳಾಗುವುದರಲ್ಲಿದ್ದೆನು. ನನ್ನ ಹಿತೈಷಿಗಳ ಸಲಹೆಯನ್ನು ಲಕ್ಷ್ಯಮಾಡಿರಲಿಲ್ಲ. ಮೋಹವು ನನ್ನನ್ನು ಪೂರ್ತಿಯಾಗಿ ಕುರುಡನನ್ನಾಗಿ ಮಾಡಿದ್ದಿತು.

ಮೇಲೆ ಹೇಳಿದಪ್ರಕಾರವಾಗಿ ದೈವಯೋಗದಿಂದ ನನ್ನ ಕಣ್ಣು ತಿಳಿಯದಿದ್ದರೆ ನನಗೆ ಸತ್ಯಾಂಶವೇ ತಿಳಿಯುತ್ತಿರಲಿಲ್ಲ. ಮತ್ತು ನಾನು ಆ ಜೊತೆಗಾರನ ಮಾಟಕ್ಕೆ ಸಿಕ್ಕಿದ್ದುದರಿಂದ ಆಗ ನಾನು ಪ್ರಾರಂಭಿಸಿದ ಸಂಗರಹಿತಜೀವನವನ್ನು ನಡೆಸುವುದಕ್ಕಾಗುತ್ತಿರಲಿಲ್ಲ. ಅವನ ಸಲುವಾಗಿ ನಾನು ಸದಾ ಕಾಲವನ್ನು ಕಳೆಯುತ್ತಿರುತ್ತಿದ್ದೆನು. ಅವನಿಗೆ ನನ್ನನ್ನು ಕತ್ತಲಲ್ಲಿಟ್ಟು ಕೆಟ್ಟದಾರಿಗೆ ಎಳೆಯುವ ಶಕ್ತಿಯಿದ್ದಿತು.

ಎಂದಿನಂತೆ ರಾಮನು ನನ್ನ ರಕ್ಷಣೆಗೆ ಬಂದನು. ನನ್ನ ಅಂತಃಕರಣವು ಶುದ್ಧವಾಗಿದ್ದಿತು. ಆದುದರಿಂದ ನನ್ನಲ್ಲಿ ತಪ್ಪುಗಳಿದ್ದರೂ ನಾನು ಪಾರಾದೆನು. ಈ ತಾರುಣ್ಯದ ಅನುಭವದಿಂದ ನಾನು ಸಂಪೂರ್ಣವಾಗಿ ಎಚ್ಚರಗೊಂಡನು.

ಅಡಿಗೆಯವನು ದೇವರು ಕಳುಹಿಸಿಕೊಟ್ಟ ದೂತನಾಗಿದ್ದನೆಂದು ಹೇಳಬಹುದು. ಅವನಿಗೆ ಅಡಿಗೆ ಮಾಡುವುದಕ್ಕೆ ಬರುತ್ತಿರಲಿಲ್ಲ. ಆದುದರಿಂದ ಅವನು ನನ್ನ ಮನೆಯಲ್ಲಿ ಅಡಿಗೆಯವನಾಗಿ ನಿಲ್ಲಲಾಗುತ್ತಿರಲಿಲ್ಲ. ಆದರೆ ಅವನ ಹೊರತು ಬೇರೊಬ್ಬರೂ ನನ್ನ ಕಣ್ಣನ್ನು ತೆರೆಯಲಾಗುತ್ತಿರಲಿಲ್ಲ. ಈ ಹೆಂಗಸನ್ನು ನನ್ನ ಮನೆಗೆ ಕರೆದುಕೊಂಡು ಬಂದುದು ಇದೇ ಮೊದಲನೆಯದಲ್ಲವೆಂದು ನನಗೆ ಆಮೇಲೆ ತಿಳಿಯಬಂದಿತು. ಆಕೆಯು ಇದಕ್ಕೆ ಮುಂಚೆ ಅನೇಕಸಲ ಬಂದಿದ್ದಳು. ಆದರೆ ಈ ಅಡಿಗೆಯವನ ಹಾಗೆ ಧೈರ್ಯವು ಇನ್ನಾರಿಗೂ ಇರಲಿಲ್ಲ. ಏಕೆಂದರೆ ಈ ಜೊತೆಗಾರನಲ್ಲಿ ನಾನು ಕುರುಡನಂತೆ ವಿಶ್ವಾಸವಿಟ್ಟಿದ್ದೆನೆಂದು ಎಲ್ಲರಿಗೂ ಗೊತ್ತಿದ್ದಿತು. ನನಗೆ ಇಷ್ಟರಮಟ್ಟಿನ ಉಪಕಾರವನ್ನು ಮಾಡುವುದಕ್ಕಾಗಿಯೇ ಈ ಅಡಿಗೆಯವನು ನನಗೆ ಲಭಿಸಿದನೆನ್ನಬಹುದು. ಏಕೆಂದರೆ ಆ ಬಳಿಕವೇ ಅವನು ನನ್ನ ಮನೆಯನ್ನು ಬಿಟ್ಟುಹೋಗಲು ಅಪ್ಪಣೆ ಕೇಳಿದನು.

ಹೋಗುವಾಗ "ನನಗೆ ನಿಮ್ಮ ಮನೆಯಲ್ಲಿ ಇರುವುದಕ್ಕಾಗುವುದಿಲ್ಲ. ಬಹಳ ಸುಲಭವಾಗಿ ನಿಮ್ಮ ಮನಸ್ಸನ್ನು ತಿರುಗಿಸಬಹುದು. ಇದು ನನಗೆ ತಕ್ಕ ಸ್ಥಳವಲ್ಲ." ಎಂದು ಹೇಳಿದನು.

ನಾನು ಅವನನ್ನು ಇರು ಎಂದು ಒತ್ತಾಯ ಮಾಡಲಿಲ್ಲ.

ನನ್ನ ಮನಸ್ಸಿನಲ್ಲಿ ಆ ಗುಮಾಸ್ತನ ಮೇಲೆ ಶಂಕೆಯನ್ನು ಹುಟ್ಟಿಸಿದವನು ಈ ಜೊತೆಗಾರನಲ್ಲದೆ ಬೇರೆ ಯಾರೂ ಅಲ್ಲವೆಂದು ನನಗೆ ಈಗ ಗೊತ್ತಾಯಿತು. ನಾನು ಆತನಿಗೆ ಮಾಡಿದ ಅನ್ಯಾಯವನ್ನು ಸರಿಪಡಿಸಬೇಕೆಂದು ಬಹಳ ಪ್ರಯತ್ನಪಟ್ಟೆನು. ಆದರೆ ಆತನಿಗೆ ಸಂಪೂರ್ಣವಾಗಿ ಸಂತೋಷವನ್ನುಂಟುಮಾಡಲಾಗಲೇ ಇಲ್ಲ. ಈ ವಿಷಯವು ನನಗೆ ಸದಾ ವಿಷಾದವನ್ನುಂಟುಮಾಡುತ್ತದೆ. ಒಡೆದುಹೋದ ಮಡಿಕೆಯನ್ನು ಎಷ್ಟೇ ಚೆನ್ನಾಗಿ ಜೋಡಿಸಲಿ, ಅದು ಒಡೆದ ಮಡಕೆಯೇ!

---

## ೨೪

# ಸ್ವದೇಶ ಯಾತ್ರೆ

ಇಷ್ಟು ಹೊತ್ತಿಗೆ ನಾನು ದಕ್ಷಿಣ ಆಫ್ರಿಕದಲ್ಲಿರಲು ಮೊದಲುಮಾಡಿ ಮೂರು ವರ್ಷವಾಗಿತ್ತು. ನನಗೆ ಅಲ್ಲಿಯ ಜನರ ಪರಿಚಯವಾಗಿದ್ದಿತು. ಅವರಿಗೆ ನನ್ನ ಪರಿಚಯವೂ ಆಯಿತು. ನಾನು ದಕ್ಷಿಣ ಆಫ್ರಿಕದಲ್ಲಿ ಇನ್ನೂ ಬಹುದಿನದವರೆಗಿರಬೇಕೆಂದು ನನಗೆ ಗೊತ್ತಾಯಿತು. ಆದುದರಿಂದ ಹಿಂದೂಸ್ಥಾನಕ್ಕೆ ಹೋಗಿ ಬರಲು ಆರು ತಿಂಗಳ ರಜವನ್ನು ಕೇಳಿದೆನು. ನನ್ನ ವಕೀಲಿ ಕೆಲಸವು ಚೆನ್ನಾಗಿ ನಡೆಯುತ್ತಿದ್ದಿತೆಂದು ಹೇಳಬಹುದು. ನಾನು ಅಲ್ಲಿ ಇರುವುದರ ಆವಶ್ಯಕತೆಯು ಜನರಿಗೆ ತೋರಿಬರುತ್ತಿದ್ದಿತೆನ್ನುವುದು ನನಗೆ ಕಾಣುತ್ತಿದ್ದಿತು. ಆದುದರಿಂದ ನಾನು ನನ್ನ ಹೆಂಡತಿಮಕ್ಕಳನ್ನು ಕರೆದುಕೊಂಡುಬಂದು ದಕ್ಷಿಣ ಆಫ್ರಿಕದಲ್ಲಿ ಕುಟುಂಬದೊಡನೆ ವಾಸಿಸಬೇಕೆಂದು ನಿಶ್ಚಯಿಸಿದೆನು. ಅದೂ ಅಲ್ಲದೆ ಹಿಂದೂಸ್ಥಾನಕ್ಕೆ ಹೋಗುವುದರಿಂದ ಅಲ್ಲಿನ ಜನರು ದಕ್ಷಿಣ ಆಫ್ರಿಕದ ಭಾರತೀಯರ ಪರಿಸ್ಥಿತಿಯಲ್ಲಿ ಹೆಚ್ಚು ಕುತೂಹಲವುಳ್ಳವರಾಗುವಂತೆ ಲೋಕಮತವನ್ನು ಎಚ್ಚರಿಸಬಹುದೆಂದು ನನಗೆ ತೋರಿತು. ಮೂರು ಪೌಂಡಿನ ತೆರಿಗೆಯಂತೂ ಉರಿಯುವ ಹುಣ್ಣಿನಂತಿದ್ದಿತು. ಇದು ಮಾಯುವವರೆಗೂ ಶಾಂತಿಯುಂಟಾಗುವುದು ಸಾಧ್ಯವಿರಲಿಲ್ಲ.

ಆದರೆ ನಾನಿಲ್ಲದಿರುವಾಗ ಕಾಂಗ್ರೆಸ್ ಮತ್ತು ಶಿಕ್ಷಾಮಂಡಲಗಳ ಜವಾಬ್ದಾರಿಯನ್ನು ವಹಿಸುವವರಾರು? ನನ್ನ ದೃಷ್ಟಿಯು ಇಬ್ಬರ ಮೇಲೆ ಬಿದ್ದಿತು--ಆದಮ್‌ಜೀ ಮಿಯಾಖಾನ್ ಮತ್ತು ಪಾರ್ಸೀ ರುಸ್ತುಂಜೀ. ಈಗ ವ್ಯಾಪಾರಸ್ಥರ ವರ್ಗದಲ್ಲಿ ಅನೇಕ ಜನರು ಕೆಲಸಮಾಡುವುದಕ್ಕೆ ಸಿಕ್ಕುತ್ತಿದ್ದರು. ಆದರೆ ಕಾರ್ಯದರ್ಶಿಯ ಕೆಲಸಗಳನ್ನು ತಪ್ಪದೆ ನಿರ್ವಹಿಸುವುದಕ್ಕೆ ಶಕ್ತಿಯಿದ್ದು ಅಲ್ಲಿಯೇ ಹುಟ್ಟಿದ ಭಾರತೀಯರಿಗೆ ಬೇಕಾಗಿದ್ದವರಲ್ಲಿ ಇವರಿಬ್ಬರು ಮೊದಲನೆಯವರಾಗಿದ್ದರು. ಕಾರ್ಯದರ್ಶಿ

ಮಾನವನಿಗೆ ಇಂಗ್ಲಿಷ್ ಭಾಷೆಯ ಸಾಮಾನ್ಯಜ್ಞಾನವು ಆವಶ್ಯಕವಾಗಿತ್ತು. ನಾನು ದಿವಂ. ಆದಮ್‌ಜೀ ಮಿಯಾಖಾನರ ಹೆಸರನ್ನು ಈ ಕೆಲಸಕ್ಕಾಗಿ ಭಾರತಸಭೆಯು ಮುಂದಿಟ್ಟೆನು. ಸಭೆಯವರು ಇವರು ಕಾರ್ಯದರ್ಶಿಯಾಗಿರುವುದಕ್ಕೆ ಒಪ್ಪಿದರು. ಇವರನ್ನು ಈ ಕೆಲಸಕ್ಕೆ ಆರಿಸಿದುದು ಬಹು ಯೋಗ್ಯವೆಂದು ಮುಂದಿನ ಅನುಭವದಿಂದ ಗೊತ್ತಾಯಿತು. ಆದಮ್‌ಜೀ ಮಿಯಾಖಾನರು ಎಲ್ಲರನ್ನೂ ತನ್ನ ವಿನಯ, ಮಾಧುರ್ಯ, ಔದಾರ್ಯ, ತಾಳ್ಮೆ, ಶ್ರದ್ಧೆಗಳಿಂದ ಸಂತೋಷಪಡಿಸಿ ಕಾರ್ಯದರ್ಶಿಯ ಕೆಲಸವನ್ನು ನಿರ್ವಹಿಸುವುದಕ್ಕೆ ವಕೀಲರು ಅಥವಾ ಬ್ಯಾರಿಸ್ಟರರಾಗಿರುವವರೇ ಆಗಲಿ ಇಂಗ್ಲಿಷ್ ಭಾಷೆಯಲ್ಲಿ ಪಾಂಡಿತ್ಯವುಳ್ಳವರೇ ಆಗಲಿ ಆವಶ್ಯಕವಿಲ್ಲವೆನ್ನುವುದನ್ನು ತೋರಿಸಿಕೊಟ್ಟರು.

ಸುಮಾರು ೧೮೯೬ನೆಯ ಇಸವಿಯ ಮಧ್ಯದಲ್ಲಿ ನಾನು "ಪೊಂಗೋಲಾ" ಎಂಬ ಜಹಜಿನಲ್ಲಿ ಸ್ವದೇಶಕ್ಕೆ ಪ್ರಯಾಣ ಬೆಳೆಸಿದೆನು. ಈ ಜಹಜು ಕಲ್ಕತ್ತೆಗೆ ಹೋಗಿ ಸೇರುವುದಿದ್ದಿತು.

ಈ ಜಹಜಿನಲ್ಲಿ ಬಹು ಸ್ವಲ್ಪ ಜನ ಪ್ರಯಾಣಿಕರಿದ್ದರು. ಅವರಲ್ಲಿ ಇಬ್ಬರು ಆಂಗ್ಲ ಅಧಿಕಾರಿಗಳಾಗಿದ್ದರು. ನನಗೆ ಇವರೊಡನೆ ಹೆಚ್ಚಾದ ಪರಿಚಯವುಂಟಾಯಿತು. ಇವರಲ್ಲಿ ಒಬ್ಬರೊಡನೆ ಚತುರಂಗವಾಡುತ್ತ ಪ್ರತಿ ದಿನವೂ ಒಂದು ಗಂಟೆಯನ್ನು ಕಳೆಯುತ್ತಿದ್ದೆನು. ಜಹಜಿನಲ್ಲಿ ಡಾಕ್ಟರು ನನಗೆ ಒಂದು ತಮಿಳು "ಸ್ವಯಂಬೋಧಿನಿ'ಯನ್ನು ಕೊಟ್ಟರು. ಅದರಿಂದ ನಾನು ತಮಿಳನ್ನು ಕಲಿಯಲು ಮೊದಲು ಮಾಡಿದೆನು. ಮುಸಲ್ಮಾನರೊಡನೆ ನಿಕಟಸಂಬಂಧವನ್ನು ಬೆಳೆಸಲು ಉರ್ದೂ ಭಾಷೆಯನ್ನು ಕಲಿಯುವುದು ಆವಶ್ಯಕವೆಂದೂ ಹಾಗೆಯೇ ಮದರಾಸಿನ ಭಾರತೀಯರ ಸ್ನೇಹವನ್ನು ಸಂಪಾದಿಸಲು ತಮಿಳನ್ನು ಅಭ್ಯಾಸ ಮಾಡಬೇಕೆಂದೂ ನೇಟಾಲನಲ್ಲಿನ ಅನುಭವದಿಂದ ನನಗೆ ಗೊತ್ತಾಗಿದ್ದಿತು.

ನನ್ನೊಡನೆ ಉರ್ದೂಭಾಷೆಯನ್ನು ಕಲಿಯುತ್ತಿದ್ದ ಆಂಗ್ಲ ಮಿತ್ರರ ಕೋರಿಕೆಯಂತೆ ಡೆಕ್ಕಿನಲ್ಲಿದ್ದ ಪ್ರಯಾಣಿಕರೊಳಗೆ ಒಬ್ಬ ಒಳ್ಳೆಯ ಉರ್ದೂ ಮೌಲಾವಿಯವರನ್ನು ಹುಡುಕಿದೆನು. ನಮ್ಮ ವ್ಯಾಸಂವು ಚೆನ್ನಾಗಿ ಮುಂದರಿಯಿತು. ಅಧಿಕಾರಿಯ ಜ್ಞಾಪಕಶಕ್ತಿಯು ನನ್ನದಕ್ಕಿಂತಲೂ

ಚುರುಕಾಗಿದ್ದಿತು ಒಂದುಸಲ ನೋಡಿದಮೇಲೆ ಆತನು ಒಂದು ಉರ್ದೂ ಶಬ್ದವನ್ನೂ ಮರೆಯುತ್ತಿರಲಿಲ್ಲ. ನನಗೆ ಅನೇಕವೇಳೆ ಅಕ್ಷರಗಳನ್ನು ಓದುವುದೇ ಕಷ್ಟವಾಗಿ ತೋರುತ್ತಿದ್ದಿತು. ಆತನಿಗಿಂತ ಹೆಚ್ಚಾಗಿ ಸಾಹಸಪಟ್ಟರೂ ನಾನು ಆತನಿಗೆ ಸರಿಬರಲಾಗಲಿಲ್ಲ.

ತಮಿಳುಭಾಷೆಯ ಅಭ್ಯಾಸದಲ್ಲಿ ನಾನು ಮುಂದರಿಯುತ್ತಿದ್ದೆನು. ಈ ಅಭ್ಯಾಸದಲ್ಲಿ ನನಗೆ ಯಾವ ಸಹಾಯವೂ ದೊರಕಲಿಲ್ಲ. ಆದರೆ ನನ್ನ ಬಳಿಯಲ್ಲಿದ್ದ ತಮಿಳು ಸ್ವಯಂಬೋಧಿನಿಯು ಚೆನ್ನಾಗಿ ಬರೆದ ಪುಸ್ತಕವಾಗಿದ್ದುದರಿಂದ ಹೊರಗಿನ ಸಹಾಯವು ಅಷ್ಟೇನೂ ಬೇಕಾಗಿರಲಿಲ್ಲ.

ನಾನು ಸ್ವದೇಶವನ್ನು ತಲುಪಿದಮೇಲೆ ಕೂಡ ಈ ಅಭ್ಯಾಸವನ್ನು ಮುಂದರಿಸಬೇಕೆಂಬ ಆಸೆಯಿಟ್ಟುಕೊಂಡಿದ್ದೆನು. ಆದರೆ ಇದು ಸಾಧ್ಯವಾಗಲಿಲ್ಲ. ೧೮೯೩ ರಿಂದೀಚೆಗೆ ನನ್ನ ವ್ಯಾಸಂಗವು ಬಹುಮಟ್ಟಿಗೆ ಸೆರೆಮನೆಗಳಲ್ಲಿಯೇ ನಡೆದಿದೆ. ಇವೆರಡು ಭಾಷೆಗಳ ಜ್ಞಾನವನ್ನೇನೋ ಸ್ವಲ್ಪಮಟ್ಟಿಗೆ ಅಭಿವೃದ್ಧಿಪಡಿಸಿಕೊಂಡಿದ್ದೇನೆ—ಸೆರೆಮನೆಗಳಲ್ಲಿ: ತಮಿಳನ್ನು ದಕ್ಷಿಣ ಆಫ್ರಿಕದ ಸೆರೆಮನೆಗಳಲ್ಲಿ ಉರ್ದುವನ್ನು ಯರವಾಡದಲ್ಲಿ. ಆದರ ತಮಿಳಿನಲ್ಲಿ ಮಾತನಾಡುವುದನ್ನು ನಾನು ಕಲಿಯಲೇ ಇಲ್ಲ. ಓದುವುದಕ್ಕೆ ಕಲಿತುಕೊಂಡಿದ್ದ ಅಲ್ಪಸ್ವಲ್ಪವು ಕೂಡ ಅಭ್ಯಾಸದ ಅಭಾವದಿಂದ ತುಕ್ಕುಹಿಡಿದು ಹೋಗುತ್ತಿದೆ.

ತಮಿಳು ಅಥವಾ ತೆಲುಗು ನನಗೆ ಬಾರದುದರ ಅನನುಕೂಲವು ಇಂದೂ ನನಗೆ ತೋರುತ್ತಿದೆ. ದಕ್ಷಿಣ ಆಫ್ರಿಕದಲ್ಲಿನ ದ್ರಾವಿಡರು ನನ್ನಮೇಲೆ ಕರೆದ ವಾತ್ಸಲ್ಯವೃಷ್ಟಿಯ ಸ್ಮರಣೆಯು ನನಗೆ ಪ್ರತಿಕ್ಷಣವೂ ಉಂಟಾಗುತ್ತದೆ. ತಮಿಳು ಅಥವಾ ತೆಲುಗು ಸ್ನೇಹಿತರನ್ನು ನೋಡಿದಾಗಲೆಲ್ಲಾ ದಕ್ಷಿಣ ಆಫ್ರಿಕದಲ್ಲಿ ಈ ಜನರಲ್ಲನೇಕರ ಶ್ರದ್ಧೆ, ಉದ್ಯೋಗ, ವಿಶ್ವಾಸ, ಸ್ವಾರ್ಥತ್ಯಾಗ ಇವೆಲ್ಲವೂ ನೆನಪಿಗೆ ಬರದೇ ಇರುವುದಿಲ್ಲ. ಮತ್ತೆ ನೋಡಿದರೆ ಇವರಲ್ಲಿ ಹೆಚ್ಚುಮಂದಿ ಓದುಬರಹ ಬಾರದವರಾಗಿದ್ದರು—ಗಂಡಸರೂ ಅಷ್ಟೆ, ಹೆಂಗಸರೂ ಅಷ್ಟೆ. ದಕ್ಷಿಣ ಆಫ್ರಿಕದಲ್ಲಿನ ಹೋರಾಟವು ಇವರ ಬಲದಿಂದಾಗಿಯೇ ನಡೆದುದು. ಅದನ್ನು ನಡೆಸಿದವರೂ ಈ ನಿರಕ್ಷರರಾದ ಯೋಧರೇ. ಈ ಕದನವು

ಬಡವರಾಗಿದ್ದರು ; ಅವರಲ್ಲಿ ಬಡವರು ತಮ್ಮ ಭಾರವನ್ನು ಪೂರ್ತಿ ಯಾಗಿ ಹೊತ್ತರು.

ಈ ಒಳ್ಳೆಯ ಜನರ ಸರಳಹೃದಯವನ್ನು ಅಪಹರಿಸುವುದರಲ್ಲಿ ನನಗೆ ಇವರ ಭಾಷೆಯು ತಿಳಿಯದಿದ್ದುದರಿಂದ ಯಾವ ತೊಂದರೆಯೂ ಉಂಟಾಗಲಿಲ್ಲ. ಇವರಿಗೆ ಹರಕುಮುರಕು ಹಿಂದುಸ್ತಾನಿಯನ್ನೋ ಇಂಗ್ಲಿಷನ್ನೋ ಮಾತನಾಡುವುದಕ್ಕೆ ಬರುತ್ತಿದ್ದಿತು. ಸಾಕು, ಇಷ್ಟ ರಿಂದ ನಮ್ಮ ಕೆಲಸವು ನಡೆಯುತ್ತಿದ್ದಿತು. ಆದರೆ ಇವರು ನನ್ನ ಮೇಲಿ ಟ್ಟಿದ್ದ ಮಮತೆಗೆ ಪ್ರತಿಯಾಗಿ ನಾನು ತಮಿಳು ಮತ್ತು ತೆಲುಗು ಭಾಷೆ ಗಳನ್ನು ಕಲಿಯಲಿಚ್ಛಿಸಿದೆನು. ತಮಿಳನ್ನು ಮೇಲೆ ಹೇಳಿದಂತೆ ಅಷ್ಟು ಇಷ್ಟು ಕಲಿತೆನು. ತೆಲುಗನ್ನು ಕಲಿಯಲು ಹಿಂದೂಸ್ಥಾನಕ್ಕೆ ಬಂದಮೇಲೆ ಪ್ರಯತ್ನಪಟ್ಟೆನು. ಆದರೆ ಇದು ಕಾಗುಣಿತದ ಮುಂದೆ ಸಾಗಲಿಲ್ಲ. ನಾನು ತಮಿಳು ಮತ್ತು ತೆಲುಗನ್ನು ಕಲಿಯುವ ಆಸೆಯನ್ನು ಬಿಟ್ಟು ಬಿಟ್ಟಿದ್ದೇನೆ. ಆದುದರಿಂದ ದ್ರಾವಿಡ ಭಾಷೆಗಳನ್ನಾಡುವವರು ಹಿಂದು ಸ್ತಾನಿಯನ್ನು ಕಲಿತುಕೊಳ್ಳುವರೆಂಬ ಆಸೆಯನ್ನಿಟ್ಟುಕೊಂಡಿದ್ದೇನೆ. ದಕ್ಷಿಣ ಆಫ್ರಿಕದಲ್ಲಿರುವ ದ್ರಾವಿಡರಲ್ಲಿ ಇಂಗ್ಲಿಷ್ ಮಾತನಾಡುವುದಕ್ಕೆ ಬರದೇ ಇರುವವರಿಗೆ ಸುಮಾರಾಗಿ ಹಿಂದೀ ಅಥವಾ ಹಿಂದೂಸ್ತಾನಿ ಭಾಷೆಯು ಬಂದೇಬರುತ್ತದೆ. ಈ ಕಷ್ಟವೆಲ್ಲಾ ಇಂಗ್ಲಿಷ್ ಬರುವವ ರದೇ! ಇದನ್ನು ನೋಡಿದರೆ ಇಂಗ್ಲಿಷ್ ಭಾಷೆಯ ಜ್ಞಾನವು ನಮ್ಮ ಭಾಷೆಗಳನ್ನು ಕಲಿಯಲು ದೊಡ್ಡ ವಿಘ್ನವಾಗಿದೆಯೋ ಏನೋ ಎನಿ ಸುತ್ತದೆ!

ಇದಂತು ವಿಷಯಾಂತರವಾಗಿ ಹೋಯಿತು. ನನ್ನ ಪ್ರಯಾಣದ ವೃತ್ತಾಂತವನ್ನು ಮುಗಿಸೋಣ.

ನಾನು ವಾಚಕರಿಗೆ 'ಪೊಂಗೋಲಾ' ಜಹಜಿನ ಮುಖ್ಯಾಧಿ ಕಾರಿಯ ಪರಿಚಯವನ್ನು ಮಾಡಿಕೊಡುವುದು ಉಳಿದಿದೆ. ನಮ್ಮಿಬ್ಬ ರಲ್ಲಿಯೂ ಮೈತ್ರಿಯು ಬೆಳೆದಿದ್ದಿತು. ಈ ಕ್ಯಾಪ್ಟನರು 'ಪ್ಲಿಮತ್ ಭ್ರಾತೃ' ಗಳ ಸಂಪ್ರದಾಯಕ್ಕೆ ಸೇರಿದವರಾಗಿದ್ದರು. ನಮ್ಮ ಸಂಭಾ ಷಣೆಯ ವಿಷಯವು ಜಲಯಾನವಿದ್ಯಾಜ್ಞಾನಕ್ಕಿಂತಲೂ ಹೆಚ್ಚಾಗಿ ಆಧ್ಯಾತ್ಮಿಕ ವಿಚಾರವಾಗಿದ್ದಿತು. ಅವರು ನೀತಿಗೂ ಧರ್ಮಶ್ರದ್ಧೆಗೂ

ವ್ಯತ್ಯಾಸವಿದೆಯೆಂದು ಹೇಳುತ್ತಿದ್ದರು. ಅವರ ದೃಷ್ಟಿಯಲ್ಲಿ ಬೈಬಲಿನ ಉಪದೇಶವು ಸ್ವಲ್ಪವೂ ಕಷ್ಟವಾದ ಮಾತಾಗಿರಲಿಲ್ಲ. ಅದರ ಸೌಂದರ್ಯವು ಅದರ ಸರಳತೆಯಲ್ಲಿದ್ದಿತು. ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ಯೇಸುವಿನಲ್ಲಿಯೂ ಆತನ ಮಹಾಬಲಿದಾನದಲ್ಲಿಯೂ ನಂಬಿಕೆಯನ್ನಿಟ್ಟರೆ ಅವರ ಪಾಪಗಳು ಖಂಡಿತವಾಗಿಯೂ ಪರಿಹಾರವಾಗುವುವೆಂದು ಹೇಳುತ್ತಿದ್ದರು. ಇವರನ್ನು ನೋಡಿದರೆ ಪ್ರಿಟೋರಿಯಾದಲ್ಲಿನ ಪ್ಲಿಮತ್ ಬ್ರದರರು ನನ್ನ ನೆನಪಿಗೆ ಬರುತ್ತಿದ್ದರು. ನೀತಿನಿಯಮಗಳುಳ್ಳ ಧರ್ಮಗಳೆಲ್ಲಾ ಇವರಿಗೆ ನೀರಸವಾಗಿದ್ದುವು. ಇಷ್ಟೆಲ್ಲಾ ಧರ್ಮಚರ್ಚೆಗೆ ನಾನು ಶಾಕಾಹಾರಿಯಾಗಿದ್ದುದೇ ಕಾರಣವಾಗಿದ್ದಿತು. ನಾನು ಮಾಂಸವನ್ನೇಕೆ ತಿನ್ನಕೂಡದು? ಗೋಮಾಂಸವನ್ನು ತಿನ್ನುವುದರಲ್ಲಿ ದೋಷವೇನು? ದೇವರು ಮನುಷ್ಯನ ಉಪಭೋಗಕ್ಕಾಗಿಯೇ ಗಿಡಮರಗಳನ್ನೂ ಹಣ್ಣುಹಂಪಲುಗಳನ್ನೂ ನಿರ್ಮಿಸಿದಂತೆ ಕೀಳುಜಾತಿಯ ಪ್ರಾಣಿಗಳನ್ನೆಲ್ಲಾ ಮನುಷ್ಯಜಾತಿಯ ಉಪಭೋಗಕ್ಕೇ ಸೃಷ್ಟಿಸಿಲ್ಲವೇನು? ಈ ರೀತಿಯಾದ ಪ್ರಶ್ನಮಾಲೆಯು ನನ್ನನ್ನು ತಪ್ಪಿಸಿಕೊಳ್ಳುವುದಕ್ಕಾಗದಂತೆ ಆಧ್ಯಾತ್ಮಿಕ ವಾರ್ತಾಲಾಪಕ್ಕೆ ಎಳೆದುಬಿಡುತ್ತಿದ್ದಿತು.

ನಮ್ಮಿಬ್ಬರ ಅಭಿಪ್ರಾಯಗಳೂ ಸರಿಹೋಗಲಿಲ್ಲ. ಧರ್ಮಕ್ಕೂ ನೀತಿಗೂ ವ್ಯತ್ಯಾಸವಿಲ್ಲವೆಂಬ ಅಭಿಪ್ರಾಯವು ನನ್ನಲ್ಲಿ ದೃಢಪಟ್ಟಿತು. ಆದರೆ ಕ್ಯಾಪ್ಟನಿಗೆ ಇದಕ್ಕೆ ವಿರೋಧವಾದ ತನ್ನ ಅಭಿಪ್ರಾಯವು ಸರಿಯೆನ್ನುವುದರಲ್ಲಿ ಸಂದೇಹವೇ ಇರಲಿಲ್ಲ.

ಇಪ್ಪತ್ತುನಾಲ್ಕು ದಿನಗಳಾದಮೇಲೆ ಆನಂದದಾಯಕವಾದ ಈ ಸಮುದ್ರಯಾನವು ಕೊನೆಗಂಡಿತು. ಹುಗ್ಲೀನದಿಯ ಸೌಂದರ್ಯವನ್ನು ನೋಡಿ ಆನಂದಪಡುತ್ತಾ, ಕಲಕತ್ತೆಯಲ್ಲಿ ಹಡಗಿನಿಂದಿಳಿದು ಅದೇ ದಿನದ ರೈಲಿನಲ್ಲಿಯೇ ನಾನು ಮುಂಬಯಿಗೆ ಪ್ರಯಾಣಮಾಡಿದೆನು.



೨೫

# ಹಿಂದೂಸ್ಥಾನದಲ್ಲಿ

ಮುಂಬಯಿಗೆ ಹೋಗುತ್ತಾ ದಾರಿಯಲ್ಲಿ ಅಲಹಾಬಾದಿ (ಪ್ರಯಾಗ) ನಲ್ಲಿ ರೈಲುಗಾಡಿಯು ೪೫ ನಿಮಿಷ ನಿಲ್ಲುತ್ತಿದ್ದಿತು. ಈ ಹೊತ್ತನ್ನು ಆ ಪಟ್ಟಣವನ್ನು ಬಂಡಿಯಲ್ಲಿ ಸುತ್ತಿನೋಡುವುದರಲ್ಲಿ ಕಳೆಯಬೇಕೆಂದು ನಿಶ್ಚಯಿಸಿದೆನು. ಇದೂ ಅಲ್ಲದೆ ನಾನು ಔಷಧಾಲಯದಲ್ಲಿ ಕೆಲವು ಔಷಧಗಳನ್ನೂ ಕೊಂಡುಕೊಳ್ಳಬೇಕಾಗಿದ್ದಿತು. ಅಂಗಡಿಯವನು ಅರೆನಿದ್ದೆಯಲ್ಲಿದ್ದನು. ಅವನು ಔಷಧಕೊಡುವುದಕ್ಕೆ ಬಹಳ ಹೊತ್ತು ತೆಗೆದುಕೊಂಡನು. ಔಷಧವನ್ನು ತೆಗೆದುಕೊಂಡು ನಾನು ಸ್ಟೇಷನಿಗೆ ಹೋಗಲು ಗಾಡಿಯು ಆಗತಾನೆ ಹೊರಟಿದ್ದಿತು. ಅಲ್ಲಿನ ಸ್ಟೇಷನ್ ಮಾಸ್ಟರು ನನಗಾಗಿ ರೈಲನ್ನು ಒಂದುನಿಮಿಷ ನಿಲ್ಲಿಸಿದ್ದರು. ಆದರೆ ನಾನು ಹಿಂದಿರುಗದಿದ್ದುದರಿಂದ ಅವರು ಜಾಗರೂಕತೆಯಿಂದ ನನ್ನ ಸಾಮಾನನ್ನು ಈಚೆಗೆ ತೆಗೆಸಿದ್ದರು.

ನಾನು 'ಕೆಲ್ನರ್' ಹೋಟಲಿನಲ್ಲಿಳಿದು ಅಲ್ಲಿಂದಲೇ ನನ್ನ ಕೆಲಸವನ್ನು ಮೊದಲುಮಾಡಲು ನಿಶ್ಚಯಿಸಿದೆನು. ಆ ಪಟ್ಟಣದಲ್ಲಿ ಹೊರಡುತ್ತಿದ್ದ 'ಪಯೋನೀರ್' ಪತ್ರಿಕೆಯ ಖ್ಯಾತಿಯನ್ನು ನಾನು ಕೇಳಿದ್ದೆನು. ಇದು ಭಾರತೀಯರ ಆಕಾಂಕ್ಷೆಗಳನ್ನು ವಿರೋಧಿಸುತ್ತಿದ್ದಿತೆಂದು ನಾನು ತಿಳಿದಿದ್ದೆನು. ಆ ಸಮಯದಲ್ಲಿ ಮಿ. (ಕಿರಿಯ) ಚೆಸ್ನಿಯವರು ಅದರ ಸಂಪಾದಕರಾಗಿದ್ದರೆಂದು ನನಗೆ ನೆನಪಿದೆ. ನಾನು ಪ್ರತಿಯೊಂದು ಪಂಗಡದವರ ಸಹಾಯವನ್ನೂ ಸಂಪಾದಿಸಬೇಕಾಗಿದ್ದಿತು. ಆದುದರಿಂದ ಚೆಸ್ನಿಯವರಿಗೆ ನನಗೆ ರೈಲು ತಪ್ಪಿಹೋದ ವಿಚಾರವನ್ನು ತಿಳಿಸಿ ನಾನು ಮಾರನೆಯದಿನ ಹೊರಡಲು ಸಾಧ್ಯವಾಗುವಂತೆ ಅವರನ್ನು ಕಾಣುವುದಕ್ಕೆ ಅವಕಾಶವನ್ನು ಕೊಡಬೇಕೆಂದು ಕಾಗದ ಬರೆದೆನು. ಅವರು ಒಡನೆಯೇ ನನ್ನನ್ನು ನೋಡಲು ಒಪ್ಪಿಕೊಂಡರು. ಇದರಿಂದ ನನಗೆ

ಸಂತೋಷವಾಯಿತು. ಇಷ್ಟೇ ಅಲ್ಲದೆ ಅವರು ನನ್ನ ಮಾತನ್ನು ಮನಸವಿಟ್ಟು ಕೇಳಿದರು. ಅವರು “ನೀವೇನಾದರೂ ಬರೆಯುವುದಾದರೆ ಅದರ ಮೇಲೆ ನಮ್ಮ ಪತ್ರಿಕೆಯಲ್ಲಿ ಅಗತ್ಯವಾಗಿ ಟೀಕೆಮಾಡುತ್ತೇನೆ.” ಎಂದುಹೇಳಿ ಪುನಃ “ಆದರೆ ನಾನು ದಕ್ಷಿಣ ಆಫ್ರಿಕದ ಭಾರತೀಯರು ಕೇಳುವ ಹಕ್ಕುಗಳೆಲ್ಲದರ ಪರವಾಗಿ ಬರೆಯುತ್ತೇನೆಂದು ಮಾತುಕೊಡಲಾರೆನು. ಏಕೆಂದರೆ ಅಲ್ಲಿರುವ ಫರಂಗಿಯವರ ಅಭಿಪ್ರಾಯವನ್ನೂ ತಿಳಿದುಕೊಂಡು ಅದಕ್ಕೆ ತಕ್ಕ ತೂಕ ಕೊಡಬೇಕಾದುದು ನನ್ನ ಕರ್ತವ್ಯ.” ಎಂದರು.

ನಾನು “ತಾವು ಈ ಸಮಸ್ಯೆಯ ವಿಚಾರವನ್ನು ತಿಳಿದುಕೊಂಡು ಅದನ್ನು ನಿಮ್ಮ ಪತ್ರಿಕೆಯಲ್ಲಿ ಚರ್ಚಿಸಿದರೆ ಅಷ್ಟುಮಾತ್ರ ನನಗೆ ಸಾಕು. ಕೇವಲ ನ್ಯಾಯವನ್ನಲ್ಲದೆ ನಾನು ಇನ್ನೇನನ್ನೂ ಕೇಳುವುದಿಲ್ಲ, ಇಚ್ಛಿಸುವುದೂ ಇಲ್ಲ.” ಎಂದೆನು.

ಆ ದಿನ ಉಳಿದ ಹೊತ್ತನ್ನೆಲ್ಲಾ ಧನ್ಯವಾದ ತ್ರಿವೇಣೀ ಸಂಗಮವನ್ನು ನೋಡುವುದರಲ್ಲಿಯೂ ಮುಂದೆ ಮಾಡಬೇಕಾದ ಕೆಲಸದ ವಿಚಾರವಾಗಿ ಯೋಚನೆ ಮಾಡುವುದರಲ್ಲಿಯೂ ಕಳೆದೆನು.

ಹೀಗೆ ಆಕಸ್ಮಿಕವಾಗಿ ‘ಪಯೋನೀರ್’ ಪತ್ರಿಕೆಯ ಸಂಪಾದಕರನ್ನು ನೋಡಿದುದರಲ್ಲಿ ಮೊದಲಾದ ಘಟನಾಶ್ರೇಣಿಯು ನೇಟಾಲಿನಲ್ಲಿ ಫರಂಗಿಯವರು ನನ್ನನ್ನು ಹಿಡಿದುಕೊಂಡು ಹೊಡೆಯುವುದರಲ್ಲಿ ಕೊನೆಗಂಡಿತು.

ನಾನು ಮುಂಬಯಿಯಲ್ಲಿ ನಿಲ್ಲದೆ ನೆಟ್ಟಗೆ ರಾಜಕೋಟೆಗೆ ಹೋಗಿ ದಕ್ಷಿಣ ಆಫ್ರಿಕದ ಭಾರತೀಯರ ಪರಿಸ್ಥಿತಿಯ ವಿಚಾರವಾಗಿ ಒಂದು ಸಣ್ಣಪುಸ್ತಕವನ್ನು ಬರೆಯುವುದಕ್ಕೆ ಸಿದ್ಧಮಾಡಿಕೊಳ್ಳಲು ಪ್ರಾರಂಭಿಸಿದೆನು. ಇದನ್ನು ಬರೆದು ಮುದ್ರಣಪಡಿಸುವುದಕ್ಕೆ ಸುಮಾರು ಒಂದು ತಿಂಗಳು ಹಿಡಿಯಿತು. ಇದರ ಮೇಲಿನ ಹಾಳೆಯು ಹಸುರಾಗಿದ್ದುದರಿಂದ ಆಮೇಲೆ ಇದು ‘ಹಸುರು ಪುಸ್ತಕ’ವೆಂದು ಹೆಸರುಗೊಂಡಿತು. ಇದರಲ್ಲಿ ನಾನು ದಕ್ಷಿಣ ಆಫ್ರಿಕದ ಭಾರತೀಯರ ದುಃಸ್ಥಿತಿಯನ್ನು ಬೇಕೆಂದು ತಗ್ಗಿಸಿ ಚಿತ್ರಿಸಿದ್ದೆನು. ನಾನು ಆಗಲೇ

ತಿಳಿಸಿರುವಂತೆ ಹಿಂದೆ ನೇಟಾಲಿನಲ್ಲಿ ಬರೆದಿದ್ದ ಎರಡು ಪುಸ್ತಕಗಳಲ್ಲಿನ ಭಾಷೆಗಿಂತಲೂ ಇದರಲ್ಲಿ ನಾನು ಉಪಯೋಗಿಸಿದ್ದ ಭಾಷೆಯು ಸೌಮ್ಯವಾಗಿದ್ದಿತು. ಏಕೆಂದರೆ ಸಣ್ಣ ವಿಷಯಗಳು ಕೂಡ ದೂರದಿಂದ ಕೇಳುವವರಿಗೆ ದೊಡ್ಡದಾಗಿ ತೋರುವುವೆಂದು ನನಗೆ ಗೊತ್ತಿದ್ದಿತು

ಈ ಹಸುರುಪುಸ್ತಕದ ಹತ್ತುಸಾವಿರ ಪ್ರತಿಗಳನ್ನು ಅಚ್ಚುಹಾಕಿಸಿ ಭಾರತದೇಶದ ಎಲ್ಲಾ ಸಮಾಚಾರಪತ್ರಗಳಿಗೂ ಎಲ್ಲಾ ಪಂಗಡಗಳ ಮುಖಂಡರಿಗೂ ಕಳುಹಿಸಿ ಕೊಟ್ಟದ್ದಾಯಿತು. ಎಲ್ಲಾ ಪತ್ರಿಕೆಗಳಿಗೆ ಮೊದಲಾಗಿ 'ಪಯೋನೀರ್' ಪತ್ರಿಕೆಯು ಇದರಮೇಲೆ ಟೀಕೆಯನ್ನು ಬರೆಯಿತು. ಈ ಟೀಕೆಯ ಸಾರಾಂಶವು ರಾಯ್ಟರರ ತಂತೀಸಮಾಚಾರದಿಂದ ಇಂಗ್ಲೆಂಡಿಗೆ ತಲುಪಿತು. ಈ ಸಾರಾಂಶವು ಲಂಡನಿನ ರಾಯ್ಟರರ ಆಫೀಸಿನ ಮೂಲಕ ನೇಟಾಲಿಗೆ ತಂತಿಯಿಂದ ತಿಳಿಯಿತು. ಈ ತಂತಿ ಅಚ್ಚಿನಲ್ಲಿ ಮೂರುಸಾಲಿಗೆ ಹೆಚ್ಚಾಗಿರಲಿಲ್ಲ— ನೇಟಾಲಿನ ಭಾರತೀಯರ ಪರಿಸ್ಥಿತಿಯ ವಿಚಾರವಾಗಿ ನಾನು ಬರೆದುದು ಈ ಸಣ್ಣ ಆಕಾರವನ್ನು ವಹಿಸಿದ್ದಿತು. ಇದು ನನ್ನ ಮಾತುಗಳಲ್ಲಿರಲಿಲ್ಲ. ನಾನು ಬರೆದುದರ ಅತ್ಯುಕ್ತಿಯಾಗಿದ್ದಿತು. ನೇಟಾಲಿನಲ್ಲಿ ಇದರ ಪರಿಣಾಮವೇನಾಯಿತೆಂದು ಮುಂದೆ ನೋಡುವೆವು. ಈ ಮಧ್ಯೆ ಮುಖ್ಯವಾದ ಪತ್ರಿಕೆಗಳೆಲ್ಲಾ ಈ ಪ್ರಶ್ನೆಯ ವಿಚಾರವಾಗಿ ದೊಡ್ಡದೊಡ್ಡ ಟಿಪ್ಪಣಿಗಳನ್ನು ಬರೆದುವು.

ಈ ಪುಸ್ತಕಗಳನ್ನು ಅಂಚೆಯ ಮೂಲಕ ಕಳುಹಿಸಲು ಸಿದ್ಧಪಡಿಸುವುದು ಸುಲಭದ ಮಾತಾಗಿರಲಿಲ್ಲ. ಈ ಕೆಲಸವನ್ನು ನಾನು ಹಣಕೊಟ್ಟು ಮಾಡಿಸಿದ್ದರೆ ಬಹಳ ವೆಚ್ಚವು ತಗಲುತ್ತಿದ್ದಿತು. ಆದರೆ ನಾನು ಇನ್ನೂ ಸುಲಭವಾದ ಉಪಾಯವನ್ನು ಹುಡುಕಿದೆನು. ನನ್ನ ಸುತ್ತುಮುತ್ತಲಿನ ಹುಡುಗರನ್ನೆಲ್ಲಾ ಒಟ್ಟುಗೂಡಿಸಿ ಬೆಳಿಗ್ಗೆ ಶಾಲೆಯಿಲ್ಲದಿರುವಾಗ ಇಷ್ಟಪಟ್ಟರೆ ಎರಡು ಮೂರು ಗಂಟೆಯಹೊತ್ತು ಕೆಲಸ ಮಾಡುವಂತೆ ಕೇಳಿದೆನು. ಅವರು ಸಂತೋಷದಿಂದ ಇದಕ್ಕೆ ಒಪ್ಪಿದರು. ಅವರಿಗೆ ನಾನು ಕೂಡಿಸಿಟ್ಟಿದ್ದ ಉಪಯೋಗಿಸಿದ ಟಪ್ಪಾಲು ಚೀಟಿಗಳನ್ನೂ ನನ್ನ ಆಶೀ

ರ್ವಾದವನ್ನೂ ಬಹುಮಾನವಾಗಿ ಕೊಡುವೆನೆಂದು ಮಾತುಕೊಟ್ಟೆನು. ಅವರು ನನ್ನ ಕೆಲಸವನ್ನು ಬಹು ಸುಲಭವಾಗಿ ಮುಗಿಸಿದರು. ನಾನು ಚಿಕ್ಕ ಮಕ್ಕಳನ್ನು ಸ್ವಯಂ ಸೇವಕರನ್ನಾಗಿ ಕೂಡಿಸಿ ಅವರಿಂದ ಮಾಡಿಸಿದುದು ಇದೇ ಮೊದಲನೆಯಸಲ. ಈ ಹುಡುಗರಲ್ಲಿ ಇಬ್ಬರು ಇಂದು ನನ್ನ ಸಂಗಡಿಗರಾಗಿದ್ದಾರೆ.

ಇದೇ ಸಮಯದಲ್ಲಿ ಮುಂಬಯಿಯಲ್ಲಿ ಗಂಟುಬೇನೆಯು (ಪ್ಲೇಗ್) ತಲೆ ಹಾಕಿತು. ನಾಲ್ಕುದಿಕ್ಕಿನಲ್ಲಿಯೂ ಗಾಬರಿಯು ಹರಡಿತು. ರಾಜಕೋಟೆಯಲ್ಲಿಯೂ ಈ ಜಾಡ್ಯವು ಹರಡಬಹುದೆಂಬ ಹೆದರಿಕೆಯಿದ್ದಿತು. ಆರೋಗ್ಯರಕ್ಷಣೆಯ ಇಲಾಖೆಯಲ್ಲಿ ನನ್ನಿಂದ ಸ್ವಲ್ಪ ಸಹಾಯವಾಗಬಹುದೆಂದು ನನಗೆ ತೋರಿದುದರಿಂದ ನಾನು ಸೇವೆ ಮಾಡಲು ಸಿದ್ಧನಾಗಿರುವೆನೆಂದು ಸರಕಾರಕ್ಕೆ ತಿಳಿಸಿದೆನು. ನನ್ನ ಸೇವೆಯನ್ನು ಸ್ವೀಕರಿಸಿ ಈ ವಿಚಾರವನ್ನು ನೋಡಿಕೊಳ್ಳಲು ಅವರು ಏರ್ಪಡಿಸಿದ್ದ ಸಮಿತಿಗೆ ನನ್ನನ್ನೂ ನೇಮಿಸಿದರು. ನಾನು ಕಕ್ಕಸಗಳನ್ನು ಶುಚಿಯಾಗಿಟ್ಟಿರುವುದರ ಆವಶ್ಯಕತೆಯನ್ನು ಸೂಚಿಸಿದೆನು. ಸಮಿತಿಯವರು ಪ್ರತಿಯೊಂದು ಬೀದಿಗೂ ಹೋಗಿ ಕಕ್ಕಸಗಳನ್ನು ನೋಡಲು ನಿಶ್ಚಯಿಸಿದರು. ಬಡಜನರ ಕಕ್ಕಸಗಳನ್ನು ನಾವು ಹೋಗಿ ನೋಡುವುದಕ್ಕೆ ಅವರಿಗೆ ಸ್ವಲ್ಪವೂ ಅಭ್ಯಂತರವಿರಲಿಲ್ಲ. ಇಷ್ಟೇ ಅಲ್ಲ; ನಾವು ಹೇಳಿದಂತೆ ಅವುಗಳನ್ನು ಮಾರ್ಪಡಿಸುತ್ತಿದ್ದರು. ಆದರೆ ಸರಕಾರದ ಅಧಿಕಾರಿಗಳ ಮನೆಗಳನ್ನು ನೋಡಲು ಹೋದಾಗ ಅವರಲ್ಲಿ ಕೆಲವರು ಕಕ್ಕಸವನ್ನು ನೋಡುವುದಕ್ಕೆ ಕೂಡ ಬಿಡಲಿಲ್ಲ. ಇದರಮೇಲೆ ಅವುಗಳನ್ನು ಸರಿಪಡಿಸುವುದರ ಮಾತೇನು? ನಮ್ಮ ಅನುಭವದಲ್ಲಿ ಶ್ರೀಮಂತರ ಮನೆಯ ಕಕ್ಕಸಗಳು ಹೆಚ್ಚು ಅಶುಚಿಯಾಗಿದ್ದುವು. ಅವು ಕತ್ತಲು ಕವಿದು ಹೊಲಸು ಹುಳಹುಪ್ಪಡಿಗಳಿಂದ ತುಂಬಿರುತ್ತಿದ್ದುವು. ಅವುಗಳೊಳಕ್ಕೆ ಹೋದರೆ ನರಕವನ್ನು ಒಳಹೊಕ್ಕಂತಿರುತ್ತಿದ್ದಿತು. ನಾವು ಅವರಿಗೆ ಸೂಚಿಸಿದ ಸುಧಾರಣೆಗಳು ಕೇವಲ ಸುಲಭವಾಗಿದ್ದುವು. ಉದಾ:—ಕಕ್ಕಸುಗಳಲ್ಲಿ ಮಲವು ನೆಲದಮೇಲೆ ಬೀಳುವುದಕ್ಕಾಗಿ ಬುಟ್ಟಿಗಳನ್ನಾಗಲಿ ಬಾಸಿಗಳನ್ನಾಗಲಿ ಇಡುವುದು; ಮೂತ್ರವು ನೆಲದೊಳಕ್ಕೆ ಇಂಗಿ ಹೋಗದಂತೆ ಅದನ್ನು ಕಡಾ

ಯುಯಲ್ಲಿ ಕೂಡಿಸುವುದು; ಕಕ್ಕಸಿಗೂ ಹೊರಗಿನ ಗೋಡೆಗೂ ಮಧ್ಯೆ ಇರುವ ಭಾಗವನ್ನು ಒಡೆದುಹಾಕಿ ಬಾತವಾಲಿಯು ಬಂದು ಕಕ್ಕಸನನ್ನು ಚೆನ್ನಾಗಿ ತೊಳೆಯುವುದಕ್ಕೆ ಅನುಕೂಲವಾಗಿಯೂ ಕಕ್ಕಸಿನೊಳಕ್ಕೆ ಗಾಳಿ ಬೆಳಕು ಬರುವಹಾಗೂ ಮಾಡುವುದು. ಈ ಕಡೆಯ ಸೂಚನೆಗೆ ಬದುಲಾಗಿ ಶ್ರೀಮಂತರು ಎಷ್ಟೋ ನೆವಗಳನ್ನು ಹೇಳಿದರು. ಮುಕ್ಕಾಲುಪಾಲು ಜನ ನಮ್ಮ ಸಲಹೆಯಂತೆ ನಡೆಯಲೇ ಇಲ್ಲ.

ಸಮಿತಿಯು ಪಂಚಮರ ವಸತಿಗಳನ್ನು ಕೂಡ ನೋಡಬೇಕಾಗಿದ್ದಿತು. ಸಮಿತಿಯ ಸದಸ್ಯರಲ್ಲಿ ಒಬ್ಬರು ಮಾತ್ರ ನನ್ನ ಸಂಗಡ ಅಲ್ಲಿಗೆ ಬರಲು ಸಿದ್ಧರಾಗಿದ್ದರು. ಉಳಿದವರು ಅಲ್ಲಿಗೆ ಹೋಗುವುದೆಂದರೇನು! ಅವರಲ್ಲಿಯೂ ಅಲ್ಲಿಯ ಕಕ್ಕಸಗಳನ್ನು ನೋಡುವುದೆಂದರೇನು! ಆದರೆ ನನಗಂತೂ ಆ ವಸತಿಯನ್ನು ನೋಡಿ ಆಶ್ಚರ್ಯವೂ ಆನಂದವೂ ಉಂಟಾಯಿತು. ಪಂಚಮರ ಕೇರಿಗೆ ಹೋಗುವುದು ಇದೇ ನನ್ನ ಜೀವಮಾನದಲ್ಲಿ ಮೊದಲನೆಯ ಸಲವಾಗಿದ್ದಿತು. ಅಲ್ಲಿಯ ಗಂಡಸರು ಹೆಂಗಸರು ನಮ್ಮನ್ನು ನೋಡಿ ಸೋಜಿಗಗೊಂಡರು. ಅವರ ಕಕ್ಕಸಗಳನ್ನು ನೋಡುವುದಕ್ಕೆ ನಾನು ಅವರ ಅಪ್ಪಣೆಯನ್ನು ಕೇಳಿದೆನು.

ಅದಕ್ಕೆ ಅವರು "ನಮಗೆ ಕಕ್ಕಸಗಳೆಂದರೇನು? ಊರಹೊರಗಿನ ಬಯಲೇ ನಮ್ಮ ಕಕ್ಕಸ. ಕಕ್ಕಸಗಳೆಲ್ಲಾ ನಿಮ್ಮಂತಹ ದೊಡ್ಡಮನುಷ್ಯರಿಗೆ!" ಎಂದರು.

"ಒಳ್ಳೆಯದು, ಹಾಗಾದರೆ ನಾವು ನಿಮ್ಮ ಮನೆಗಳನ್ನು ನೋಡಬಹುದೋ?" ಎಂದು ಕೇಳಿದೆನು.

"ಅಗತ್ಯವಾಗಿ, ಸ್ವಾಮಿ. ನಿಮ್ಮ ಇಷ್ಟ ಬಂದಕಡೆ ಹೋಗಿ ನೋಡಿರಿ! ನಮ್ಮ ಮನೆಗಳನ್ನು ಮನೆಗಳೆಂದು ಕರೆಯಬಹುದೇ? ಅವು ಬಿಲಗಳು."

ನಾನು ಒಳಕ್ಕೆ ಹೋದೆನು. ಮನೆ ಮತ್ತು ಅಂಗಳಗಳ ಶುಚಿಯನ್ನು ನೋಡಿ ನನಗೆ ಆನಂದವಾಯಿತು. ಅಂಗಳವು ಕಸವಿಲ್ಲದಂತೆ ಗುಡಿಸಿದ್ದಿತು. ನೆಲವೆಲ್ಲಾ ಚೆನ್ನಾಗಿ ಸಗಣಿಯಿಂದ ಸಾರಿಸಿದ್ದಿತು. ಇದ್ದ ಒಂದೆರಡು

ಮಡಕೆಗಳೂ ತಟ್ಟೆಗಳೂ ನಿರ್ಮಲವಾಗಿ ಹೊಳೆಯುತ್ತಿದ್ದುವು. ಈ ಸ್ಥಳದಲ್ಲಿ ಬೇನೆಯು ಹರಡುವ ಹೆದರಿಕೆಯಿರಲಿಲ್ಲ.

ಶ್ರೀಮಂತರ ಮನೆಗಳಲ್ಲಿ ಒಂದರೊಳಗೆ ನಾವು ನೋಡಿದ ಕಕ್ಕಸನ್ನು ಸ್ವಲ್ಪ ವಿಶದವಾಗಿ ವರ್ಣಿಸದೆ ಇರಲಾರೆನು. ಪ್ರತಿಯೊಂದು ಕೋಣೆಯಲ್ಲೂ ಒಂದು ಮೋರಿಯಿದ್ದಿತು. ಅದು ಮೂತ್ರವಿಸರ್ಜನೆಗೂ ಕೈಕಾಲು ತೊಳೆದುಕೊಳ್ಳುವುದಕ್ಕೂ ಉಪಯೋಗಿಸಲ್ಪಡುತ್ತಿದ್ದಿತು. ಆದುದರಿಂದ ಬಹುಶಃ ಮನೆಯಲ್ಲಿ ದುರ್ವಾಸನೆಯಿಂದ ನಾರದ ಎಡೆಯೊಂದೂ ಇರಲಿಲ್ಲ. ಈ ಮನೆಗಳೊಂದರ ಮಹಡಿಯಲ್ಲಿ ಮಲಗುವ ಕೊಠಡಿಯಲ್ಲಿನ ಮೋರಿಯು ಮಲವಿಸರ್ಜನೆಗೂ ಮೂತ್ರವಿಸರ್ಜನೆಗೂ ಉಪಯೋಗಿಸಲ್ಪಡುತ್ತಿದ್ದಿತು. ಮಲಮೂತ್ರವೆಲ್ಲವೂ ಮೋರಿಯ ಕೆಳಗಿನಲ್ಲಿದ್ದ ಒಂದು ಕೊಳವೆಯಿಂದ ಕೆಳಕ್ಕೆ ಬರುತ್ತಿದ್ದಿತು. ಈ ಕೊಠಡಿಯಲ್ಲಿ ನಿಲ್ಲುವುದು ಕೂಡ ಕಷ್ಟವಾಗಿದ್ದಿತು. ಅದರಲ್ಲಿ ಮನೆಯವರು ಹೇಗೆ ಮಲಗಿಕೊಳ್ಳುತ್ತಿದ್ದರೋ ಪಾಠಕರೇ ಊಹಿಸಲಿ.

ಸಮಿತಿಯವರು ಅಲ್ಲಿನ ಹವೇಲಿ (ಮುಖ್ಯ ವೈಷ್ಣವ ದೇವಾಲಯ)ಗೆ ಕೂಡ ಹೋಗಿ ನೋಡಿದರು. ಆ ಹವೇಲಿಯ ಪೂಜಾರಿಗೂ ನಮ್ಮ ಮನೆಯವರಿಗೂ ಮೈತ್ರಿಯು ಬೆಳೆದುಬಂದಿದ್ದಿತು. ಆದುದರಿಂದ ಅವರು ನಾವು ಅದನ್ನು ಹೋಗಿ ನೋಡುವುದಕ್ಕೂ ನಮಗೆ ತೋರಿದಂತೆ ಸುಧಾರಣೆಗಳನ್ನು ಸೂಚಿಸುವುದಕ್ಕೂ ಒಪ್ಪಿಕೊಂಡರು. ಹವೇಲಿಯಲ್ಲಿ ಅವರು ಕೂಡ ಎಂದೂ ನೋಡಿಲ್ಲದಿದ್ದ ಒಂದು ಭಾಗವಿದ್ದಿತು — ಅಲ್ಲಿ ಎಂಜಲು ಎಲೆ ಮುಂತಾದುವನ್ನು ಒಂದು ಗೋಡೆಯ ಆಚೆ ಎಸೆಯುತ್ತಿದ್ದರು. ಕಾಗೆಗಳೂ ಹದ್ದುಗಳೂ ಅಲ್ಲಿಗೆ ಹಗಲೆಲ್ಲಾ ಬರುತ್ತಿದ್ದುವು. ಕಕ್ಕಸಗಳಂತೂ ಹೊಲಸಾಗಿದ್ದುವು. ಪೂಜಾರಿಯು ನಮ್ಮ ಸೂಚನೆಯಂತೆ ಎಷ್ಟು ಮಾರ್ಪಾಟನ್ನು ಮಾಡಿದರೋ ಅದನ್ನು ನೋಡುವುದಕ್ಕಾಗುವಷ್ಟು ಕಾಲ ನಾನು ರಾಜಕೋಟೆಯಲ್ಲಿರಲಿಲ್ಲ.

ದೇವಾಲಯದಲ್ಲಿ ಇಷ್ಟು ಕೊಳೆಯನ್ನು ನೋಡಿ ನನಗೆ ದುಃಖವಾಯಿತು. ಪವಿತ್ರಸ್ಥಾನವೆಂದೆಣಿಸುವೆಡೆಯಲ್ಲಿ ಆರೋಗ್ಯಸಂಬಂಧವಾದ

ನಿಯಮಗಳನ್ನು ಅನುಸರಿಸುವರೆಂದು ನಾವು ಸಹಜವಾಗಿ ನಿರೀಕ್ಷಿಸುತ್ತೇವೆ. ಸ್ಮೃತಿಕಾರರು ಬಾಹ್ಯಶುದ್ಧಿ ಅಂತಃಶುದ್ಧಿ ಇವೆರಡೂ ಆವಶ್ಯಕವೆಂದು ಹೇಳಿದ್ದಾರೆ. ಈ ವಿಷಯವು ಆ ಸಮಯದಲ್ಲಿ ಕೂಡ ನನ್ನ ಧ್ಯಾನದಲ್ಲಿರದೆ ಇರಲಿಲ್ಲ.



೨೮

## ರಾಜನಿಷ್ಠೆ, ರೋಗಿಗಳ ಶುಶ್ರೂಷೆ

ಬ್ರಿಟಿಷರ ಪ್ರಭುತ್ವದಲ್ಲಿ ನಾನು ಇಟ್ಟಿದ್ದಷ್ಟು ರಾಜಭಕ್ತಿಯನ್ನು ಇನ್ನಾರೂ ಇಟ್ಟಿರುವುದನ್ನು ನಾನು ನೋಡಿಲ್ಲವೆಂದು ಹೇಳಬಹುದು. ಈ ನನ್ನ ರಾಜನಿಷ್ಠೆಗೆ ಸತ್ಯದಲ್ಲಿ ನನಗಿದ್ದ ಪ್ರೇಮವೇ ಮೂಲವಾಗಿದ್ದಿತೆಂದು ನನಗೆ ಈಗ ಗೊತ್ತಾಗುತ್ತದೆ. ರಾಜನಿಷ್ಠೆಯನ್ನು—ಅಥವಾ ಯಾವ ಗುಣವನ್ನೇ ಆಗಲಿ—ಕಪಟದಿಂದ ತೋರಿಸಿಕೊಳ್ಳುವುದು ನನಗೆ ಯಾವಾಗಲೂ ಸಾಧ್ಯವಾಗಿಲ್ಲ. ನೇಟಾಲಿನಲ್ಲಿ ನಾನು ಹೋಗುತ್ತಿದ್ದ ಪ್ರತಿಯೊಂದು ಸಭೆಯಲ್ಲಿಯೂ 'ಗಾಡ್ ಸೇವ್ ದಿ ಕಿಂಗ್' (ದೇವರು ದೊರೆಯನ್ನು ರಕ್ಷಿಸಲಿ) ಎಂಬ ಆಂಗ್ಲ ರಾಷ್ಟ್ರಗೀತೆಯನ್ನು ತಪ್ಪದೆ ಹಾಡುತ್ತಿದ್ದರು. ನಾನೂ ಜೊತೆಗೆ ಹಾಡಬೇಕೆಂದು ನನಗೆ ತೋರುತ್ತಿದ್ದಿತು. ಆಗಕೂಡ ಬ್ರಿಟಿಷರ ಆಡಳಿತದಲ್ಲಿ ನನಗೆ ದೋಷಗಳು ಕಾಣುತ್ತಿರಲಿಲ್ಲವೆಂದಲ್ಲ. ಆದರೆ ನಾನು ಒಟ್ಟಿನಲ್ಲಿ ಅದು ಒಳ್ಳೆಯದೆಂದು ತಿಳಿದುಕೊಂಡಿದ್ದೆನು. ಆಗಿನ ಕಾಲದಲ್ಲಿ ನಾನು ಅದು ಒಟ್ಟಿನಲ್ಲಿ ಪ್ರಜೆಗಳಿಗೆ ಹಿತಕರವಾದುದೆಂದು ನಂಬಿದ್ದೆನು.

ದಕ್ಷಿಣ ಆಫ್ರಿಕದಲ್ಲಿ ನಾನು ಕಂಡ ಜಾತಿವರ್ಣದ್ವೇಷವು ಬ್ರಿಟಿಷರ ಸಂಪ್ರದಾಯಕ್ಕೆ ವಿರುದ್ಧವಾದುದೆಂದೂ ಕ್ಷಣಿಕವಾದುದೆಂದೂ ಸ್ಥಾನಿಕವಾದುದೆಂದೂ ನಂಬಿದ್ದೆನು. ಆದುದರಿಂದ ನಾನು ರಾಜನಿಷ್ಠೆಯಲ್ಲಿ ಇಂಗ್ಲಿಷರನ್ನು ಕೂಡ ಮೀರಿಸಲು ಪ್ರಯತ್ನಪಟ್ಟೆನು. ತಾಳ್ಮೆಗೆಡದೆ ಶ್ರಮಪಟ್ಟು ಆಂಗ್ಲ ರಾಷ್ಟ್ರಗೀತೆಯನ್ನು ಸರಿಯಾದ ರಾಗದಲ್ಲಿ ಹಾಡುವುದನ್ನು ಕಲಿತುಕೊಂಡೆನು. ಯಾವ ಸಭೆಯಲ್ಲಿ ಅದನ್ನು ಹಾಡಿದರೂ ತಪ್ಪದೆ ನಾನೂ ಜೊತೆಗೆ ಸೇರಿ ಹಾಡುತಿದ್ದೆನು. ಮತ್ತು ಆಡಂಬರವಿಲ್ಲದೆ ರಾಜಭಕ್ತಿಯನ್ನು ಸೂಚಿಸುವ ಸಂದರ್ಭವೊದಗಿದಾಗಲೆಲ್ಲಾ ನಾನೂ ಸೇರುತ್ತಿದ್ದೆನು.

ನನ್ನ ಜೀವಮಾನದಲ್ಲಿ ನಾನು ಯಾವಾಗಲೂ ಈ ರಾಜಭಕ್ತಿಯಿಂದ ಸ್ವಪ್ರಯೋಜನವನ್ನು ಸಾಧಿಸಲಿಲ್ಲ. ಅದರ ಮೂಲಕ ಸ್ವಕಾರ್ಯವನ್ನು ಕೈಗೂಡಿಸಲೆಳಸಲಿಲ್ಲ. ರಾಜಭಕ್ತಿಯಿಂದಿರುವುದು ನನ್ನ ಕರ್ತವ್ಯವೆಂದರಿತು ಅದರಿಂದ ಪ್ರತಿಫಲವನ್ನು ನಿರೀಕ್ಷಿಸದೆ ಆ ಕರ್ತವ್ಯವನ್ನು ನೆರವೇರಿಸುತ್ತಿದ್ದೆನು.

ನಾನು ಹಿಂದೂಸ್ಥಾನವನ್ನು ತಲಪಿದಾಗ ವಿಕ್ಟೋರಿಯಾ ಮಹಾರಾಣಿಯವರ "ಡೈಮಂಡ್ ಜೂಬಿಲಿ" (೬೦ನೆಯ ವರ್ಷದ ಶಾಂತಿ)ಗಾಗಿ ಸನ್ನಾಹವು ನಡೆಯುತ್ತಿದ್ದಿತು. ರಾಜಕೋಟೆಯಲ್ಲಿ ಇದಕ್ಕಾಗಿ ನೇಮಕವಾಗಿದ್ದ ಸಭೆಗೆ ನನ್ನನ್ನು ಸೇರಬೇಕೆಂದು ಕರೆದರು. ನಾನು ಅದಕ್ಕೆ ಒಪ್ಪಿದೆನು. ಆದರೆ ಈ ಉತ್ಸವವು ಬಹುಮಟ್ಟಿಗೆ ಆಡಂಬರದ ವಿಷಯವೆಂಬ ಸಂಶಯವು ನನಗಿದ್ದಿತು. ಇದರಲ್ಲಿ ಬಹುಭಾಗ ಇತರರ ಕಣ್ಣಿಗೆ ಮಣ್ಣೆರಚಲು ಮಾಡಿದುದೆಂದು ಕಂಡುಬಂದು ನನಗೆ ಬಹು ದುಃಖವಾಯಿತು. ಇಂತಹ ಸ್ಥಿತಿಯಲ್ಲಿ ನಾನು ಸಭೆಯಲ್ಲಿರುವುದು ಸರಿಯೋ ಅಲ್ಲವೋ ಎಂಬ ಯೋಚನೆಯುಂಟಾಗಿ ಕಡೆಗೆ ನನ್ನ ಭಾಗದ ಕೆಲಸವನ್ನು ಮಾಡಿ ತೃಪ್ತಿಯಿಂದಿರುವುದೆಂದು ನಿಶ್ಚಯಿಸಿದೆನು.

ಈ ಪ್ರಸ್ತಾಪಗಳಲ್ಲಿ ಗಿಡಗಳನ್ನು ನೆಡುವುದೂ ಒಂದಾಗಿದ್ದಿತು. ಡಂಭಾಚಾರಕ್ಕಾಗಿಯೂ ಅಧಿಕಾರ ವರ್ಗದವರನ್ನು ತೃಪ್ತಿಪಡಿಸುವುದಕ್ಕಾಗಿಯೂ ಅನೇಕರು ವೃಕ್ಷಾರೋಪಣದ ಉತ್ಸವವನ್ನು ಕೈಕೊಂಡಿದ್ದರೆಂಬುದನ್ನು ಕಂಡೆನು. ನಾನು "ಗಿಡಗಳನ್ನು ನೆಡುವುದು ಒತ್ತಾಯದ ಕೆಲಸವಲ್ಲ, ಕೇವಲ ಇಚ್ಛೆಯಿದ್ದರೆ ಮಾತ್ರ ಮಾಡತಕ್ಕದ್ದು. ಮಾಡುವುದಾದರೆ ಮನಸ್ಸಿಟ್ಟು ಮಾಡಬೇಕು, ಇಲ್ಲದಿದ್ದರೆ ಬೇಡ." ಎಂದು ಅವರಿಗೆ ತಿಳಿಯಹೇಳಲು ಪ್ರಯತ್ನಪಟ್ಟೆನು. ನನ್ನ ಅಭಿಪ್ರಾಯಗಳನ್ನು ಕೇಳಿ ಜನರು ನಕ್ಕರೆಂದು ನನಗೆ ಎಲ್ಲೋ ಸ್ವಲ್ಪ ನೆನಪಿದೆ. ನನಗೆ ಒಪ್ಪಿಸಿದ ಗಿಡವನ್ನು ಆಸಕ್ತಿಯಿಂದ ನೆಟ್ಟೆನೆಂದೂ ಎಚ್ಚರಿಕೆಯಿಂದ ನೀರೆರೆದು ಅದನ್ನು ಬೆಳೆಸಿದೆನೆಂದೂ ಜ್ಞಾಪಕವಿದೆ.

ನಮ್ಮ ಮನೆಯ ಹುಡುಗರಿಗೂ ಆಂಗ್ಲ ರಾಷ್ಟ್ರಗೀತೆಯನ್ನು ಕಲಿಸಿದೆನು. ನಾನು ಅಲ್ಲಿನ ಟ್ರೆಯಿನಿಂಗ್ ಕಾಲೇಜಿನ (ಶಿಕ್ಷಣವಿದ್ಯಾಲ

ಯದ) ಹುಡುಗರಿಗೂ ಇದನ್ನು ಹೇಳಿಕೊಟ್ಟಂತೆ ನೆನಪಿದೆ. ಇದರೆ ಇದೇ (ಜೂಬಿಲಿಯ) ಸಮಯದಲ್ಲಿಯೋ ಅಥವಾ ಏಳನೆಯ ಎಡ್ವರ್ಡರ ರಾಜ್ಯಾಭಿಷೇಕದ ಸಮಯದಲ್ಲಿಯೋ ಎನ್ನುವುದು ಮರೆತುಹೋಗಿದೆ. ಕೆಲವು ದಿನದ ಮೇಲೆ ಈ ಹಾಡು ನನಗೆ ಕರ್ಕಶವಾಗಿ ತೋರುತ್ತಾ ಬಂದಿತು. ಅಹಿಂಸಾತತ್ವವು ನನ್ನ ಹೃದಯದಲ್ಲಿ ವೃದ್ಧಿ ಹೊಂದುತ್ತಾ ಬಂದಹಾಗೆಲ್ಲಾ ನಾನು ನನ್ನ ಆಲೋಚನೆಯಲ್ಲಿಯೂ ಮಾತುಕತೆಯಲ್ಲಿಯೂ ಹೆಚ್ಚು ಜಾಗರೂಕತೆಯುಳ್ಳವನಾದೆನು. ಆ ಹಾಡಿನ

"ಅರಿಗಳ ಚದರಿಸಿ ತೊಡರಿಸಿ ಬೀಳಿಸಿ
ಅವರ ರಾಜ್ಯದಾಡಳಿತವ ಸಡಿಲಿಸಿ
ಅವರ ಕುತಂತ್ರವ ಭೇದಿಸು, ದೇವಾ!"

ಈ ಸಾಲುಗಳನ್ನು ಹಾಡಿದಾಗ ಅವು ನನ್ನ ಮನಸ್ಸಿಗೆ ಅಹಿಂಸಾತತ್ವಕ್ಕೆ ವಿರುದ್ಧವಾಗಿ ಕಾಣುತ್ತಿದ್ದುವು. ನನ್ನ ಈ ಅಭಿಪ್ರಾಯವನ್ನು ಡಾ. ಬೂತರಿಗೆ ತಿಳಿಸಿದೆನು. ಅವರೂ ಸಹ ಅಹಿಂಸೆಯಲ್ಲಿ ನಂಬಿಕೆಯುಳ್ಳ ಮನುಷ್ಯನು ಇದನ್ನು ಹಾಡುವುದು ಉಚಿತವಲ್ಲವೆಂದು ಅಭಿಪ್ರಾಯಪಟ್ಟರು. "ನಾವು ಶತ್ರುಗಳೆಂದು ಕರೆಯುತ್ತೇವಲ್ಲ, ಅವರು ಕುತಂತ್ರಗಾರರೆಂದು ಹೇಗೆ ಗೊತ್ತು? ಅವರನ್ನು ನಾವು ಶತ್ರುಗಳೆಂದೆಣಿಸಿದ ಮಾತ್ರಕ್ಕೆ ಅವರು ತಪ್ಪಿತಸ್ಥರೆಂದು ನಾವು ಹೇಳುವುದು ಹೇಗೆ? ದೇವರಿಂದ ನ್ಯಾಯಪಡೆಯಲು ಮಾತ್ರ ನಾವು ಪ್ರಾರ್ಥಿಸಬಹುದು." ಎಂದು ನಾನು ಹೇಳಿದೆನು. ಡಾ. ಬೂತರು ನನ್ನ ಈ ಅಭಿಪ್ರಾಯಗಳಿಗೆಲ್ಲಾ ಒಪ್ಪಿ ತಮ್ಮ ಮಂಡಲಿಗಾಗಿ ಹೊಸ ಸಂಕೀರ್ತನೆಯನ್ನು ರಚಿಸಿದರು. ಆದರೆ ಡಾ. ಬೂತರ ವಿಚಾರವನ್ನು ಮುಂದೆ ತಿಳಿಸುವೆನು.

ರಾಜಭಕ್ತಿಯಂತೆಯೇ ರೋಗಿಗಳ ಶುಶ್ರೂಷೆಯು ಕೂಡ ನನ್ನ ಸ್ವಭಾವದಲ್ಲಿ ಆಳವಾಗಿ ಬೇರೂರಿದ್ದಿತು. ರೋಗಿಗಳು ನನ್ನ ಬಂಧುಗಳಾಗಲಿ ಹೊರಗಿನವರೇ ಆಗಲಿ ಅವರನ್ನು ಉಪಚರಿಸುವುದರಲ್ಲಿ ನನಗೆ ಬಹು ಇಷ್ಟ.

ರಾಜಕೋಟೆಯಲ್ಲಿ ದಕ್ಷಿಣ ಆಫ್ರಿಕದ ವಿಚಾರವಾಗಿ ಪುಸ್ತಕವನ್ನು ಬರೆಯುತ್ತಿರುವಾಗ ನಾನು ಮುಂಬಯಿಗೆ ಶೀಘ್ರವಾಗಿ ಹೋಗಿ ಬರುವ

ಸಂದರ್ಭವೊದಗಿತು. ಮುಖ್ಯಮುಖ್ಯ ಪಟ್ಟಣಗಳಲ್ಲಿ ಸಭೆಗಳನ್ನೇರ್ಪಡಿಸಿ ಲೋಕಮತವನ್ನು ಸಿದ್ಧಪಡಿಸಬೇಕೆನ್ನುವುದು ನನ್ನ ಉದ್ದೇಶವಾಗಿದ್ದಿತು. ಇದಕ್ಕಾಗಿ ನಾನು ಮುಂಬಯಿಯನ್ನು ಮೊದಲು ಹಿಡಿದೆನು. ಅಲ್ಲಿ ಮೊಟ್ಟಮೊದಲು ಜಸ್ಟಿಸ್ (ನ್ಯಾಯಾಧೀಶ) ರಾನಡೆಯವರನ್ನು ಕಂಡೆನು. ಅವರು ನನ್ನ ಮಾತನ್ನು ಗಮನವಿಟ್ಟು ಕೇಳಿ ಸರ್ ಫಿರೋಜ್‌ಷಹಾ ಮೆಹತಾರವರನ್ನು ನೋಡೆಂದು ಸಲಹೆ ಕೊಟ್ಟರು. ಇದಾದಮೇಲೆ ನಾನು ನ್ಯಾಯಾಧೀಶರಾದ ಬದ್ರುದ್ದೀನ್ ತಯ್ಯಾಬ್‌ಜಿಯವರನ್ನು ನೋಡಿದೆನು. ಅವರೂ ಅದೇ ಸಲಹೆಯನ್ನು ಕೊಟ್ಟರು. ಅವರು "ರಾನಡೆಯವರಾಗಲಿ ನಾನಾಗಲಿ ನಿಮಗೆ ಅಷ್ಟೇನೂ ಸಹಾಯ ಮಾಡುವಹಾಗಿಲ್ಲ. ನಮ್ಮ ಸ್ಥಿತಿಯು ನಿಮಗೆ ಗೊತ್ತೇ ಇದೆ. ನಾವು ರಾಜಕೀಯ ವಿಚಾರಗಳಲ್ಲಿ ಕೈಹಾಕಲಾರೆವು. ಆದರೆ ನಮ್ಮ ಮನಸ್ಸೆಲ್ಲಾ ನಿಮ್ಮೊಡನೆಯೇ ಇದೆ. ನಿಮಗೆ ಸರಿಯಾಗಿ ದಾರಿ ತೋರಿಸುವವರು ಸರ್ ಫಿರೋಜ್‌ಷಹಾರವರೇ." ಎಂದು ಹೇಳಿದರು.

ನಾನು ಸರ್ ಫಿರೋಜ್‌ಷಹಾ ಮೆಹತಾರವರನ್ನೇನೋ ನೋಡಬೇಕೆಂದೇ ಇದ್ದೆನು. ಆದರೆ ಈ ಹಿರಿಯರಿಬ್ಬರೂ ನನಗೆ ಅವರನ್ನು ಹೋಗಿ ನೋಡೆಂದು ಹೇಳಿದುದರಿಂದ ಪ್ರಜೆಗಳ ಮೇಲೆ ಸರ್ ಫಿರೋಜ್‌ಷಹಾರವರಿಗಿದ್ದ ಪ್ರಭಾವವು ನನಗೆ ಚೆನ್ನಾಗಿ ಗೊತ್ತಾಯಿತು.

ನಾನು ಸರ್ ಫಿರೋಜ್‌ಷಹರನ್ನು ಹೋಗಿ ಕಂಡೆನು. ಅವರ ಸಮಕ್ಷದಲ್ಲಿ ನನ್ನ ಭಯಭಕ್ತಿಗಳು ಉದ್ರೇಕವಾಗುವುವೆಂದು ನಾನು ನಿರೀಕ್ಷಿಸಿದ್ದೆನು. ಜನರು ಅವರಿಗೆ ಕೊಟ್ಟಿದ್ದ ಬಿರುದುಗಳನ್ನೂ ಕೇಳಿದ್ದೆನು. "ಮುಂಬಯಿಯ ಸಿಂಹ"—"ಮುಂಬಯಿ ಅಧಿಪತ್ಯದ ಅನಭಿಷಿಕ್ತ ನರೇಶ" ರನ್ನೇ ನಾನು ನೋಡುವುದೆಂದು ನನಗೆ ತಿಳಿದಿದ್ದಿತು. ಆದರೆ ಈ "ನರೇಶ"ರು ನನ್ನನ್ನು ಭಯಭೀತನನ್ನಾಗಿ ಮಾಡಲಿಲ್ಲ. ಅವರು ಮಮತೆಯುಳ್ಳ ತಂದೆಯು ವಯಸ್ಸಿಗೆ ಬಂದ ಮಗನನ್ನು ಕಾಣುವಂತೆ ನನ್ನನ್ನು ಕಂಡರು. ಅವರನ್ನು ನಾನು ಅವರ ಕಚೇರಿಯಲ್ಲಿ ಭೆಟ್ಟಿ ಮಾಡಿದೆನು. ಅವರ ಸುತ್ತಮುತ್ತಲೂ ಅವರ ಅನುಯಾಯಿಗಳೂ ಮಿತ್ರರೂ ಇದ್ದರು. ಅವರಲ್ಲಿ ಮಿ. ಡಿ. ಇ. ವಾಚಾರವರೂ ಮಿ

ಕಾಮಾರವರೂ ಇದ್ದರು. ಇವರ ಪರಿಚಯವನ್ನು ನನಗೆ ಮಾಡಿಕೊಟ್ಟರು. ನಾನು ಇದಕ್ಕೆ ಮುಂಚೆಯೇ ವಾಚಾರ ಹೆಸರನ್ನು ಕೇಳಿದ್ದೆನು. ಇವರು ಸರ್ ಫಿರೋಜ್‌ಷಹರ ಬಲಭುಜವೆಂದೆನಿಸಲ್ಪಟ್ಟಿದ್ದರು. ವೀರಚಂದ ಗಾಂಧಿಯವರು ಇವರ ವಿಚಾರವಾಗಿ ಮಾತನಾಡುತ್ತಾ, ಇವರು ದೇಶದ ಸ್ಥಿತಿಗತಿಗಳನ್ನು ಬಹು ಸೂಕ್ಷ್ಮವಾಗಿ ಅರಿತವರೆಂದು ನನಗೆ ತಿಳಿಸಿದ್ದರು. ವಾಚಾರವರು "ಗಾಂಧೀ, ನಾನು ನಿಮ್ಮನ್ನು ಆಮೇಲೆ ನೋಡಬೇಕು." ಎಂದು ಹೇಳಿದರು.

ಈ ಗುರುತು ಪರಿಚಯದ ಕೆಲಸಕ್ಕೆಲ್ಲಾ ಎರಡು ನಿಮಿಷ ಕೂಡ ಹಿಡಿದಿರಲಾರದು. ಸರ್ ಫಿರೋಜ್‌ಷಹರು ನನ್ನ ಮಾತನ್ನು ಲಕ್ಷ್ಯವಿಟ್ಟು ಕೇಳಿದರು. ನಾನು ಅವರಿಗೆ ಜಸ್ಟಿಸ್ ರಾನಡೆ ಮತ್ತು ಜಸ್ಟಿಸ್ ತಯ್ಯಬ್ಜಿಯವರನ್ನು ನೋಡಿದೆನೆಂದು ಹೇಳಿದೆನು. ಅವರು 'ಗಾಂಧೀ, ನಾನು ನಿನಗೆ ಸಹಾಯ ಮಾಡಬೇಕೆಂದು ನನಗೆ ಕಾಣುತ್ತದೆ. ಇಲ್ಲಿ ಸಾರ್ವಜನಿಕ ಸಭೆಯೊಂದನ್ನು ನಡೆಸಬೇಕು.'' ಎಂದು ಹೇಳಿ ತಮ್ಮ ಸಹಾಯಕರಾದ ಮಿ. ಮುನ್ಷಿಯವರ ಕಡೆಗೆ ತಿರುಗಿ ಸಭೆಯನ್ನು ನಡೆಸಲು ಒಂದು ದಿನವನ್ನು ಗೊತ್ತುಮಾಡಬೇಕೆಂದು ಹೇಳಿದರು. ದಿನವು ನಿಶ್ಚಯವಾಯಿತು. ಅವರು ನನಗೆ ಸಭೆಯ ಹಿಂದಿನ ದಿನ ಅವರನ್ನು ನೋಡಬೇಕೆಂದು ಹೇಳಿ ನನ್ನನ್ನು ಬೀಳ್ಕೊಟ್ಟರು. ಈ ಭೆಟ್ಟಿಯಿಂದ ನನ್ನ ಹೆದರಿಕೆಯೆಲ್ಲಾ ಮಾಯವಾಯಿತು. ನಾನು ಬಹು ಸಂತೋಷಗೊಂಡು ಮನೆಗೆ ತೆರಳಿದೆನು.

ನಾನು ಮುಂಬಯಿಯಲ್ಲಿದ್ದಾಗ ಅಲ್ಲಿಯೇ ಕಾಹಿಲೆ ಮಲಗಿದ್ದ ನನ್ನ ಭಾವನನ್ನು ನೋಡಲು ಹೋದೆನು. ಆತನು ಅನುಕೂಲಸ್ಥನಾಗಿರಲಿಲ್ಲ. ನಮ್ಮಕ್ಕನಿಗೆ (ಆತನ ಹೆಂಡತಿ) ಒಬ್ಬಂಟಿಗಳಾಗಿ ಆತನಿಗೆ ಔಷಧಪಥ್ಯ ಮಾಡುವ ಶಕ್ತಿಯಿರಲಿಲ್ಲ. ಜಾಡ್ಯವು ಪ್ರಬಲವಾಗಿದ್ದಿತು. ನಾನು ಅವರಿಬ್ಬರನ್ನೂ ರಾಜಕೋಟೆಗೆ ಕರೆದುಕೊಂಡು ಹೋಗುವೆನೆಂದು ನಮ್ಮ ಭಾವನಿಗೆ ಹೇಳಿದೆನು. ಆತನು ಒಪ್ಪಲು ನಾನು ಅವರಿಬ್ಬರೊಡನೆ ಊರಿಗೆ ಹಿಂತಿರುಗಿದೆನು. ಕಾಹಿಲೆಯು ನಿರೀಕ್ಷಿಸಿದುದಕ್ಕಿಂತ ಹೆಚ್ಚು ಕಾಲ ಆತನನ್ನು ಮಲಗಿಸಿಬಿಟ್ಟಿತು. ನಾನು ಆತನನ್ನು

ನನ್ನ ಕೊಠಡಿಯಲ್ಲಿಟ್ಟುಕೊಂಡು ರಾತ್ರಿಹಗಲು ಅವನ ಹತ್ತಿರವೇ ಇರುತ್ತಿದ್ದೆನು. ನಾನು ರಾತ್ರಿ ಕೂಡ ಎಷ್ಟೋ ಹೊತ್ತು ಎದ್ದಿರಬೇಕಾಗುತ್ತಿದ್ದಿತು. ಆಗ ಆತನಿಗೆ ಶುಶ್ರೂಷೆ ಮಾಡುತ್ತಾ ದಕ್ಷಿಣ ಆಫ್ರಿಕಕ್ಕೆ ಸಂಬಂಧಪಟ್ಟ ಕೆಲಸವನ್ನೂ ಸಾಗಿಸುತ್ತಿದ್ದೆನು. ಕಟ್ಟಕಡೆಗೆ ಆತನು ಸ್ವರ್ಗವಾಸಿಯಾದನು. ಆದರೆ ಆತನ ಕಡೆಯ ದಿನಗಳಲ್ಲಿ ಆತನ ಸೇವೆಯನ್ನು ಮಾಡಲು ನನಗೆ ಅವಕಾಶ ದೊರೆತುದು ನನ್ನ ಮನಸ್ಸಿಗೆ ಬಹು ಸಮಾಧಾನದ ವಿಷಯವಾಗಿದ್ದಿತು.

ಶುಶ್ರೂಷೆ ಮಾಡುವುದರಲ್ಲಿ ನನಗಿದ್ದ ಈ ಅಭಿರುಚಿಯು ಬರಬರುತ್ತಾ ಎಷ್ಟರಮಟ್ಟಿಗೆ ಬೆಳೆಯಿತೆಂದರೆ ಅದಕ್ಕಾಗಿ ನಾನು ನನ್ನ ಕೆಲಸಕಾರ್ಯಗಳನ್ನೆಲ್ಲಾ ಬಿಟ್ಟುಬಿಡುತ್ತಿದ್ದೆನು—ಅನೇಕಬಾರಿ ನನ್ನ ಹೆಂಡತಿಯನ್ನು ಮಾತ್ರವಲ್ಲ, ಮನೆಯವರನ್ನೆಲ್ಲಾ ಈ ಕೆಲಸಕ್ಕೆ ಹಚ್ಚಿಬಿಡುತ್ತಿದ್ದೆನು.

ಇದು ಅಭಿರುಚಿಯ ಕೆಲಸವೆಂದು ಹೇಳುತ್ತೇನೆ. ಏಕೆಂದರೆ ಇದನ್ನು ಮಾಡುವುದರಲ್ಲಿ ಸಂತೋಷವಿಲ್ಲದಿದ್ದರೆ ಈ ಕೆಲಸವು ನಡೆಯುವುದಿಲ್ಲ. ಆಡಂಬರಕ್ಕಾಗಲಿ ಜನರ ಹೆದರಿಕೆಗಾಗಲಿ ಶುಶ್ರೂಷೆಯ ಕೆಲಸವನ್ನು ಕೈಕೊಂಡರೆ ಮನುಷ್ಯನ ಉತ್ಸಾಹವು ಕುಗ್ಗುವುದಲ್ಲದೆ ಅವನ ಹೃದಯವು ಸಂಕುಚಿತವಾಗುತ್ತದೆ. ಆನಂದವಿಲ್ಲದೆ ಮಾಡಿದ ಸೇವೆಯಿಂದ ಸೇವೆಮಾಡುವವನಿಗಾಗಲಿ ಮಾಡಿಸಿಕೊಂಡವನಿಗಾಗಲಿ ಲಾಭವುಂಟಾಗುವುದಿಲ್ಲ. ಆದರೆ ಮನಸ್ಸಿಟ್ಟು ಸಂತೋಷದಿಂದ ಮಾಡಿದ ಸೇವೆಯ ಮುಂದೆ ಐಶ್ವರ್ಯ, ಆರಾಮ ಮುಂತಾದುವೆಲ್ಲಾ ತುಚ್ಛವಾಗಿ ಕಾಣುತ್ತವೆ.

---

## ೨೭

# ಮುಂಬಯಿಯಲ್ಲಿ ನಡೆದ ಸಭೆ

ನಮ್ಮ ಭಾವನು ಸ್ವರ್ಗಸ್ಥನಾದ ಮರುದಿನವೇ ನಾನು ಸಭೆಗಾಗಿ ಮುಂಬಯಿಗೆ ಹೊರಡಬೇಕಾಯಿತು. ಸಾರ್ವಜನಿಕ ಸಭೆಯಲ್ಲಿ ಮಾತ ನಾಡುವುದಕ್ಕೋಸ್ಕರ ಆಲೋಚನೆಗೆ ನನಗೆ ಹೊತ್ತು ದೊರಕಿರಲಿಲ್ಲ. ರಾತ್ರಿ ಹಗಲು ಜಾಗರಣೆ ಮಾಡಿದ್ದುದರಿಂದಲೂ ಯೋಚನೆಯಿಂದಲೂ ನನಗೆ ಆಲಸ್ಯವಾಗಿದ್ದಿತು. ನನ್ನ ಗಂಟಲು ಒಡೆದುಹೋಗಿದ್ದಿತು. ಹೇಗಾದರೂ ನನ್ನನ್ನು ಪಾರುಮಾಡಿಸುವನೆಂದು ಭಗವಂತನಲ್ಲಿ ನಂಬಿಕೆ ಯಿಟ್ಟು ನಾನು ಮುಂಬಯಿಗೆ ಹೋದೆನು. ನನ್ನ ಭಾಷಣವನ್ನು ಬರೆಯಬೇಕೆಂಬ ಯೋಚನೆಯು ನನಗೆ ಕನಸಿನಲ್ಲಿಯೂ ಬಂದಿರಲಿಲ್ಲ.

ನಾನು ಸರ್ ಫಿರೋಜ್‌ಷಹರವರ ಅಪ್ಪಣೆಯ ಪ್ರಕಾರ ಸಭೆಯ ಹಿಂದಿನ ದಿನ ಸಂಜೆ ೫ ಗಂಟೆಗೆ ಅವರ ಕಚೇರಿಗೆ ಹೋದೆನು.

ಅವರು ' ಗಾಂಧೀ, ನಿನ್ನ ಭಾಷಣವು ಸಿದ್ಧವಾಗಿದೆಯೆ ?'' ಎಂದು ಕೇಳಿದರು.

ನಾನು ಹೆದರಿಕೆಯಿಂದ ನಡುಗುತ್ತಾ ''ಇಲ್ಲ. ನಾನು ಹಾಗೆಯೇ ಮಾತನಾಡಬೇಕೆಂದಿದ್ದೇನೆ.'' ಎಂದೆನು.

''ಮುಂಬಯಿಯಲ್ಲಿ ಅದು ನಡೆಯುವುದಿಲ್ಲ. ಇಲ್ಲಿ ವೃತ್ತಪತ್ರಿಕೆ ಯವರು ಭಾಷಣಗಳನ್ನು ಸರಿಯಾಗಿ ಬರೆದುಕೊಳ್ಳುವುದಿಲ್ಲ. ಈ ಸಭೆ ಯಿಂದ ನಮಗೆ ಪ್ರಯೋಜನವಾಗಬೇಕೆಂದಿದ್ದರೆ ಭಾಷಣವನ್ನು ಮುಂಚೆಯೇ ಬರೆಯಬೇಕು. ಮತ್ತು ಅದು ಬೆಳಕು ಹರಿಯುವುದ ರೊಳಗಾಗಿ ಅಚ್ಚಾಗಬೇಕು. ನಿನಗೆ ಭಾಷಣವನ್ನು ರಾತ್ರಿಯೊಳಗಾಗಿ ಬರೆಯುವುದಕ್ಕಾಗುತ್ತದೆ ತಾನೆ ?''

ನನಗೆ ಗಾಬರಿಯಾಯಿತು. ಆದರೂ ನಾನು ಪ್ರಯತ್ನಪಡುವು ದಕ್ಕೆ ಒಪ್ಪಿಕೊಂಡೆನು.

"ಹಾಗಾದರೆ ನೀನು ಬರೆದುದನ್ನು ತೆಗೆದುಕೊಂಡುಬರಲು ಮಿ. ಮುನ್ಷಿಯವರು ನಿನ್ನ ಬಳಿಗೆ ಎಷ್ಟು ಹೊತ್ತಿಗೆ ಬರಬೇಕು, ಹೇಳು."

"ಈ ದಿನ ರಾತ್ರಿ ಹನ್ನೊಂದು ಗಂಟೆಗೆ." ಎಂದೆನು.

ಮಾರನೆಯ ದಿನ ಸಭೆಗೆ ಹೋದಾಗ ಸರ್ ಫಿರೋಜ್‌ಷಹಾರವರ ಸಲಹೆಯಲ್ಲಿ ಎಷ್ಟು ಗುಣವಿದ್ದಿತೆಂದು ನನಗೆ ಗೊತ್ತಾಯಿತು. ಸಭೆಯು ಫ್ರಾಂಜೀ ಕಾವಸ್‌ಜೀ ಇನ್‌ಸ್ಟಿಟ್ಯೂಟಿನಲ್ಲಿ ನಡೆಯಿತು. ಸರ್ ಫಿರೋಜ್‌ಷಹರು ಮಾತನಾಡುವ ಸಭೆಗಳಲ್ಲೆಲ್ಲಾ ಎಳ್ಳು ಚೆಲ್ಲುವುದಕ್ಕೆ ಕೂಡ ಜಾಗ ಸಿಕ್ಕುತ್ತಿರಲಿಲ್ಲವೆಂದು ಕೇಳಿದ್ದೆನು. ಈ ಸಭೆಗಳು ಮುಖ್ಯವಾಗಿ ಸರ್ ಫಿರೋಜ್‌ಷಹರ ಭಾಷಣವನ್ನು ಕೇಳಲು ಕುತೂಹಲವುಳ್ಳ ವಿದ್ಯಾರ್ಥಿಗಳಿಂದ ತುಂಬಿರುತ್ತಿದ್ದುವು. ಇಂತಹ ಸಭೆಯ ಅನುಭವವು ನನಗೆ ಇದೇ ಮೊದಲನೆಯದಾಗಿದ್ದಿತು. ನನ್ನ ದನಿಯು ಯಾರಿಗೂ ಕೇಳಿಸುವುದಿಲ್ಲವೆಂದು ನನಗೆ ಗೊತ್ತಾಯಿತು. ನಾನು ನಡುಗುತ್ತಾ ನನ್ನ ಭಾಷಣವನ್ನೋದಲಾರಂಭಿಸಿದೆನು. ಸರ್ ಫಿರೋಜ್‌ಷಹರು, "ಇನ್ನೂ ಸ್ವಲ್ಪ ಗಟ್ಟಿಯಾಗಿ" ಎಂದು ಹೇಳುತ್ತಾ ನನಗೆ ಉತ್ತೇಜನವನ್ನು ಕೊಡುತ್ತಿದ್ದರು. ನನಗಾದರೋ ಅವರು ಉತ್ತೇಜನ ಕೊಟ್ಟಷ್ಟೂ ನನ್ನ ಧ್ವನಿಯು ಕುಗ್ಗಿಹೋಗುತ್ತಿದ್ದಿತೆಂದು ನೆನಪಿದೆ.

ನನ್ನ ಹಳೆಯ ಸ್ನೇಹಿತರಾದ ಶ್ರೀ. ಕೇಶವರಾವ್ ದೇಶಪಾಂಡೆಯವರು ನನ್ನ ಸಹಾಯಕ್ಕೆ ಬಂದರು. ನಾನು ನನ್ನ ಭಾಷಣವನ್ನು ಅವರ ಕೈಗೆ ಕೊಟ್ಟುಬಿಟ್ಟೆನು. ಅವರ ಧ್ವನಿಯು ಆ ಕೆಲಸಕ್ಕೆ ತಕ್ಕುದಾಗಿದ್ದಿತು. ಆದರೆ ಸಭಿಕರು ಕೇಳಿದರೆತಾನೆ! 'ವಾಚಾ!' 'ವಾಚಾ!' ಎಂಬ ಕೂಗಿನಿಂದ ಸಭಾಭವನವು ಪ್ರತಿಧ್ವನಿಸಿತು. ವಾಚಾರವರು ಎದ್ದುನಿಂತು ದೇಶಪಾಂಡೆಯವರಿಂದ ಭಾಷಣವನ್ನು ತೆಗೆದುಕೊಂಡು ಓದಿದರು. ನನ್ನ ಕೆಲಸವು ಮುಗಿಯಿತು. ಸಭಿಕರು ಒಡನೆಯೇ ಶಾಂತರಾಗಿ ಉಚಿತವಾದೆಡೆಗಳಲ್ಲಿ 'ಷೇಮ್!' ಷೇಮ್!' (ನಾಚಿಕೆಗೇಡು!) ಎಂದು ಕೂಗುತ್ತಲೂ ಚಪ್ಪಾಳೆ ತಟ್ಟುತ್ತಲೂ ಒಂದಕ್ಷರವೂ ತಪ್ಪದಂತೆ ಭಾಷಣವನ್ನು ಕಡೆಯವರೆಗೂ ಕೇಳಿದರು. ನಾನು ಸಂತುಷ್ಟನಾದೆನು.

ಸರ್ ಫಿರೋಜ್‌ಷಹರು ನನ್ನ ಭಾಷಣವನ್ನು ಮೆಚ್ಚಿದರು. ನನಗೆ ಗಂಗಾಸ್ನಾನ ಮಾಡಿದಷ್ಟು ಆನಂದವಾಯಿತು.

ಈ ಸಭೆಯ ಪರಿಣಾಮವಾಗಿ ನನಗೆ ದೇಶಪಾಂಡೆಯವರ ಮತ್ತು ಒಬ್ಬ ಪಾರಸೀ ಮಿತ್ರರ ಸಹಾನುಭೂತಿಯೂ ಸಹಾಯವೂ ದೊರಕಿದುವು. ಈ ಪಾರಸೀ ಮಿತ್ರರು ಈಗ ದೊಡ್ಡ ಸರಕಾರಿ ಪದವಿಯಲ್ಲಿರುವುದರಿಂದ ಅವರ ಹೆಸರನ್ನು ತಿಳಿಸಲು ಹಿಂಜರಿಯುತ್ತೇನೆ. ಇವರಿಬ್ಬರೂ ನನ್ನ ಜೊತೆಗೆ ದಕ್ಷಿಣ ಆಫ್ರಿಕಕ್ಕೆ ಬರುವೆವೆಂಬ ತಮ್ಮ ನಿಶ್ಚಯವನ್ನು ನನಗೆ ತಿಳಿಸಿದರು. ಈ ಪಾರಸೀ ಮಿತ್ರರ ಸಂಕಲ್ಪದಿಂದ ಅವರನ್ನು ಚಿಲ್ಲರೆ ವ್ಯಾಜ್ಯದ ಕೋರ್ಟಿನ ನ್ಯಾಯಾಧಿಪತಿಯಾಗಿದ್ದ ಸಿ. ಎಮ್. ಖುರ್ಸೇದ್‌ಜಿಯವರು ನಿಲ್ಲಿಸಿದರು. ಏಕೆಂದರೆ ಅವರು ಈ ಮಿತ್ರರ ಮದುವೆಗೆ ಸಂಧಾನ ನಡೆಸಿದ್ದರು. ಇವರು ಮದುವೆ ಮಾಡಿಕೊಳ್ಳಬೇಕೋ ಅಥವಾ ದಕ್ಷಿಣ ಆಫ್ರಿಕಕ್ಕೆ ತೆರಳಬೇಕೋ? ವಿವಾಹಕ್ಕೆ ನಿಲ್ಲುವುದೇ ಹೆಚ್ಚು ಉಚಿತವೆಂದು ಇವರಿಗೆ ತೋರಿತು. ಆದರೆ ಈ ಮಿತ್ರರಿಗೆ ಬದಲಾಗಿ ಪಾರಸೀ ರುಸ್ತುಂಜಿಯವರು ಪ್ರಾಯಶ್ಚಿತ್ತ ಮಾಡಿದರು. ಮತ್ತು ಸಂಕಲ್ಪಭಂಗಕ್ಕೆ ಕಾರಣರಾದ ಆ ಪಾರಸೀ ಸಹೋದರಿಗೆ ಬದಲಾಗಿ ಇತರ ಪಾರಸೀ ಸಹೋದರಿಯರು ಖಾದಿಯ ಉಪಾಸನೆಯ ಮೂಲಕ ಪ್ರಾಯಶ್ಚಿತ್ತ ಮಾಡುತ್ತಿದ್ದಾರೆ. ಆದುದರಿಂದ ನಾನು ಈ ದಂಪತಿಗಳನ್ನು ಸಂತೋಷದಿಂದ ಮನ್ನಿಸಿದ್ದೇನೆ. ದೇಶಪಾಂಡೆಯವರಿಗೆ ಮದುವೆಯ ಬಲೆಯೇನೂ ಅಡ್ಡವಾಗಿರಲಿಲ್ಲ. ಆದರೂ ಅವರಿಗೆ ದಕ್ಷಿಣ ಆಫ್ರಿಕಕ್ಕೆ ಬರಲಾಗಲಿಲ್ಲ. ಅವರು ಸಾಕಾದಷ್ಟು ಪ್ರಾಯಶ್ಚಿತ್ತವನ್ನು ತಾವೇ ಇಂದು ಕೂಡ ಮಾಡುತ್ತಿದ್ದಾರೆ. ನಾನು ದಕ್ಷಿಣ ಆಫ್ರಿಕಕ್ಕೆ ಹಿಂತಿರುಗಿ ಹೋಗುವಾಗ ಜಾಂಜಿಬಾರಿನಲ್ಲಿ ತಯ್ಯಬ್ಜಿ ಕುಟುಂಬದವರೊಬ್ಬರನ್ನು ನೋಡಿದೆನು. ಅವರೂ ನನ್ನೊಡನೆ ಬಂದು ಸಹಾಯ ಮಾಡುತ್ತೇನೆಂದು ಮಾತುಕೊಟ್ಟರು. ಆದರೆ ಅವರು ಬರಲೇ ಇಲ್ಲ. ಈ ತಪ್ಪಿಗಾಗಿ ಅಬ್ಬಾಸ್ ತಯ್ಯಬ್ಜಿಯವರು ಈಗ ಪ್ರಾಯಶ್ಚಿತ್ತ ಮಾಡುತ್ತಿದ್ದಾರೆ. ಹೀಗೆ ದಕ್ಷಿಣ ಆಫ್ರಿಕಕ್ಕೆ ಹೋಗಬೇಕೆಂದು ಬ್ಯಾರಿಸ್ಟರುಗಳನ್ನು ಪ್ರೇರಿಸಲು ನನ್ನ ಮೂರು ಪ್ರಯತ್ನಗಳೂ ನಿಷ್ಫಲವಾದುವು.

ಈ ಸಂದರ್ಭದಲ್ಲಿ ನನಗೆ ಪೆಸ್ತನ್‌ಜೀ ಪಾದಷಹರ ನೆನಪುಂಟಾಗುತ್ತದೆ. ನಾನು ವಿಲಾಯತಿಯಲ್ಲಿದ್ದಾಗಿನಿಂದಲೇ ಇವರೊಡನೆ ಪ್ರೇಮ ಸಂಬಂಧವನ್ನು ಬೆಳಸಿದ್ದೆನು. ಲಂಡನಿನ ಒಂದು ಶಾಕಾಹಾರದ ಹೋಟಲಿನಲ್ಲಿ ನನಗೆ ಇವರ ಪರಿಚಯವಾಯಿತು. ಇವರ ಸಹೋದರರಾದ ಬಜೋರ್‌ಜೀ ಪಾದಷಹರಿಗಿದ್ದ 'ಹುಚ್ಚ'ರೆಂಬ ಖ್ಯಾತಿಯಿಂದ ಅವರ ಹೆಸರು ನನಗೆ ಗೊತ್ತಿದ್ದಿತು. ಅವರನ್ನು ನಾನು ನೋಡಿರಲಿಲ್ಲ. ಆದರೆ ನನ್ನ ಮಿತ್ರರು ಅವರು ವಿಲಕ್ಷಣವಾದ ಮನುಷ್ಯರೆಂದು ನನಗೆ ತಿಳಿಸಿದ್ದರು. ಕುದುರೆಗಳಮೇಲಣ ಕರುಣದಿಂದ ಅವರು ಟ್ರ್ಯಾಂ ಗಾಡಿಗಳಲ್ಲಿ ಸಂಚಾರಮಾಡುತ್ತಿರಲಿಲ್ಲ. [ಆಗಿನ ಕಾಲದಲ್ಲಿ ಟ್ರ್ಯಾಂ ಗಾಡಿಗಳನ್ನು ಎಳೆಯುವುದಕ್ಕೆ ಕುದುರೆಗಳನ್ನು ಉಪಯೋಗಿಸುತ್ತಿದ್ದರು.] ಅವರ ಜ್ಞಾಪಕಶಕ್ತಿಯು ಅಗಾಧವಾಗಿದ್ದಿತಾದರೂ ಅವರು ವಿದ್ಯಾಲಯದ ಪದವಿಗಳನ್ನು ನಿರಾಕರಿಸುತ್ತಿದ್ದರು. ಅವರು ಬಹು ಸ್ವತಂತ್ರ ಸ್ವಭಾವದವರು. ಅವರು ಪಾರಸಿಯವರಾಗಿದ್ದರೂ ಶಾಕಾಹಾರಿಗಳಾಗಿದ್ದರು. ಪೆಸ್ತನ್‌ಜಿಯವರಿಗೆ ಇಷ್ಟರಮಟ್ಟಿನ ಪ್ರಖ್ಯಾತಿಯಿಲ್ಲದಿದ್ದರೂ ಅವರ ಪಾಂಡಿತ್ಯವು ಲಂಡನಿನಲ್ಲಿಯೂ ಪ್ರಸಿದ್ಧವಾಗಿದ್ದಿತು. ಆದರೆ ನಾವಿಬ್ಬರೂ ಶಾಕಾಹಾರಿಗಳಾಗಿದ್ದುದೇ ನಮ್ಮ ಸಂಬಂಧಕ್ಕೆ ಆಧಾರವಾಗಿದ್ದಿತು—ಅವರ ಪಾಂಡಿತ್ಯವಲ್ಲ. ಏಕೆಂದರೆ ಪಾಂಡಿತ್ಯದಲ್ಲಿ ಅವರೊಡನೆ ಸರಿದೂಗುವುದು ನನ್ನ ಶಕ್ತಿಗೆ ಮಿಗಿಲಾಗಿದ್ದಿತು.

ನಾನು ಅವರನ್ನು ಪುನಃ ಮುಂಬಯಿಯಲ್ಲಿ ಕಂಡುಹಿಡಿದೆನು. ಅವರು ಅಲ್ಲಿನ ಹೈ ಕೋರ್ಟಿನಲ್ಲಿ ಪ್ರೋಥೋನೋಟರಿ [ಕೋರ್ಟಿನ ಒಬ್ಬ ಅಧಿಕಾರಿ] ಯಾಗಿದ್ದರು. ನಾನು ಅವರನ್ನು ಕಂಡಾಗ ಅವರು ಒಂದು ದೊಡ್ಡ ಗುಜರಾತೀ ಶಬ್ದಕೋಶವನ್ನು ಸಿದ್ಧಪಡಿಸುವ ಕೆಲಸದಲ್ಲಿ ನಿರತರಾಗಿದ್ದರು. ನನಗೆ ದಕ್ಷಿಣ ಆಫ್ರಿಕದ ಕೆಲಸದಲ್ಲಿ ಸಹಾಯ ಮಾಡಬೇಕೆಂದು ನಾನು ಕೇಳಿಕೊಳ್ಳದ ಸ್ನೇಹಿತರೇ ಇಲ್ಲ. ಪೆಸ್ತನ್‌ಜೀಯವರು ನನಗೆ ಸಹಾಯ ಮಾಡುವುದಿಲ್ಲವೆಂದು ಹೇಳಿದುದಷ್ಟೇ ಅಲ್ಲ. ನನಗೂ ದಕ್ಷಿಣ ಆಫ್ರಿಕಕ್ಕೆ ಹೋಗಬೇಡವೆಂದು ಬೋಧಿಸಿದರು.

"ನನ್ನಿಂದ ನಿನಗೆ ಏನು ಸಹಾಯವಾದೀತು ? ನೀನು ದಕ್ಷಿಣ ಆಫ್ರಿಕಕ್ಕೆ ಹೋಗುವುದು ಕೂಡ ನನಗೆ ಇಷ್ಟವಿಲ್ಲ. ನಮ್ಮ ದೇಶದಲ್ಲಿ ಕೆಲಸಕ್ಕೆ ಕೊರತೆಯೆ? ನೋಡು, ನಮ್ಮ ಭಾಷೆಗೆ ಮಾಡಬೇಕಾದ ಸೇವೆ ಕೂಡ ಕಡಿಮೆಯಾಗಿದೆಯೇನು? ನಾನು ವಿಜ್ಞಾನವಿಷಯಕಗಳಾದ ಶಬ್ದಗಳನ್ನು ಹುಡುಕಬೇಕು. ಆದರೆ ಇದು ನಾವು ಮಾಡಬೇಕಾದ ಕೆಲಸಗಳಲ್ಲಿ ಕೇವಲ ಒಂದು ಶಾಖೆ. ದೇಶದ ಬಡತನವನ್ನು ಯೋಚಿಸು. ದಕ್ಷಿಣ ಆಫ್ರಿಕದಲ್ಲಿರುವ ನಮ್ಮ ಜನರು ಕಷ್ಟದಲ್ಲಿರುವುದೇನೋ ನಿಜ. ಆದರೆ ನಿನ್ನಂತಹರು ಆ ಕೆಲಸದಲ್ಲಿ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸುವುದು ನನಗೆ ಇಷ್ಟವಿಲ್ಲ. ನಾವು ಇಲ್ಲಿ ಸ್ವರಾಜ್ಯವನ್ನು ಸಂಪಾದಿಸೋಣ. ಆಗ ಅಲ್ಲಿನ ನಮ್ಮ ಜನರಿಗೆ ತನ್ನಷ್ಟಕ್ಕೆ ತಾನೇ ಸಹಾಯ ದೊರಕುತ್ತದೆ. ನಿನ್ನನ್ನು ಒಪ್ಪಿಸಲಾರೆನೆಂದು ನನಗೆ ಗೊತ್ತು. ಆದರೆ ನಿನ್ನ ಜೊತೆಗೆ ನಿನ್ನಂತಹ ಇತರರನ್ನು ಕಳುಹಿಸುವುದರಲ್ಲಿ ನಾನು ಭಾಗಿಯಾಗುವುದಿಲ್ಲ." ಎಂದು ಹೇಳಿದರು.

ನನಗೆ ಈ ಸಲಹೆಯು ರುಚಿಸಲಿಲ್ಲವಾದರೂ ಇದರಿಂದ ನನಗೆ ಪೆಸ್ತನ್‌ಜೀ ಪಾದಷಹರಲ್ಲಿದ್ದ ಗೌರವವು ಹೆಚ್ಚಿತು. ಅವರ ದೇಶಪ್ರೇಮವನ್ನೂ ಭಾಷಾಪ್ರೇಮವನ್ನೂ ನೋಡಿ ನನಗೆ ಆಶ್ಚರ್ಯವಾಯಿತು. ನಮ್ಮಿಬ್ಬರ ಮಧ್ಯೆ ಇದ್ದ ಪ್ರೇಮಬಂಧನವು ಈ ಪ್ರಸಂಗದಿಂದ ಇನ್ನೂ ಬಲಪಟ್ಟಿತು. ನಾನೂ ಅವರ ದೃಷ್ಟಿಯಿಂದ ನೋಡಲು ಶಕ್ತನಾದೆನು. ಆದರೆ ದಕ್ಷಿಣ ಆಫ್ರಿಕದ ಕೆಲಸವನ್ನು ಬಿಡುವುದರ ಬದಲು ಆ ಕೆಲಸವನ್ನು ಸಾಧಿಸಬೇಕೆಂಬ ಸಂಕಲ್ಪವು ದೃಢತರವಾಯಿತು. ದೇಶಪ್ರೇಮಿಯು ಸಾಧ್ಯವಾದಮಟ್ಟಿಗೂ ದೇಶಸೇವೆಯ ಯಾವ ಅಂಗವನ್ನೂ ಅಸಡ್ಡೆ ಮಾಡಲಾರನು. ನನಗಂತೂ ಗೀತೆಯ ಶ್ಲೋಕವು ಕಣ್ಣಿಗೆ ಕಟ್ಟಿದಂತಿದ್ದಿತು :

" ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ
ಪರಧರ್ಮೋ ಭಯಾವಹಃ ॥"

[ಒಳ್ಳೆಯ ರೀತಿಯಿಂದ ಆಚರಿಸಿದ ಇತರರ ಧರ್ಮಕ್ಕಿಂತಲೂ ತನ್ನ ಗುಣ ರಹಿತವಾದ ಧರ್ಮವು ಕೂಡ ಶ್ರೇಷ್ಠವಾದುದು. ಸ್ವಧರ್ಮದಲ್ಲಿ ಸಾಯುವುದು ಕೂಡ ಒಳ್ಳೆಯದು. ಪರಧರ್ಮವು ಭಯವನ್ನುಂಟುಮಾಡುವುದಾಗಿದೆ.]



೨೮

# ಪೂನಾ ಮತ್ತು ಮದರಾಸಿನಲ್ಲಿ

ಸರ್ ಫಿರೋಜ್‌ಷಹಾರವರು ನನ್ನ ದಾರಿಯನ್ನು ಸುಲಭವಾಗಿ ಮಾಡಿದ್ದರು. ನಾನು ಮುಂಬಯಿಯಿಂದ ಪೂನಾಕ್ಕೆ ಹೋದೆನು. ಇಲ್ಲಿ ಎರಡು ಪಕ್ಷಗಳಿದ್ದುವು. ನನಗೆ ಎಲ್ಲಾ ಪಂಗಡದವರ ಸಹಾಯವೂ ಬೇಕಾಗಿದ್ದಿತು. ನಾನು ಮೊದಲು ಲೋಕಮಾನ್ಯ ತಿಲಕರನ್ನು (ಓ) ಕಂಡೆನು. ಅವರು ನನಗೆ ಹೀಗೆ ಹೇಳಿದರು:—

"ಎಲ್ಲಾ ಪಂಗಡಗಳ ಸಹಾಯವನ್ನೂ ಸಂಪಾದಿಸಬೇಕೆನ್ನುವ ನಿಮ್ಮ ಉದ್ದೇಶವು ಸರಿಯೇ. ದಕ್ಷಿಣ ಆಫ್ರಿಕದ ಸಮಸ್ಯೆಯ ವಿಚಾರವಾಗಿ ಇಲ್ಲಿ ಮತಭೇದವಿರಲು ಸಾಧ್ಯವಿಲ್ಲ. ಆದರೆ ನಿಮ್ಮ ಸಭೆಯ ಅಗ್ರಾಸನವನ್ನು ವಹಿಸಲು ಯಾವ ಪಂಗಡಕ್ಕೂ ಸೇರದಿರುವವರನ್ನು ಹಿಡಿಯಬೇಕು. ನೀವು ಪ್ರೊಫೆಸರ್ ಭಂಡಾರಕರರನ್ನು (ಔ) ಹೋಗಿ ನೋಡಿ. ಅವರು ಈಚೆಗೆ ಯಾವ ಚಳವಳಿಗೂ ಸೇರುತ್ತಿಲ್ಲ. ಒಂದು ವೇಳೆ ಈ ಪ್ರಶ್ನೆಯು ಅವರನ್ನು ಹೊರಕ್ಕೆ ಎಳೆಯಬಹುದು. ಅವರನ್ನು ನೋಡಿದಮೇಲೆ ಅವರು ಏನು ಹೇಳುತ್ತಾರೋ ನನಗೆ ತಿಳಿಸಿ. ನಾನು ನಿಮಗೆ ನನ್ನ ಕೈಲಾದಷ್ಟು ಸಹಾಯ ಮಾಡಬೇಕೆಂದಿದ್ದೇನೆ. ನಿಮ್ಮ ಇಷ್ಟ ಬಂದಾಗ ನನ್ನ ಬಳಿಗೆ ಬರಬಹುದು."

ಇದೇ ನನಗೆ ಲೋಕಮಾನ್ಯರ ಮೊದಲನೆಯ ದರ್ಶನ. ಅವರಲ್ಲಿ ಜನಗಳಿಗೆ ಅಸಾಧಾರಣ ಪ್ರಿತಿಯಿದ್ದುದೇಕೆಂದು ನನಗೆ ಒಡನೆಯೇ ಗೊತ್ತಾಯಿತು.

ಅಲ್ಲಿಂದ ನಾನು ಗೋಖಲೆಯವರ (ಕ) ಬಳಿಗೆ ಹೋದೆನು. ಅವರು ಫರ್ಗ್ಯುಸನ್ ಕಾಲೇಜಿನಲ್ಲಿದ್ದರು. ಅವರು ನನ್ನನ್ನು ಬಹು ವಾತ್ಸಲ್ಯದಿಂದ ಬರಮಾಡಿಕೊಂಡರು. ಅವರ ರೀತಿಯನ್ನು ನೋಡಿದೊಡನೆಯೇ ನಾನು ಅವರಿಗೆ ಮನಸ್ಸನ್ನು ಸೋತೆನು. ಅವರನ್ನು ನೋಡಿದುದೂ

ಇದೇ ಮೊದಲು. ಆದರೂ ನಮ್ಮ ಭೆಟ್ಟಿಯು ಹಳೆಯ ಸ್ನೇಹಿತರು ಪುನಃ ಒಬ್ಬರನ್ನೊಬ್ಬರು ನೋಡಿದಂತಿದ್ದಿತು. ಸರ್ ಫಿರೋಜ್‌ಷಹರು ನನಗೆ ಹಿಮಾಲಯದಂತೆಯೂ ಲೋಕಮಾನ್ಯರು ಸಮುದ್ರದಂತೆಯೂ ತೋರಿದರು. ಆದರೆ ಗೋಖಲೆಯವರಾದರೋ ಗಂಗೆಯಂತಿದ್ದರು. ಗಂಗೆಯಲ್ಲಿ ಯಾರಾದರೂ ಮಿಂದು ಆನಂದಿಸಬಹುದು. ಹಿಮಾಲಯ ವನ್ನೇರುವುದು ಆಗದಮಾತು. ಸಮುದ್ರಕ್ಕೆ ಬೀಳಲು ದಿಗಿಲಾಗುತ್ತದೆ. ಆದರೆ ಗಂಗೆಯು ತನ್ನ ತೊಡೆಯಮೇಲೆ ಆಟವಾಡಲು ಕರೆಯುತ್ತದೆ. ಗಂಗೆಯಲ್ಲಿ ದೋಣಿಯನ್ನು ನಡಸಿ ಸುಖಿಸಬಹುದು. ಶಾಲೆಗೆ ಸೇರಿಸು ವುದಕ್ಕೆ ಮುಂಚೆ ಹುಡುಗರನ್ನು ಶಿಕ್ಷಕರು ಪರೀಕ್ಷಿಸುವಂತೆ ಗೋಖಲೆ ಯವರು ನನ್ನನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಅವರು ನನಗೆ ಯಾರು ಯಾರನ್ನು ನೋಡಬೇಕು, ಯಾವ ರೀತಿಯಾಗಿ ನೋಡಬೇಕು ಎಂಬುದನ್ನು ತಿಳಿಸಿದರು. ಅವರು ನನ್ನ ಭಾಷಣವನ್ನು ನೋಡಲಿಚ್ಛಿಸಿ ದರು. ನನಗೆ ಕಾಲೇಜಿನ ವ್ಯವಸ್ಥೆಯನ್ನು ತೋರಿಸಿದರು. ನನಗೆ ಸಹಾಯಮಾಡಲು ತಾವು ಸದಾ ಸಿದ್ಧರಾಗಿರುವರೆಂದೂ ಡಾ. ಭಂಡಾರ ಕರರ ಉತ್ತರವನ್ನು ತಿಳಿಸಬೇಕೆಂದೂ ಹೇಳಿ ನನ್ನನ್ನು ಅತಿಶಯ ಸುಖಿ ಯನ್ನಾಗಿ ಮಾಡಿ ಬೀಳ್ಕೊಟ್ಟರು. ರಾಜಕೀಯ ಕ್ಷೇತ್ರದಲ್ಲಿ ಗೋಖಲೆ ಯವರು ತಾವು ಜೀವಂತರಾಗಿದ್ದಾಗ ನನ್ನ ಹೃದಯದಲ್ಲಿ ಯಾವ ಸ್ಥಾನ ವನ್ನಾಕ್ರಮಿಸಿದ್ದರೋ ತಮ್ಮ ದೇಹಾಂತವಾದಮೇಲೆ ಕೂಡ ಯಾವ ಸ್ಥಾನವನ್ನಾಕ್ರಮಿಸಿರುವರೋ ಅದು ಅನನ್ಯವಾದುದು.

ಮಗನನ್ನು ತಂದೆಯು ಕಾಣುವಂತೆ ರಾಮಕೃಷ್ಣ ಭಂಡಾರಕರರು ನನ್ನನ್ನು ಪ್ರೇಮದಿಂದ ಬರಮಾಡಿಕೊಂಡರು. ನಾನು ಅವರನ್ನು ನೋಡುವುದಕ್ಕೆ ಹೋದಾಗ ನಡುವಗಲಾಗಿದ್ದಿತು. ಅಷ್ಟು ಹೊತ್ತಿನಲ್ಲಿ ನಾನು ನನ್ನ ಕೆಲಸವನ್ನು ಮಾಡುತ್ತಿದ್ದೆನೆನ್ನುವುದನ್ನು ನೋಡಿಯೇ ಎಷ್ಟು ಕೆಲಸ ಮಾಡಿಯೂ ಬೇಸರಪಡದ ಈ ವಿದ್ವಾಂಸರಿಗೆ ಸಂತೋಷ ವಾಯಿತು. ಯಾವ ಪಂಗಡಕ್ಕೂ ಸೇರದೆ ತಟಸ್ಥರಾದವರೇ ಸಭೆಗೆ ಅಧ್ಯಕ್ಷರಾಗಬೇಕೆಂದು ನಾನು ಹೇಳಿದುದನ್ನು ಕೇಳಿ ಒಡನೆಯೇ

ಅವರು 'ದಟ್ಸಿಟ್!' 'ದಟ್ಸಿಟ್!' (ಅದೇ ಸರಿ! ಅದೇ ಸರಿ!) ಎಂದು ಹೇಳುತ್ತಾ ತಮ್ಮ ಮನಸ್ಸಿನ ಒಪ್ಪಿಗೆಯನ್ನು ವ್ಯಕ್ತಪಡಿಸಿದರು.

ನನ್ನ ಮಾತನ್ನು ಕೇಳಿದಮೇಲೆ ಅವರು "ಯಾರನ್ನು ಬೇಕಾದರೂ ಕೇಳಿನೋಡಿ. ಇತ್ತೀಚಿಗೆ ನಾನು ರಾಜಕೀಯ ವಿಚಾರಕ್ಕೆ ಸೇರು ವುದಿಲ್ಲವೆಂದು ಒಡನೆಯೇ ಹೇಳುತ್ತಾರೆ. ಆದರೆ ನಾನು ನಿಮ್ಮ ಮಾತನ್ನು ಅಲ್ಲಗಳೆಯಲಾರೆನು. ನೀವು ವಾದಿಸುವ ಪಕ್ಷವು ಎಷ್ಟು ಬಲವಾಗಿದೆ ಮತ್ತು ನಿಮ್ಮ ಉದ್ಯಮವು ಎಷ್ಟು ಸ್ತುತ್ಯವಾಗಿದೆಯೆಂದರೆ ನಾನು ನಿಮ್ಮ ಸಭೆಗೆ ಬರುವುದಿಲ್ಲವೆಂದು ಹೇಳಲಾರೆನು. ನೀವು ತಿಲಕರನ್ನೂ ಗೋಖಲೆಯವರನ್ನೂ ನೋಡಿದುದೂ ಒಳ್ಳೆಯದೇ ಆಯಿತು. ಎರಡು ಪಕ್ಷದವರೂ ಸೇರಿ ನಡೆಸುವ ಸಭೆಗೆ ಅಧ್ಯಕ್ಷನಾಗಲು ನಾನು ಸಂತೋಷದಿಂದ ಒಪ್ಪಿರುತ್ತೇನೆಂದು ಅವರಿಗೆ ತಿಳಿಸಿ. ಯಾವಾಗ ಸಭೆಯನ್ನು ನಡೆಸಬೇಕೆಂದು ನೀವು ನನ್ನನ್ನು ಕೇಳಬೇಕಾದುದಿಲ್ಲ. ಎರಡು ಪಂಗಡದ ವರಿಗೂ ಯಾವಾಗ ಅನುಕೂಲವೋ ಆಗ ನನಗೂ ಅನುಕೂಲವೇ." ಎಂದು ತಿಳಿಸಿ ಅವರು ನನಗೆ ಧನ್ಯವಾದವನ್ನು ಹೇಳಿ ನನ್ನನ್ನು ಆಶೀರ್ವದಿಸಿ ಬೀಳ್ಕೊಟ್ಟರು.

ಯಾವ ಅಟ್ಟಹಾಸವೂ ಯಾವ ಆಡಂಬರವೂ ಇಲ್ಲದೆ ಒಂದು ಸಾಧಾರಣವಾದ ಮನೆಯಲ್ಲಿ ಸಭೆಯನ್ನು ನಡೆಸಿ ಈ ವಿದ್ವಾಂಸರೂ ಸ್ವಾರ್ಥತ್ಯಾಗಿಗಳೂ ಆದ ಸಜ್ಜನರ ಮಂಡಲಿಯು ನನ್ನನ್ನು ಹುರಿದುಂಬಿಸಿ ಸುಖಿಯನ್ನಾಗಿ ಮಾಡಿ ಕಳುಹಿಸಿಕೊಟ್ಟಿತು.

ಅಲ್ಲಿಂದ ನಾನು ಮದರಾಸಿಗೆ ಹೋದೆನು. ಮದರಾಸಿಗಂತೂ ಅತ್ಯುತ್ಸಾಹದಿಂದ ಹುಚ್ಚು ಹಿಡಿದುಹೋಯಿತು. ಬಾಲಸುಂದರನ ಮೊಕದ್ದಮೆಯು ಸಭೆ ಸೇರಿದ್ದವರ ಮನಸ್ಸನ್ನು ತಟ್ಟಿತು. ನನ್ನ ಭಾಷಣವು—ಅದು ಅಚ್ಚಾಗಿದ್ದಿತು—ನನಗೆ ಉದ್ದವಾಗಿದ್ದಿತೆಂದೇ ಹೇಳಬೇಕು. ಆದರೆ ಸಭಿಕರು ಅದರ ಪ್ರತಿಯೊಂದು ಶಬ್ದವನ್ನೂ ಕಿವಿಗೊಟ್ಟು ಕೇಳಿದರು. ಸಭೆಯು ಮುಗಿಯುವುದಕ್ಕಿಂತ ಮುಂಚೆ ಹಸುರು ಪುಸ್ತಕಗಳೆಲ್ಲಾ 'ಲೂಟಿ'ಯಾಗಿ ಹೋದುವು. ಮದರಾಸಿನಲ್ಲಿ ಸಂಶೋಧನೆ ಮಾಡಿ ಇನ್ನೂ ೧೦,೦೦೦ ಪ್ರತಿಗಳನ್ನು ಛಾಪಿಸಿದೆನು. ಅವು ಬಿಸಿಬಿಸಿ

ದೋಸೆಗಳಂತೆ ಖರ್ಚಾದುವು. ಆದರೆ ಅಷ್ಟೊಂದು ಪ್ರತಿಗಳನ್ನು ಅಚ್ಚುಹಾಕಿಸುವ ಆವಶ್ಯಕತೆಯಿರಲಿಲ್ಲವೆಂದು ನನಗೆ ಗೊತ್ತಾಯಿತು. ನನ್ನ ಅತ್ಯುತ್ಸಾಹದಿಂದ ನಾನು ಹೆಚ್ಚಾಗಿ ಅಂದಾಜು ಹಾಕಿದ್ದೆನು. ನನ್ನ ಭಾಷಣವು ಇಂಗ್ಲಿಷ್ ಮಾತನಾಡುವುದಕ್ಕೆ ಬರುವವರ ಹೃದಯವನ್ನು ಮಾತ್ರ ಹೊಕ್ಕಿದ್ದಿತು. ಮದರಾಸಿನಲ್ಲಿ ಕೇವಲ ಇಂತಹ ಮಂದಿಯೇ ಹತ್ತುಸಾವಿರ ಪ್ರತಿಗಳನ್ನು ಕೊಳ್ಳುವಂತಿರಲಿಲ್ಲ.

ಅಲ್ಲಿ ನನಗೆ ದಿವಂ. ಜಿ. ಪರಮೇಶ್ವರಂ ಪಿಳ್ಳೆಯವರಿಂದ ಎಲ್ಲಕ್ಕಿಂತ ಹೆಚ್ಚಾದ ಸಹಾಯವು ದೊರಕಿತು. ಅವರು 'ಮದ್ರಾಸ್ ಸ್ಟ್ಯಾಂಡರ್ಡ್' ಪತ್ರಿಕೆಯ ಸಂಪಾದಕರಾಗಿದ್ದರು. ಅವರು ದಕ್ಷಿಣ ಆಫ್ರಿಕದ ಸಮಸ್ಯೆಗೆ ಸಂಬಂಧಪಟ್ಟ ವಿಷಯಗಳನ್ನು ಬಹು ಲಕ್ಷ್ಯವಿಟ್ಟು ತಿಳಿದುಕೊಂಡಿದ್ದರು. ಅನೇಕ ಬಾರಿ ನನ್ನನ್ನು ಅವರ ಕಚೇರಿಗೆ ಕರೆದು ನನ್ನ ಕೆಲಸದಲ್ಲಿ ನನಗೆ ದಾರಿಯನ್ನು ತೋರಿಸಿಕೊಡುತ್ತಿದ್ದರು. 'ಹಿಂದೂ' ಪತ್ರಿಕೆಯ ಸಂಪಾದಕರಾದ ಜಿ. ಸುಬ್ರಹ್ಮಣ್ಯಂರವರನ್ನೂ ನಾನು ಕಂಡಿದ್ದೆನು. ಅವರೂ ಡಾ. ಸುಬ್ರಹ್ಮಣ್ಯಂರವರೂ ಕೂಡ ಬಹಳ ಸಹಾನುಭೂತಿಯನ್ನು ತೋರಿಸಿದರು. ಆದರೆ ಜಿ. ಪರಮೇಶ್ವರಂ ಪಿಳ್ಳೆಯವರು ನನ್ನ ಈ ಕಾರ್ಯಕ್ಕಾಗಿ ತಮ್ಮ ಸಮಾಚಾರಪತ್ರವನ್ನು ಉಪಯೋಗಿಸಲು ನನಗೆ ಪೂರ್ಣಾವಕಾಶಕೊಟ್ಟರು. ನಾನೂ ಬೇಕಾದಹಾಗೆ ಅದನ್ನು ಉಪಯೋಗಿಸಿದೆನು. ನನಗೆ ಜ್ಞಾಪಕವಿರುವ ಮಟ್ಟಿಗೆ ಸಭೆಯು ಪಚ್ಚೆಯಪ್ಪನವರ ಕಟ್ಟಡದಲ್ಲಿ ಡಾ. ಸುಬ್ರಹ್ಮಣ್ಯಂರವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮದರಾಸಿನಲ್ಲಿ ಅನೇಕಜನರು ನನ್ನ ಮೇಲೆ ಪ್ರೇಮದ ಮಳೆಯನ್ನು ಕರೆದರು. ಅವರ ಉತ್ಸಾಹವು ಎಷ್ಟು ಅಧಿಕವಾಗಿದ್ದಿತೆಂದರೆ ನಾನು ಅವರೊಡನೆ ಮಾತನಾಡಬೇಕಾದರೆ ಇಂಗ್ಲಿಷಿನಲ್ಲಿಯೇ ಮಾತನಾಡಬೇಕಾಗಿದ್ದಿತಾದರೂ ನಾನು ಕೇವಲ ನಮ್ಮ ಮನೆಯವರೊಡನೆ ನೆರೆದಂತೆ ನನಗೆ ತೋರುತ್ತಿದ್ದಿತು. ಪ್ರೇಮವು ಬಿಡಿಸಲಾರದ ಬಂಧನವುಂಟೆ?

## ೨೯

## 'ಜಾಗ್ರತೆಯಾಗಿ ಹಿಂತಿರುಗು'

ಮದರಾಸಿನಿಂದ ನಾನು ಕಲ್ಕತ್ತೆಗೆ ಹೋದೆನು. ಅಲ್ಲಿ ನನಗುಂಟಾದ ತೊಂದರೆಗಳಿಗೆ ಪಾರವೇ ಇರಲಿಲ್ಲ. ನನಗೆ ಅಲ್ಲಿ ಯಾರ ಪರಿಚಯವೂ ಇರಲಿಲ್ಲವಾದುದರಿಂದ ಅಲ್ಲಿನ 'ಗ್ರೇಟ್ ಈಸ್ಟರ್ನ್ ಹೊಟೇಲ್'ನಲ್ಲಿ ಇಳಿದೆನು. ಈ ಹೋಟಲಿನಲ್ಲಿ ನನಗೆ 'ಡೆಯ್ಲಿ ಟೆಲಿಗ್ರಾಫ್' ಎಂಬ ಪತ್ರಿಕೆಯ ಪ್ರತಿನಿಧಿಗಳಾದ ಎಲ್ಲರ್‌ಥಾರ್ಪರ ಪರಿಚಯವುಂಟಾಯಿತು. ಅವರು 'ಬೆಂಗಾಲ್ ಕ್ಲಬ್' ನಲ್ಲಿ ವಾಸಿಸುತ್ತಿದ್ದರು. ಅಲ್ಲಿಗೆ ಬರಬೇಕೆಂದು ಅವರು ನನ್ನನ್ನು ಕರೆದರು. ಆ ಕ್ಲಬ್ಬಿನ ದಿವಾನ್‌ಖಾನೆಗೆ ಯಾವ ಭಾರತೀಯರನ್ನೂ ಕರೆದುಕೊಂಡು ಹೋಗಕೂಡದೆಂದು ಅವರಿಗೆ ಗೊತ್ತಿರಲಿಲ್ಲ. ಈ ನಿರ್ಬಂಧವು ಗೊತ್ತಾದಮೇಲೆ ಅವರು ನನ್ನನ್ನು ತಮ್ಮ ಕೊಠಡಿಗೆ ಕರೆದುಕೊಂಡು ಹೋಗಿ ಭಾರತೀಯರ ವಿಷಯದಲ್ಲಿ ಅಲ್ಲಿನ ಆಂಗ್ಲೇಯರಿಗಿದ್ದ ಅನಾದರದ ಪರವಾಗಿ ಖೇದಪಟ್ಟು ದಿವಾನ್‌ಖಾನೆಗೆ ನನ್ನನ್ನು ಕರೆದುಕೊಂಡು ಹೋಗದೆ ಇದ್ದುದಕ್ಕಾಗಿ ಕ್ಷಮೆ ಬೇಡಿದರು.

ನಾನು ಬಂಗಾಳದ 'ಪೂಜಾವಿಗ್ರಹ' ವೆಂದು ಹೆಸರುಗೊಂಡಿದ್ದ ಸುರೇಂದ್ರನಾಥ ಬಾನರ್ಜಿಯವರನ್ನಂತು ನೋಡಲೇಬೇಕಾಗಿದ್ದಿತು. ನಾನು ಅವರನ್ನು ನೋಡುವುದಕ್ಕೆ ಹೋದಾಗ ಅವರ ದರ್ಶನಕ್ಕಾಗಿ ಬಂದಿದ್ದ ಇನ್ನೂ ಅನೇಕರು ಅವರನ್ನು ಮುತ್ತಿಕೊಂಡಿದ್ದರು. ಬಾನರ್ಜಿಯವರು ನನಗೆ

"ಜನರಿಗೆ ನಿಮ್ಮ ಕೆಲಸದಲ್ಲಿ ಕುತೂಹಲವಿಲ್ಲವೆಂದು ನಾನು ಶಂಕಿಸುತ್ತೇನೆ. ನೀವು ಕಂಡಹಾಗೆಯೇ ನಮ್ಮ ತೊಂದರೆಗಳು ಬೇಕಾದ ಹಾಗಿವೆ. ಆದರೂ ನೀವು ನಿಮ್ಮ ಕೈಲಾದುದನ್ನು ಮಾಡಲೇಬೇಕು. ಈ ಕೆಲಸದಲ್ಲಿ ನೀವು ಮಹಾರಾಜರುಗಳ ಸಹಾನುಭೂತಿಯನ್ನು ಪಡೆಯು

ಬೇಕು. 'ಬ್ರಿಟಿಷ್ ಇಂಡಿಯನ್ ಅಸೋಸಿಯೇಷನ್'ನ ಪ್ರತಿನಿಧಿಗಳನ್ನು ನೋಡಬೇಕೆನ್ನುವುದನ್ನು ಮರೆಯಬೇಡಿ. ರಾಜಾ ಸರ್ ಪ್ಯಾರಿ ಮೋಹನ್ ಮುಖರ್ಜಿ ಮತ್ತು ಮಹಾರಾಜಾ ಠಾಕೂರ್ ಇವರಿಬ್ಬರನ್ನೂ ಕಾಣಬೇಕು. ಈ ಸಜ್ಜನರಿಬ್ಬರೂ ಉದಾರಮನಸ್ಸಿನವರಾಗಿದ್ದಾರೆ. ಮತ್ತು ಸಾರ್ವಜನಿಕ ಕಾರ್ಯಗಳಲ್ಲಿ ಪ್ರವರ್ತಿಸುತ್ತಾರೆ.'' ಎಂದು ಹೇಳಿದರು.

ನಾನು ಈ ಸದ್ಗೃಹಸ್ಥರನ್ನು ಕಂಡೆನು. ಆದರೆ ಅವರಿಂದ ಪ್ರಯೋಜನವೇನೂ ಆಗಲಿಲ್ಲ. ಇಬ್ಬರೂ ನನ್ನನ್ನು ಉದಾಸೀನಭಾವದಿಂದ ಕಂಡು ಕಲ್ಕತ್ತೆಯಲ್ಲಿ ಸಾರ್ವಜನಿಕ ಸಭೆಯನ್ನು ನಡೆಸುವುದೇನೂ ಸುಲಭವಾದ ಕೆಲಸವಲ್ಲವೆಂದೂ ಒಂದುವೇಳೆ ಸಭೆಯನ್ನು ನಡೆಸಬೇಕಾದರೆ ಅದೆಲ್ಲಾ ಸುರೇಂದ್ರನಾಥ ಬಾನರ್ಜಿಯವರ ಕೈಯಲ್ಲಿದೆಯೆಂದೂ ಹೇಳಿಬಿಟ್ಟರು.

ನನ್ನ ಕೆಲಸವು ಹೆಚ್ಚುಹೆಚ್ಚು ಕಷ್ಟವಾಗುತ್ತಾ ಬರುತ್ತಿದ್ದುದನ್ನು ನಾನು ಕಂಡೆನು. ನಾನು 'ಅಮೃತ ಬಜಾರ್' ಪತ್ರಿಕೆಯ ಕಾರ್ಯಾಲಯಕ್ಕೆ ಹೋದೆನು. ಅಲ್ಲಿ ನನ್ನನ್ನು ಕಂಡ ಗೃಹಸ್ಥರು ನಾನು ಯಾವನೋ ಒಬ್ಬ ತಿರುಕನೋ ಭಿಕಾರಿಯೋ ಎಂದು ತಿಳಿದುಕೊಂಡರು. 'ಬಂಗವಾಸಿ' ಯವರು ನನಗೆ ಇನ್ನೂ ಚೆನ್ನಾಗಿ ಮನ್ನಣೆಮಾಡಿದರು. ಆ ಪತ್ರಿಕೆಯ ಸಂಪಾದಕರು ನನ್ನನ್ನು ಒಂದು ಗಂಟೆಯ ಹೊತ್ತು ಕಾಯಿಸಿದರು. ಅವರನ್ನು ನೋಡುವುದಕ್ಕೆ ಅನೇಕರು ಬಂದಿದ್ದರು. ಆದರೆ ಇವರನ್ನೆಲ್ಲಾ ಮಾತನಾಡಿಸಿದಮೇಲೆ ಕೂಡ ಅವರ ದೃಷ್ಟಿಯು ನನ್ನಮೇಲೆ ಬೀಳಲಿಲ್ಲ. ಒಂದು ತಾಸು ಕಾದಿದ್ದಮೇಲೆ ನಾನು ಎದೆಗೊಂಡು ನನ್ನ ಕೆಲಸವನ್ನು ಅವರಿಗೆ ತಿಳಿಸಲು ಮೊದಲು ಮಾಡಿದೆನೋ ಇಲ್ಲವೋ ಅವರು ''ನನಗೆ ಎಷ್ಟು ಕೆಲಸವಿದೆಯೆನ್ನುವುದು ನಿಮಗೆ ಕಾಣುವುದಿಲ್ಲವೆ? ನಿಮ್ಮ ಹಾಗೆ ನಮ್ಮ ಹತ್ತಿರಕ್ಕೆ ಬರುವವರಿಗೆ ಕೊನೆಮೊದಲೇ ಇಲ್ಲ. ನೀವು ಹೊರಟುಹೋಗಿ. ನಿಮ್ಮ ಮಾತನ್ನು ಕೇಳುವುದಕ್ಕೆ ನನಗೆ ಇಷ್ಟವಿಲ್ಲ.'' ಎಂದರು. ಇದನ್ನು ಕೇಳಿ ನನಗೆ ಒಂದು ಕ್ಷಣ ಕೋಪವೂ ಸಂಕಟವೂ ಉಂಟಾದುವು.

ಆದರೆ ಜಾಗ್ರುತೆಯಾಗಿ ಅವರ ಸ್ಥಿತಿಯನ್ನು ನಾನು ತಿಳಿದುಕೊಂಡೆನು. ನಾನು 'ವಂಗವಾಸಿ'ಯ ಪ್ರಖ್ಯಾತಿಯನ್ನು ಕೇಳಿದ್ದೆನು. ಸಂಪಾದಕರ ಬಳಿ ಹೋಗಿಬರುವವರ ಪ್ರವಾಹವನ್ನು ನೋಡುತ್ತಿದ್ದೆನು. ಅವರೆಲ್ಲರಿಗೂ ಸಂಪಾದಕರ ಪರಿಚಯವಿದ್ದಿತು. ಅವರ ಪತ್ರಿಕೆಯಲ್ಲಿ ಚರ್ಚೆ ಮಾಡುವುದಕ್ಕೆ ವಿಷಯಗಳಿಗೇನೂ ಕೊರತೆಯಿರಲಿಲ್ಲ. ದಕ್ಷಿಣ ಆಫ್ರಿಕದ ಹೆಸರು ಕೂಡ ಆ ಕಾಲದಲ್ಲಿ ಜನರಿಗೆ ಗೊತ್ತಿರಲಿಲ್ಲವೆನ್ನಬಹುದು.

ಒಬ್ಬ ಮನುಷ್ಯನ ಸಂಕಟವು ತನ್ನ ದೃಷ್ಟಿಯಲ್ಲಿ ಎಷ್ಟೇ ದೊಡ್ಡದಾಗಿರಲಿ ಸಂಪಾದಕರ ಕಚೇರಿಗೆ ಅದೇ ರೀತಿಯಾಗಿ ತನ್ನ ದುಃಖವನ್ನು ಹೇಳಿಕೊಳ್ಳಲು ನುಗ್ಗುವ ನೂರಾರು ಮಂದಿಯಲ್ಲಿ ಅವನೊಬ್ಬನು. ಸಂಪಾದಕನು ಇವರೆಲ್ಲರಿಗೂ ಏನು ಮಾಡಿಯಾನು? ಈ ದುಃಖಿಗಳ ಕಣ್ಣಿನಲ್ಲಂತು ಸಂಪಾದಕನು ನಾಡಿನ ನಾಯಕನಾದರೂ ಸಂಪಾದಕನಿಗೆ ತನ್ನ ಅಡಳಿತವು ತನ್ನ ಕೊಠಡಿಯ ಹೊಸಲಿನಿಂದೀಚೆಗೆ ಮಾತ್ರವೆಂದು ಗೊತ್ತು.

ಆದರೆ ನಾನು ಎದೆಗುಂದಲಿಲ್ಲ. ಇತರ ಪತ್ರಿಕೆಗಳ ಸಂಪಾದಕರನ್ನು ನೋಡುತ್ತಾ ಹೋದೆನು. ಯಥಾಪ್ರಕಾರ ಆಂಗ್ಲೋಇಂಡಿಯನ್ ಪತ್ರಿಕೆಗಳ ಸಂಪಾದಕರನ್ನೂ ಕಂಡೆನು. 'ಸ್ಟೇಟ್ಸ್‌ಮನ್' ಮತ್ತು 'ಇಂಗ್ಲಿಷ್‌ಮನ್' ಪತ್ರಿಕೆಗಳು ಈ ಪ್ರಶ್ನೆಯ ಮಹತ್ವವನ್ನು ಮನಗಂಡವು. ಈ ಪ್ರಶ್ನೆಯ ವಿಚಾರವನ್ನು ನಾನು ಅವುಗಳಿಗೂ ವಿಸ್ತಾರವಾಗಿ ತಿಳಿಸಿದೆನು. ಇದನ್ನು ಆ ಪತ್ರಿಕೆಗಳು ಸಂಪೂರ್ಣವಾಗಿ ಪ್ರಕಟಿಸಿದುವು.

'ಇಂಗ್ಲಿಷ್‌ಮನ್' ಪತ್ರಿಕೆಯ ಸಂಪಾದಕರಾದ ಮಿ. ಸ್ಯಾಂಡರ್ಸ್‌ರು ನನ್ನನ್ನು ತಮ್ಮವನನ್ನಾಗಿ ಮಾಡಿಕೊಂಡರು. ತಮ್ಮ ಕಚೇರಿಯನ್ನೂ ಪತ್ರಿಕೆಯನ್ನೂ ಉಪಯೋಗಿಸಲು ನನಗೆ ಅವಕಾಶವನ್ನು ಕೊಟ್ಟರು. ತಾವು ಈ ಪ್ರಶ್ನೆಯ ವಿಚಾರವಾಗಿ ಬರೆದಿದ್ದ ಪ್ರಧಾನಲೇಖನದ ಮುಂಪ್ರತಿಯನ್ನು ನನಗೆ ಕಳುಹಿಸಿ ನಾನು ಅದರಲ್ಲಿ ಏನಾದರೂ ತಿದ್ದುಪಾಡನ್ನು ಮಾಡಬೇಕೆಂದು ಇಷ್ಟಪಟ್ಟರೆ ಹಾಗೆ ಮಾಡಲು ಸಹ ಅವರು ನನಗೆ ಸ್ವಾತಂತ್ರ್ಯವನ್ನು ಕೊಟ್ಟರು. ನಮ್ಮಿಬ್ಬರಿಗೂ ಗೆಳೆತನವು ಬೆಳೆಯಿತೆಂದರೆ ಅದೇನೂ ಅತಿಶಯೋಕ್ತಿಯಾಗಲಾರದು. ಅವರು ನನಗೆ ತಮ್ಮ ಕೈಲಾದಷ್ಟು ಸಹಾಯವನ್ನು ಮಾಡುತ್ತೇನೆಂದು ಮಾತುಕೊಟ್ಟರು.

ಅವರು ಹೀಗೆ ಕೊಟ್ಟ ವಚನವನ್ನು ಅಕ್ಷರಶಃ ಪಾಲಿಸಿದರು ಮತ್ತು ಬಹಳ ಕಾಯಿಲೆ ಬೀಳುವವರೆಗೂ ನನ್ನೊಡನೆ ಪತ್ರವ್ಯವಹಾರವನ್ನು ನಡೆಸುತ್ತಿದ್ದರು.

ನನಗೆ ನನ್ನ ಜೀವನದಲ್ಲಿ ಈ ರೀತಿಯಾದ ಅನೇಕ ಮಧುರ ಸಂಬಂಧಗಳು ಕೇವಲ ಅಕಸ್ಮಾತ್ತಾಗಿ ಉಂಟಾಗಿವೆ. ನನ್ನಲ್ಲಿ ಸ್ಯಾಂಡರ್ಸರ ಮೆಚ್ಚಿಗೆಗೆ ಬಂದುದೇನೆಂದರೆ ನಾನು ಅತಿಶಯೋಕ್ತಿಗೆ ಎಂದಿಗೂ ಈಡಾಗದೆ ಇರುತ್ತಿದ್ದುದು ಮತ್ತು ನನ್ನ ಸತ್ಯಪರಾಯಣತೆ. ಅವರು ನನ್ನ ವಿಷಯದಲ್ಲಿ ಸಹಾನುಭೂತಿಯನ್ನು ತೋರಿಸುವುದಕ್ಕೆ ಮುಂಚೆ ನನ್ನನ್ನು ಸೂಕ್ಷ್ಮವಾದ ಪರೀಕ್ಷೆಗೆ ಗುರಿಮಾಡಿದರು. ಆ ಪರೀಕ್ಷೆಯಲ್ಲಿ ದಕ್ಷಿಣ ಆಫ್ರಿಕದಲ್ಲಿನ ಬಿಳಿಯ ಜನರ ಪಕ್ಷವನ್ನು ಕೂಡ ನಿಷ್ಪಕ್ಷಪಾತ ದೃಷ್ಟಿಯಿಂದ ತಿಳಿಸುವುದಕ್ಕಾಗಲಿ ಅದಕ್ಕೆ ಸರಿಯಾಗಿ ಬೆಲೆಕಟ್ಟುವುದಕ್ಕಾಗಲಿ ಶ್ರಮವನ್ನು ವಹಿಸಲು ನಾನು ಸ್ವಲ್ಪವೂ ಹಿಂದೆಗೆಯಲಿಲ್ಲವೆನ್ನುವುದನ್ನು ಅವರು ಕಂಡರು.

ನನ್ನ ಅನುಭವದಲ್ಲಿ ಕಂಡು ಬಂದಿರುವುದೇನೆಂದರೆ—ನಮ್ಮ ಇದಿರು ಪಕ್ಷದೊಡನೆ ನಾವು ನ್ಯಾಯದಿಂದ ವರ್ತಿಸುವುದೇ ನಮ್ಮ ಪಕ್ಷಕ್ಕೆ ನ್ಯಾಯವನ್ನು ಸಂಪಾದಿಸಲು ಅತಿ ಶೀಘ್ರವಾದ ದಾರಿ.

ಈ ಪ್ರಕಾರವಾಗಿ ಸ್ಯಾಂಡರ್ಸರ ಆಕಸ್ಮಿಕ ಸಹಾಯವು ದೊರಕಿದುದರಿಂದ ಕಲ್ಕತ್ತೆಯ ಸಾರ್ವಜನಿಕ ಸಭೆಯನ್ನು ಏರ್ಪಡಿಸುವ ಪ್ರಯತ್ನವು ಸಫಲವಾಗಬಹುದೆಂಬ ಆಸೆಯು ನನ್ನಲ್ಲಿ ಹುಟ್ಟಿತು. ಅಷ್ಟರಲ್ಲಿಯೇ ಡರ್ಬನಿನಿಂದ "ನ್ಯಾಯವಿಧಾಯಕಸಭೆಯು ಜನವರಿಯಲ್ಲಿ ಕೂಡುತ್ತದೆ. ಒಡನೆಯೇ ಹೊರಟುಬರಬೇಕು." ಎಂದು ತಾರು ಬಂದಿತು.

ಆದುದರಿಂದ ನಾನು ಕಲ್ಕತ್ತೆಯನ್ನು ಅಷ್ಟು ತ್ವರಿತವಾಗಿ ಬಿಟ್ಟು ಹೋಗಬೇಕಾಗಿ ಬಂದುದಕ್ಕೆ ಕಾರಣವನ್ನು ತಿಳಿಸಿ ಒಂದು ಪತ್ರವನ್ನು ಬರೆದು ಅದನ್ನು ವೃತ್ತಪತ್ರಿಕೆಗಳಲ್ಲಿ ಪ್ರಕಟಣೆ ಮಾಡಿಸಿ ಮುಂಬಯಿಗೆ ಹೊರಟೆನು. ಹೊರಡುವುದಕ್ಕೆ ಮುಂಚೆ ದಾದಾ ಅಬ್ದುಲ್ಲಾರವರ ಮುಂಬಯಿನಲ್ಲಿನ ಪ್ರತಿನಿಧಿಗೆ ನಾನು ಮೊಟ್ಟಮೊದಲು ದಕ್ಷಿಣ ಆಫ್ರಿ

ಕಕ್ಕೆ ಹೋಗುವ ಜಹಜಿನಲ್ಲಿ ಹೊರಡಲು ಏರ್ಪಾಡು ಮಾಡಬೇಕೆಂದು ತಂತಿ ಕೊಟ್ಟೆನು. ದಾದಾ ಅಬ್ದುಲ್ಲಾರವರು ಆಗತಾನೆ 'ಕೂರ್‌ಲೆಂಡ್' ಎಂಬ ಜಹಜನ್ನು ಕೊಂಡುಕೊಂಡಿದ್ದರು. ನಾನು ನನ್ನ ಸಂಸಾರ ದೊಂದಿಗೆ ಆ ಜಹಜಿನಲ್ಲಿ ಬಾಡಿಗೆಯಿಲ್ಲದೆ ಪ್ರಯಾಣಮಾಡಬೇಕೆಂದು ಅವರು ಒತ್ತಾಯಮಾಡಿದರು. ನಾನು ಇದಕ್ಕೆ ಸಂತೋಷದಿಂದ ಒಪ್ಪಿ ಡಿಸೆಂಬರ್ ತಿಂಗಳಿನ ಪ್ರಾರಂಭದಲ್ಲಿ ನನ್ನ ಹೆಂಡತಿ, ಇಬ್ಬರು ಮಕ್ಕಳು ಮತ್ತು ವಿಧವೆಯಾದ ನಮ್ಮ ಅಕ್ಕನ ಒಬ್ಬನೇ ಮಗ ಇವರೊಡನೆ ಆ ಜಹಜಿನಲ್ಲಿ ದಕ್ಷಿಣ ಆಫ್ರಿಕಕ್ಕೆ ಎರಡನೆಯ ಸಲ ಪ್ರಯಾಣ ಬೆಳೆಸಿದೆನು. ಇದರ ಜೊತೆಯಲ್ಲಿಯೇ 'ನಾದೇರಿ' ಎಂಬ ಇನ್ನೊಂದು ಜಹಜೂ ಡರ್ಬನಿಗೆ ಹೊರಟಿತು. ಅದಕ್ಕೆ ದಾದಾ ಅಬ್ದುಲ್ಲಾ ಕಂಪೆನಿಯವರು ದಳ್ಳಾಳಿಗಳಾಗಿದ್ದರು. ಎರಡು ಜಹಜುಗಳಲ್ಲಿಯೂ ಒಟ್ಟು ಸೇರಿಸಿ ೮೦೦–೧೦೦೦ ಮಂದಿ ಭಾರತೀಯ ಪ್ರಯಾಣಿಕರಿದ್ದರು. ಅವರಲ್ಲಿ ಅರ್ಧಜನ ಟ್ರಾನ್ಸ್‌ವಾಲಿಗೆ ಹೋಗುವವರಿದ್ದರು.



# ಟಿಪ್ಪಣಿಗಳು

ಪು. ೧ (ಅ) ಏಡನ್ :

ಈ ಪಟ್ಟಣವು ಭೂವಿವರಣೆಯ ದೃಷ್ಟಿಯಿಂದ ಅರೇಬಿಯಾ ದೇಶಕ್ಕೆ ಸೇರಿದ್ದರೂ ರಾಜಕೀಯ ದೃಷ್ಟಿಯಿಂದ ಹಿಂದೂಸ್ಥಾನದ ಸರಕಾರಕ್ಕೆ ಸೇರಿ ಮುಂಬಯಿಯ ಗವರ್ನರರ ಆಡಳಿತದಲ್ಲಿದೆ. ಕೆಂಪು ಸಮುದ್ರ, ಸೂಯೆಸ್ ಕಾಲುವೆಗಳ ಮಾರ್ಗವಾಗಿ ಭರತಖಂಡಕ್ಕೂ ಯುರೋಪಿಗೂ ಮಧ್ಯೆ ಓಡಾಡುವ ಜಹಜುಗಳು ಇಲ್ಲಿ ಕಲ್ಲಿದ್ದಲನ್ನು ತುಂಬಿಕೊಳ್ಳುತ್ತವೆ. ಬ್ರಿಟಿಷರ ನೌಕಾಪ್ರಾಬಲ್ಯಕ್ಕೆ ಇದೊಂದು ಮುಖ್ಯವಾದ ಕ್ಷೇತ್ರ.

ಪು. ೨ (ಆ) ಶ್ರೀ. ರೇವಾಶಂಕರ ಜಗಜೀವನ ಮೆಹತಾ :

ಇವರು ರಾಷ್ಟ್ರಮಹಾಸಭೆಯ ಕೋಶಾಧ್ಯಕ್ಷರಾಗಿದ್ದಾರೆ. ಕೈನೆಯ್ಗೆ ಕೈನೂಲಿಗೆಗಳ ಮೇಲೆ ಅತ್ಯುತ್ತಮವಾದ ಪ್ರಬಂಧಕ್ಕೆ ಒಂದು ಸಾವಿರ ಮತ್ತು ಗೋರಕ್ಷಣೆಯ ಮೇಲೆ ಅತ್ಯುತ್ತಮವಾದ ಪ್ರಬಂಧಕ್ಕೆ ಒಂದು ಸಾವಿರ ರೂಪಾಯಿಗಳ ಬಹುಮಾನಗಳನ್ನು ಇವರು ಕೊಟ್ಟಿರುವ ರೆಂಬುದು ಸಾಮಾನ್ಯವಾಗಿ ತಿಳಿದ ವಿಷಯ.

ಪು. ೩ (ಇ) ಶತಾವಧಾನ:

ನೂರು ಜನರು ನೂರು ವಿಷಯಗಳನ್ನು ಒಟ್ಟಿಗೆ ಮಾತನಾಡಿದರೂ ಪ್ರತಿಯೊಬ್ಬರು ಹೇಳಿದುದನ್ನೂ ಗಮನಿಸಿ ಪುನಃ ಹೇಳಲು ಶಕ್ಯರಾಗಿರುವವರಿಗೆ ಶತಾವಧಾನಿಗಳೆಂದು ಹೆಸರು.

ಪು. ೩ (ಈ) ಮುಕ್ತಾನಂದರ ಪದ್ಯ:

ಇದರ ಮೂಲವು ಹೀಗಿದೆ:—

ಹಸತಾಂ ರಮತಾಂ ಪ್ರಗಟ ಹರಿದೇಖ್ಯಂ ರೇ
ಮಾರುಂ ಜೀವ್ಯಂ ಸಫಲ ತಬ ಲೇಖುಂ ರೇ

ಮುಕ್ತಾನಂದ ಸೋ ನಾಥ ವಿಹಾರೀ ರೇ
ಓಧಾ ಜೀವನದೋರೀ ಅಮಾರೀ ರೇ

**ಪು. ೪೩ (ಉ) ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಪ್ರತಿನಿಧಿಗಳು:**

೧೯೧೪ರಲ್ಲಿ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಪರವಾಗಿ ಗಾಂಧೀಜಿಯವರಿಗೂ ಅಲ್ಲಿನ ಪ್ರಧಾನ ಮಂತ್ರಿಗಳಾಗಿದ್ದ ಜನರಲ್ ಸ್ಮಟ್ಸರಿಗೂ ಮಧ್ಯೆ ಆಗಿದ್ದ ಕರಾರಿಗೆ ವಿರುದ್ಧವಾಗಿ ೧೯೨೫ರಲ್ಲಿ ದಕ್ಷಿಣ ಆಫ್ರಿಕದ ಧಾರಾಸಭೆಯವರು ಏಷಿಯಾವಾಸಿಗಳ ಪರಿಸ್ಥಿತಿಯನ್ನು ಸಂಕಟಕರವಾಗಿ ಮಾಡುವ ಕೆಲವು ಕಾಯಿದೆಗಳನ್ನು ತಂದರು. ಆ ಸಂದರ್ಭದಲ್ಲಿ ಹಿಂದೂಸ್ಥಾನದ ಸರಕಾರದವರು ಸರ್ ಮಹಮದ್ ಹಬಿಬುಲ್ಲಾ ಮತ್ತು ಶ್ರೀ ಶ್ರೀನಿವಾಸಶಾಸ್ತ್ರಿಗಳನ್ನೊಳಗೊಂಡ ಸಮಿತಿಯೊಂದನ್ನು ದಕ್ಷಿಣ ಆಫ್ರಿಕಕ್ಕೆ ಅಲ್ಲಿಯ ಸರಕಾರದೊಡನೆ ಸಂಧಿಗೆ ದಾರಿಮಾಡುವುದಕ್ಕಾಗಿ ಕಳುಹಿಸಿಕೊಟ್ಟರು. ಇದಕ್ಕೆ ಮುಂಚೆ ದಕ್ಷಿಣ ಆಫ್ರಿಕದಿಂದ ಕೆಲವು ಮಂದಿ ಭಾರತೀಯ ಮುಖಂಡರು ಅಲ್ಲಿನ ನಮ್ಮ ಸಹೋದರರ ಪರಿಸ್ಥಿತಿಯನ್ನು ಈ ದೇಶದ ಜನರಿಗೆ ವಿಶದವಾಗಿ ತಿಳಿಸಿ ಇಲ್ಲಿಂದ ಎಲ್ಲಾ ವಿಧದ ಬೆಂಬಲವನ್ನೂ ಪಡೆಯಲು ಬಂದಿದ್ದರು. ಡಾ. ಅಬ್ದುಲ್ ರಹಿಮಾನರು ಇವರ ಮುಖಂಡರಾಗಿದ್ದರು. ಮಿ. ಜೇಮ್ಸ್ ಗಾಡ್‌ಫ್ರೆಯವರು ಈ ಪ್ರತಿನಿಧಿಗಳಲ್ಲೊಬ್ಬರಾಗಿದ್ದರು. ಇವರಲ್ಲಿ ಕೆಲವರು ಬೆಂಗಳೂರಿಗೆ ೧೯೨೬ನೆಯ ಜನವರಿ ೨೬ರಲ್ಲಿ ಬಂದು ಟಿಪ್ಪೂಸುಲ್ತಾನರ ಅರಮನೆಯಲ್ಲಿ ಉಪನ್ಯಾಸ ಕೊಟ್ಟರು.

**ಪು. ೫೭ (ಊ) 'ನಾನು ಟ್ರಾನ್ಸ್‌ವಾಲಿನವನಲ್ಲ, ಹಾಲೆಂಡಿನವನು'**

ಟ್ರಾನ್ಸ್‌ವಾಲಿನಲ್ಲಿ ಬಂದು ನೆಲೆಸಿದ ಐರೋಪ್ಯರಲ್ಲಿ ಡಚ್ಚರೇ ಮುಖ್ಯರು. ಇವರ ತಾಯ್ನಾಡು ಹಾಲೆಂಡ್‌ದೇಶ. ಟ್ರಾನ್ಸ್‌ವಾಲಿನಲ್ಲೇ ಇದ್ದು ಹಳಬರಾದವರು ಅಲ್ಲಿಯ ವಾತಾವರಣದಲ್ಲಿಯೇ ಉಸಿರಾಡಿ ವರ್ಣದ್ವೇಷದ ಸೋಂಕನ್ನು ಸಾಮಾನ್ಯವಾಗಿ ಸಂಪಾದಿಸಿರುತ್ತಿದ್ದರು. ಇವರಿಗೆ ಬೋಅರರೆಂದು ಹೆಸರು. ಹೊಸದಾಗಿ ಹಾಲೆಂಡಿನಿಂದ ಬಂದ

ವರು ಇನ್ನೂ ಸರ್ವಸಮುತಾಧ್ಯಷ್ಟಿಯನ್ನು ಕಳೆದುಕೊಂಡಿರುವ ಸಂಭವ ಕಡಿಮೆಯಾಗಿದ್ದಿತು.

ಪು. ೬೦ (ಖು) ಅಮೆರಿಕದ ನೀಗ್ರೋ:

ನೀಗ್ರೋಜನರು ಮೊಟ್ಟಮೊದಲು ಆಫ್ರಿಕದ ನಿವಾಸಿಗಳೇ. ಐರೋಪ್ಯರು ಉತ್ತರದಕ್ಷಿಣ ಅಮೆರಿಕಗಳಲ್ಲಿಯೂ ವೆಸ್ಟ್ ಇಂಡಿಯಾ ದ್ವೀಪಗಳೇ ಮುಂತಾದ ಸ್ಥಳಗಳಲ್ಲಿಯೂ ಹೋಗಿ ನೆಲೆಸಿದಾಗ ಅಲ್ಲಿ ಗಣಿಗಳನ್ನಗಿಯುವುದು, ಹೊಲಗದ್ದೆಭೂಮಿಗಳನ್ನು ಮಾಡುವುದೇ ಮುಂತಾದ ಕೆಲಸಗಳಿಗೆ ಜನರು ಸಿಕ್ಕದೆ ಆಫ್ರಿಕದಿಂದ ಈ ಬಡ ನೀಗ್ರೋ ಜನಗಳನ್ನು ಕೂಲಿಯ ಗುಲಾಮರಾಗಿ ಒಯ್ದರು. ಈ ಕಪ್ಪು ಗುಲಾ ಮರು ವ್ಯಾಪಾರದ ಸರಕಾದರು. ಈ ಅಮೂಲ್ಯವಾದ ಸರಕನ್ನು ಖಂಡದಿಂದ ಖಂಡಕ್ಕೆ ಒಯ್ಯುವುದರಲ್ಲಿ ಆಂಗ್ಲ ನಾವಿಕರು ಹೆಸರನ್ನೂ ಲಾಭವನ್ನೂ ಪಡೆದರು. ಹೀಗೆ ಗುಲಾಮರನ್ನು ಒಯ್ಯುವಾಗ ಆ ಬಡ ಪ್ರಾಣಿಗಳಿಗೆ ಕೊಡುತ್ತಿದ್ದ ಚಿತ್ರಹಿಂಸೆಯು ವರ್ಣನಾತೀತವಾಗಿದ್ದಿತು. ಕೆಲಸಕ್ಕೆ ನಿಯಮಿಸಿದಮೇಲಂತೂ ಅವರ ಪಾಡೇ ಬೇಡ.

ಸುಮಾರು ೧೮೬೦—೬೫ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಗಳಲ್ಲಿ ಉತ್ತರ ಸಂಸ್ಥಾನಗಳಿಗೂ ದಕ್ಷಿಣ ಸಂಸ್ಥಾನಗಳಿಗೂ ಮಧ್ಯೆ ಗುಲಾಮರ ಬಿಡುಗಡೆಯ ವಿಷಯದಲ್ಲಿ ದೊಡ್ಡ ಯುದ್ಧವಾಗಿ ಅಬ್ರ ಹಾಂ ಲಿಂಕನ್ ಎಂಬ ಮಹಾತ್ಮನ ಮುಂದಾಳುತನದಿಂದ ಗುಲಾಮರ ಸ್ವಾತಂತ್ರ್ಯಪಕ್ಷಪಾತಿಗಳಾದ ಉತ್ತರ ಸಂಸ್ಥಾನಗಳಿಗೆ ವಿಜಯವಾಗಿ ಅಂದು ಈ ನೀಗ್ರೋ ಗುಲಾಮರು ದೇಹಸ್ವಾತಂತ್ರ್ಯವನ್ನು ಪಡೆದರು. ಇವರಲ್ಲಿ ಅನೇಕರು ಇತರ ದೇಶಗಳಿಗೆ ಜೀವನೋಪಾಯದ ಸಲುವಾಗಿ ತೆರಳಿದರು. ಹೀಗೆ ಹೋದವರಲ್ಲಿ ಕೆಲವರು ಅನೇಕ ತಲೆಗಳು ಕಳೆದಮೇಲೆ ತಮ್ಮ ಮೊದಲ ದೇಶವಾದ ಆಫ್ರಿಕವನ್ನು ಮುಟ್ಟಿದರು. ಆದರೆ ಆಫ್ರಿಕದ ಲ್ಲಿಯೇ ಮೊದಲಿಂದ ಇದ್ದ ನೀಗ್ರೋ ಜನರಿಗೂ ಇವರಿಗೂ ಮಧ್ಯೆ ರೀತಿ ನೀತಿಗಳಲ್ಲಿ ಭೇದವು ಬೆಳೆದುಬಂದಿದ್ದುದರಿಂದ ಇವರೇ ಅಲ್ಲಿ ಒಂದು ಪಂಗಡವಾದರು.

**ಪು. ೬೯ (೫೦) ಪ್ಲಿಮತ್‌ಬ್ರದರ್ಸ್, ಕ್ವೇಕರ್ಸ್:**

ಪ್ಲಿಮತ್ ಬ್ರದರ್ಸ್ ಎಂಬುವರು ಈಸಾಯಿಗಳಲ್ಲಿ ಬಹು ಕಟ್ಟು ನಿಟ್ಟಿನ ಸಂಪ್ರದಾಯದವರು. ಈ ಪಂಗಡವು ಸುಮಾರು ೧೮೩೦ರಲ್ಲಿ ಹುಟ್ಟಿತು. ಆಗ ಇಂಗ್ಲೆಂಡಿನ ಈಸಾಯಿ ಮತದಲ್ಲಿದ್ದ ಧರ್ಮಗುರುಗಳ ಅಧಿಕಾರವನ್ನು ಪ್ರತಿಪಾದಿಸುವವರೇ ಪ್ರಬಲವಾಗಿದ್ದರು; ಕರ್ಮ ಕಾಂಡಕ್ಕೆ ಪ್ರಾಧಾನ್ಯವು ದೊರಕಿತು; ಈಸಾಯಿ ಚತುರ್ವೇದಗಳ ಪ್ರಭಾವವು ಕಂದಿದ್ದಿತು. ಇದೆಲ್ಲಾ ಸರಿಬೀಳದೆ ಪ್ಲಿಮತ್ ನಗರದಲ್ಲಿದ್ದ ಡಾರ್ಬಿ ಎಂಬವರಿಂದ ಈ ಪಂಗಡವು ಸ್ಥಾಪಿಸಲ್ಪಟ್ಟಿತು.

ಕ್ವೇಕರ್ಸ್: ಈ ಪಂಗಡದವರಿಗೆ ಸರಿಯಾದ ಹೆಸರು 'ಸೊಸೈಟಿ ಆಫ್ ಫ್ರೆಂಡ್ಸ್' (ಮಿತ್ರರ ಕೂಟ) ಎಂದು. ಜಾರ್ಜ್‌ಫಾಕ್ಸ್ (೧೬೨೪—೯೦) ಎಂಬಾತನು ಈ ಸಂಪ್ರದಾಯದ ಸ್ಥಾಪಕನು. ಮಿಕ್ಕಾದ ಪ್ರಾಟೆಸ್ಟೆಂಟರಿಗೂ ಇವರಿಗೂ ಇರುವ ಮುಖ್ಯ ಭೇದವು ಆರಾಧನೆಯ ವಿಷಯದಲ್ಲಿ. ಇದರಲ್ಲಿ ಇವರು ನಿಯಮಬದ್ಧರಲ್ಲ. ಪ್ರಾರ್ಥನೆಗೆ ಇವರು 'ಕೂಟದ ಮನೆ'ಯಲ್ಲಿ ಸೇರುತ್ತಾರೆ. ಅವರಲ್ಲಿ ಯಾರಾದರೂ ಒಬ್ಬರು ಅಂತರಾತ್ಮನ ಪ್ರೇರಣೆಯಂತೆ ವ್ಯಾಖ್ಯಾನ ಮಾಡುತ್ತಾರೆ. ಮೌನದ ಕೂಟಗಳೇನೂ ಅಸಾಧಾರಣವಲ್ಲ. ಆಣೆಯಿಡಲು ಇವರು ಒಪ್ಪುವುದಿಲ್ಲವಾದುದರಿಂದ ಇವರು ೧೬೮೯ರ ವರೆಗೂ ಇದಕ್ಕಾಗಿ ಶಿಕ್ಷೆಗೆ ಗುರಿಯಾಗುತ್ತಿದ್ದರು. ಈಚೆಗೆ ಕಾನೂನು ಮಾರ್ಪಾಡಾಗಿದೆ. ಇವರ ಉಡುಪು ಆಡಂಬರವಿಲ್ಲದುದು. ಇವರು ಸಂಬೋಧನೆಯಲ್ಲಿ ಬಹುವಚನವನ್ನು ಪ್ರಯೋಗಿಸುವುದಿಲ್ಲ. ವಿಲಿಯಂ ಪೆನ್ ಎಂಬಾತನು ಇವರಲ್ಲಿ ಪ್ರಸಿದ್ಧನಾಗಿ ಅಮೆರಿಕದಲ್ಲಿ ಈ ಸಂಪ್ರದಾಯವನ್ನು ಹರಡಿದನು.

'ಕ್ವೇಕರ್ಸ್' ಎಂದರೆ 'ಕಂಪನಶೀಲ'ರೆಂದು ಅರ್ಥ. ಈ ಸಂಪ್ರದಾಯದ ಸ್ಥಾಪಕನಾದ ಫಾಕ್ಸನು ನ್ಯಾಯಾಧೀಶ ಬೆನೆಟನಿಗೆ "ದೇವರಿದಿರಿನಲ್ಲಿ ನಡುಗು" ಎಂದು ಹೇಳಿದುದರಿಂದ ಈ ಪಂಗಡದವರಿಗೆ ಈ ಹೆಸರು ಬಂದಿತೆಂದು ಪ್ರತೀತಿ.

ಪು. ೨೬ (ಎ) ಆರೇಂಜ್ ಫ್ರೀಸ್ಟೇಟ್, ಭಾರತೀಯರು :

ದಕ್ಷಿಣ ಆಫ್ರಿಕದ ಪ್ರಾಂತಗಳೆಲ್ಲಾ ಒಂದುಗೂಡಿ ಏಕರಾಜ್ಯ ವಾಗುವುದಕ್ಕೆ ಮುಂಚೆ ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀಸ್ಟೇಟ್ ಪ್ರಾಂತಗಳು ಬೋಅರರ ಪ್ರಜಾಧಿಪತ್ಯಗಳಾಗಿದ್ದುವು. ಭಾರತೀಯರು ಆರೇಂಜ್ ಫ್ರೀಸ್ಟೇಟಿಗೆ ಹೋಗಿ ನೆಲೆಸಲು ಅಲ್ಲಿನ ಪ್ರಭುತ್ವದವರು ಮೊದಲಿನಿಂದ ಅಡಚಣೆಗಳನ್ನೊಡ್ಡುದುದರಿಂದ ಅಲ್ಲಿ ಭಾರತೀಯರ ಸಂಖ್ಯೆಯು ಅತಿ ವಿರಳವಾಗಿದ್ದಿತಲ್ಲದೆ ಅವರೆಲ್ಲಾ ಹೋಟಲುಗಳಲ್ಲಿ ವೇಟರು (ಊಟಕೆಗಡವರು) ಗಳಾಗಿ ಕೀಳ್ಮಟ್ಟದ ಚಾಕರಿಯಲ್ಲಿದ್ದರು.

ಪು. ೯೪ (ಎ) ಟಾಲ್‌ಸ್ಟಾಯ್ : (೧೮೨೮—೧೯೧೧)

ಇವರು ರಷ್ಯಾದೇಶದಲ್ಲಿ ಶ್ರೀಮಂತರ ಕುಲದಲ್ಲಿ ಹುಟ್ಟಿದವರಾಗಿದ್ದರೂ ಪ್ರಾಣಿಸಿಗಳಾದುದರಿಂದ ವೈರಾಗ್ಯವನ್ನು ತಾಳಿ ರಷ್ಯಾದೇಶದ ಜನಜೀವನವನ್ನು ಸುಧಾರಿಸಿ ಜನರಲ್ಲಿ ಆಸ್ತಿಕತೆಯನ್ನೂ ಪಾರಮಾರ್ಥಿಕತೆಯನ್ನೂ ಹೆಚ್ಚುಗೊಳಿಸಲು ಧಾರ್ಮಿಕ ಗ್ರಂಥಗಳನ್ನೂ ಕಾದಂಬರಿ, ಕತೆ, ನಾಟಕ ಮುಂತಾದ ಗ್ರಂಥಗಳನ್ನೂ ಬರೆದು ರಷ್ಯಾದೇಶದ ಸಾಹಿತ್ಯದಲ್ಲಿ ಉಚ್ಚಸ್ಥಾನವನ್ನು ಪಡೆದುದಲ್ಲದೆ ಆಧುನಿಕ ರಷ್ಯಾದೇಶದ ಮುಖ್ಯ ರಾಷ್ಟ್ರನಿರ್ಮಾಣಕರಲ್ಲೊಬ್ಬರೆಂಬ ಹೆಸರನ್ನು ಪಡೆದಿರುತ್ತಾರೆ. ಈಸಾಯಿಗಳ ಮತಗ್ರಂಥವಾದ 'ಗಾಸ್ಪೆಲ್ಸ್' (ಸುವಾರ್ತೆ) ಗಳ ವಿಚಾರದಲ್ಲಿ ಅನೇಕ ಈಸಾಯಿಗಳೇ ಯೇಸುಕ್ರಿಸ್ತನ ವಚನಗಳಿಗೆ ಕೇವಲ ಪಾರಮಾರ್ಥಿಕರೀತಿಯಲ್ಲಿ ಅರ್ಥವನ್ನು ಮಾಡಿ ವ್ಯಾವಹಾರಿಕದಲ್ಲಿ ಅನ್ವಯಿಸಿಕೊಳ್ಳಬಾರದೆಂಬ ಪಕ್ಷವನ್ನು ವಹಿಸಿದರೂ ಟಾಲ್‌ಸ್ಟಾಯರು ಈ ವಚನಗಳು ನೈಸರ್ಗಿಕರೀತಿಯಿಂದ ವ್ಯಾವಹಾರಿಕ ಜೀವನದಲ್ಲಿಯೂ ನಮಗೆ ಮಾರ್ಗದರ್ಶಕವೆಂದು ವಾದಿಸಿ ಬರೆದಿರುವರು. ಇಂತಹ ವಚನಗಳಲ್ಲಿ ಮುಖ್ಯವಾಗಿ ಯೇಸುಕ್ರಿಸ್ತನು ಹೇಳಿದ ಅಹಿಂಸೋಪದೇಶವನ್ನು ಕುರಿತು ಎಂದರೆ: "ಎಲ್ಲರಲ್ಲಿಯೂ ಸನ್ನಿತೋರು ; ಹಗೆ ಬಿಡು ; ನಿನ್ನ ಶತ್ರುಗಳನ್ನೂ ಪ್ರೀತಿಯಿಂದ ಕಾಣು." ಈ ರೀತಿಯಾದ ವ್ಯಾಖ್ಯಾನವನ್ನು ಮಾಡಿದರು.

ಪು. ೯೫ (ಏ) ಮನುಷ್ಯಪ್ರಯತ್ನವೊಂದಾದರೆ ದೈವೇಚ್ಛೆ ಇನ್ನೊಂದು

ಈ ಅಧ್ಯಾಯದ ಶೀರ್ಷಕವು ಮೂಲದಲ್ಲಿ ಪದ್ಯರೂಪವಾಗಿದೆ :—

ಖಬರ ನಹೀಂ ಇಸ ಜಗಮೇಂ ಫಲಕೀ।
ಸಮುಝು ರೇ ಮನ ಕೋ ಜಾನೈ ಕಲಕೀ॥

[ಈ ಪ್ರಪಂಚದಲ್ಲಿ ಕ್ಷಣವೊಂದರ ಅರಿವೂ ಸಮಗಿರುವುದಿಲ್ಲ. ಎಲೈ ಮನಸ್ಸೇ, ನಾಳೆ ಏನಾಗುತ್ತದೆಯೆಂದು ನಿನಗೆ ಗೊತ್ತೆ ?]

ಪು. ೧೦೧ (ಒ) ಎರಡನೆಯ ಚರ್ಚೆ :

ಯಾವುದಾದರೂ ಕಾಯಿದೆಯು ಜಾರಿಗೆ ಬರಬೇಕಾದರೆ ಮೊಟ್ಟ ಮೊದಲು ಆ ಕಾಯಿದೆಯನ್ನು ಸರಕಾರದವರಾಗಲಿ ಧಾರಾಸಭೆಯ ಇತರ ಸದಸ್ಯರಲ್ಲಿ ಒಬ್ಬರಾಗಲಿ ಸಭೆಯ ಕಚೇರಿಗೆ ಕಳುಹಿಸಿಕೊಡಬೇಕು. ಈ ಕಾಯಿದೆಯನ್ನು ಧಾರಾಸಭೆಯು ಚರ್ಚೆಗೆ ಸ್ವೀಕರಿಸಬೇಕೆ ಇಲ್ಲವೆ ಎಂಬ ವಿಚಾರವಾಗಿ ನಡೆಯುವ ಚರ್ಚೆಗೆ 'ಮೊದಲನೆಯ ಚರ್ಚೆ'ಯೆಂದು ಹೆಸರು. ಇದರಲ್ಲಿ ಸಾಕಾದಷ್ಟು ಜನರ ಸಮ್ಮತಿಯು ದೊರಕಿದರೆ ಆಮೇಲೆ 'ಎರಡನೆಯ ಚರ್ಚೆ'ಯು ನಡೆಯುವುದು. ಇದೇ ಮುಖ್ಯವಾದ ಚರ್ಚೆ. ಇದರಲ್ಲಿಯೇ ಕಾಯಿದೆಯ ಗುಣಾವಗುಣಗಳ ವಿಷಯವಾಗಿ ಅದರ ಪಕ್ಷಪಾತಿಗಳೂ ವಿರೋಧಿಗಳೂ ತಮ್ಮ ಬಲವನ್ನೆಲ್ಲಾ ಉಪಯೋಗಿಸುವುದು. ಈ ಚರ್ಚೆಯಲ್ಲಿ ಬಹುಮತ ದೊರಕಿದರೆ ಕಾಯಿದೆಯ ತತ್ವವನ್ನು ಧಾರಾಸಭೆಯು ಒಪ್ಪಿದಂತೆ ಭಾವ. ಆಮೇಲೆ ಕಾಯಿದೆಯನ್ನು ಸೂಕ್ಷ್ಮವಾಗಿ ಪರಿಶೋಧಿಸಿ ಅದರ ಪ್ರಧಾನಾಂಶಕ್ಕೆ ತೊಂದರೆ ಬಾರದಂತೆ ತಿದ್ದುಪಾಟುಗಳನ್ನು ಮಾಡಿ ಪುನಃ ಧಾರಾಸಭೆಯ ಮುಂದಿಡುವುದಕ್ಕೆ ಸಭೆಯು ಸಣ್ಣ ಸಮಿತಿಯೊಂದನ್ನು ನಿಯಮಿಸುವುದು. ಸಮಿತಿಯ ವರದಿಯ ಆಧಾರದಮೇಲೆ ಚರ್ಚಿಸಿ ಸಭೆಯು ಸರ್ವಮತದಿಂದ ಅಥವಾ ಬಹುಮತದಿಂದ ಕಾಯಿದೆಗೆ 'ಅಸ್ತು' ಎಂದರೆ ಆಗ ಕಾಯಿದೆಯು ಜಾರಿಗೆ ಬಂದಿತೆಂದೇ ಎಣಿಸಬಹುದು. ಪ್ರಜಾಭಿಮತಕ್ಕನುಸಾರವಾಗಿ ಆಡಳಿತವುಳ್ಳ ದೇಶಗಳಲ್ಲೆಲ್ಲಾ ಕಾಯಿದೆಗಳ ನಿರ್ಮಾಣಕ್ಕೆ ಇದೇ ಕ್ರಮ.

**ಪು. ೧೬೭ (೬) ಲೋಕಮಾನ್ಯ ಬಾಲಗಂಗಾಧರ ತಿಲಕರು :**

ಇವರು ರತ್ನಗಿರಿಯಲ್ಲಿ ೧೮೫೬ರಲ್ಲಿ ಜನ್ಮವೆತ್ತಿದರು. ಇಂಗ್ಲಿಷ್ ವ್ಯಾಸಂಗಮಾಡಿ ಬಿ.ಎ., ಮತ್ತು ಎಲ್.ಎಲ್.ಬಿ., ಪರೀಕ್ಷೆಗಳಲ್ಲಿ ಉತ್ತಮರೀತಿಯಲ್ಲಿ ತೇರ್ಗಡೆಹೊಂದಿದನಂತರ ಸ್ವತಂತ್ರ ವಿದ್ಯಾಶಾಲೆಯನ್ನು ಸ್ಥಾಪಿಸಿ ದೇಶಸೇವೆ ಮಾಡಬೇಕೆಂದು ನಿಷ್ಕರ್ಷಿಸಿ ಪುಣೆಯಲ್ಲಿ ಕೆಲ ಮಿತ್ರರ ಸಹಾಯದಿಂದ ಒಂದು ಶಾಲೆಯನ್ನು ತೆರೆದರು. ಅನಂತರ ಇದು ದೊಡ್ಡ ಶಾಲೆಯಾಯಿತು. ಇವರು ವೀರವೈರಾಗ್ಯಪಕ್ಷದವರಾದುದರಿಂದ ಈ ಶಾಲೆಯನ್ನು ಬಿಡಬೇಕಾಯಿತು. 'ಮರಾಟಾ' (ಇಂಗ್ಲಿಷ್) ಮತ್ತು ಕೇಸರಿ' (ಮರಾಠಿ) ಎಂಬ ಪತ್ರಿಕೆಗಳನ್ನು ಪ್ರಾರಂಭಿಸಿ ರಾಷ್ಟ್ರಜೀವನವನ್ನು ವೇಗಗೊಳಿಸಿದರು. 'ಶಿವಾಜಿ' ಮತ್ತು 'ಗಣಪತಿ' ಉತ್ಸವಗಳನ್ನು ಮಹಾರಾಷ್ಟ್ರದಲ್ಲೆಲ್ಲ ಆಚರಿಸುವಂತೆ ಒಂದು ಸಂಪ್ರದಾಯವನ್ನು ಮಾಡಿದರು. ಶಾರೀರಕ ಶಿಕ್ಷಣ, ಸ್ವದೇಶಿ, ರಾಷ್ಟ್ರಸೇವೆ ಮುಂತಾದ ಉದಾತ್ತಭಾವನೆಗಳು ಮಹಾರಾಷ್ಟ್ರದಲ್ಲಿ ೩೦ ವರ್ಷಗಳ ಕೆಳಗೆ ಬೇರೂರಿದುದಕ್ಕೆ ಇವರೇ ಕಾರಣಕರ್ತರು. ಇವರನ್ನು ಸರಕಾರದವರು ೧೮೯೭ರಲ್ಲಿ ಒಂದೂವರೆ ವರ್ಷ ೧೯೦೮ರಲ್ಲಿ ಆರು ವರ್ಷ ಕಾರಾಗೃಹದಲ್ಲಿರಬೇಕೆಂದು ಶಿಕ್ಷೆ ವಿಧಿಸಿದರು. ೧೯೧೪ರಲ್ಲಿ ಬಿಡುಗಡೆಯಾಯಿತು. ಅಂದಿನಿಂದ ಅವಿಚ್ಛಿನ್ನವಾಗಿ ರಾಷ್ಟ್ರಕಾರ್ಯಗಳಲ್ಲಿ ಉದ್ಯುಕ್ತರಾಗಿ ಸ್ವರಾಜ್ಯಸಂಪಾದನೆಯಲ್ಲಿ ಅತಿ ಸಾಹಸದಿಂದ ಕೆಲಸಮಾಡಿ 'ಲೋಕಮಾನ್ಯ' ರೆಂಬ ಹೆಸರಿನಿಂದ ಜನತೆಯಲ್ಲಿ ಬೆಳಗಿದರು. ಇವರು ೧೯೨೦ರಲ್ಲಿ ಪರಂಧಾಮವನ್ನೈದಿದರು.

ಇವರ ಮಂತ್ರವು 'ಸ್ವರಾಜ್ಯವು ನನ್ನ ಜನ್ಮಸಿದ್ಧಹಕ್ಕು' ಎಂದರೆ ನಾವು ಸ್ವರಾಜ್ಯಕ್ಕೆ ಅರ್ಹರೆಂದು ಇತರರಿದಿರಿಗೆ ನಿರೂಪಿಸಬೇಕಾಗಿಲ್ಲ. ಗಣಿತಶಾಸ್ತ್ರದಲ್ಲಿಯೂ ಸಂಸ್ಕೃತದಲ್ಲಿಯೂ ಲೋಕಮಾನ್ಯರು ಉದ್ದಾಮ ಪಂಡಿತರು. ಇವರು ಬರೆದ ಗ್ರಂಥಗಳು ಇವರ ಪಾಂಡಿತ್ಯಕ್ಕೂ ಸ್ವತಂತ್ರ ವಿಚಾರಕ್ಕೂ ನಿದರ್ಶನಗಳಾಗಿವೆ.

ಇವರ ಹೆಸರಿನಲ್ಲಿಯೇ ಪೂಜ್ಯ ಗಾಂಧೀಜಿಯವರು ಸಾಹಸ ಪಟ್ಟು ೧೯೨೧ರಲ್ಲಿ ಮೂರುತಿಂಗಳೊಳಗೆ ಒಂದುಕೋಟಿ ರೂಪಾಯಿ ಗಳ ನಿಧಿಯನ್ನು ಸೇರಿಸಿದರು.

ಪು. ೧೬೭ (ಬ) ಭಂಡಾರಕರ್, ಸರ್ ರಾಮಕೃಷ್ಣ ಗೋಪಾಳ:

ಇವರು ಪುಣೆಯಲ್ಲಿದ್ದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರು. ಇವ ರಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಶೋಧನಾ ಸಂಪ್ರದಾಯ ಗಳು ಕಲೆತಿದ್ದುವು. ೬೦—೫೦ ವರ್ಷಗಳ ಹಿಂದೆ ನಮ್ಮ ಪೂರ್ವ ಇತಿ ಹಾಸ ಮತ್ತು ಸಾಹಿತ್ಯಸಂಶೋಧನಸಂದರ ಕೆಲವು ಯುರೋಪ್ಯ ಪಂಡಿ ತರ ಗುತ್ತಿಗೆಯೆಂದೆಣಿಸಲ್ಪಟ್ಟಿದ್ದುವು. ಭಾರತೀಯರಲ್ಲಿ ಸಂಶೋಧಕ ರೆಂಪರ ಇವರೇ ಮೂಲಪುರುಷರು. ತಮ್ಮ ವ್ಯಾಸಂಗವನ್ನು ಬಿಟ್ಟು ಇತರ ಗೋಜಿಗೆ ಹೆಚ್ಚಾಗಿ ಹೋಗುತ್ತಿರಲಿಲ್ಲ. ಮುಂಬಯಿಯಲ್ಲಿ ನಡೆದ ರಾಷ್ಟ್ರೀಯ ಮಹಾಸಭೆಯಲ್ಲಿ ಇವರು ಹೋಗಿದ್ದರು. ಅಲ್ಲದೆ ಸಮಾಜಸುಧಾರಣೆಯ ಕೆಲಸಗಳಲ್ಲಿ ಆಸಕ್ತರಾಗಿದ್ದರು.

ಸಂಸ್ಕೃತವನ್ನು ಕಲಿಯುವ ಬಾಲಕರು ಸಾಮಾನ್ಯವಾಗಿ ಇವರು ಬರೆದ ಪಠ್ಯಪುಸ್ತಕವನ್ನೋದುವರು.

ಪು. ೧೬೭ (ಕ) ಗೋಖಲೆ, ಗೋಪಾಲಕೃಷ್ಣ:

ಇವರು ರತ್ನಗಿರಿಯಲ್ಲಿ ೧೮೬೬ರಲ್ಲಿ ಜನಿಸಿದರು. ಬಿ. ಎ. ಪರೀ ಕ್ಷೆಯಲ್ಲಿ ಉತ್ತೀರ್ಣರಾದಮೇಲೆ ಪುಣೆಯಲ್ಲಿ ಲೋಕಮಾನ್ಯ ತಿಲಕರು ಸ್ಥಾಪಿಸಿದ್ದ ಶಾಲೆಯಲ್ಲಿ ಅಧ್ಯಾಪಕರಾದರು. ಅನಂತರ ಸುಪ್ರಸಿದ್ಧ ನ್ಯಾಯಾಧೀಶರಾದ ಮಹಾದೇವ ಗೋವಿಂದ ರಾನಡೆಯವರ ಶಿಷ್ಯತ್ವ ದಲ್ಲಿ ರಾಷ್ಟ್ರೀಸ್ಥಿತಿಸಂಬಂಧಪಟ್ಟ ವಿಷಯಗಳನ್ನು ಆಮೂಲಾಗ್ರವಾಗಿ ಪಠಿಸಿ ಮುಂಬಯಿ ಕಾಯಿದೆಮಂಡಲದಲ್ಲಿಯೂ ಬಹುಕಾಲ ಕೇಂದ್ರ ಕಾಯಿದೆಮಂಡಲದಲ್ಲಿಯೂ ಸದಸ್ಯರಾಗಿದ್ದರು. ೧೯೦೫ರಲ್ಲಿ ಸರ್ವೆಂಟ್ ಆಫ್ ಇಂಡಿಯಾ ಸೊಸೈಟಿ (ಭಾರತ ಸೇವಕರ ಸಂಘ) ಯನ್ನು ಸ್ಥಾಪಿಸಿ ಭಾರತ ಯುವಕರು ಸುಶಿಕ್ಷಿತರಾಗಿ ರಾಷ್ಟ್ರಸೇವೆಗೆ ಸಿದ್ಧರಾಗುವ

ವ್ಯವಸ್ಥೆಯನ್ನು ಮಾಡಿದರು. ೧೯೦೫ರಲ್ಲಿ ಕಾಶಿಯಲ್ಲಿ ನಡೆದ ರಾಷ್ಟ್ರ ಮಹಾಸಭೆಯ ಅಧ್ಯಕ್ಷರಾಗಿದ್ದರು. ಸಾರ್ವಜನಿಕ ಪಕ್ಷವನ್ನು ವಹಿಸಿ ಸರಕಾರದೊಡನೆ ಚರ್ಚೆ ನಡೆಸುವುದರಲ್ಲಿ ಅಗ್ರಗಣ್ಯರೆನಿಸಿಕೊಂಡರು. ದಕ್ಷಿಣ ಆಫ್ರಿಕದಲ್ಲಿ ನಮ್ಮ ದೇಶೀಯರ ಕಷ್ಟಗಳನ್ನು ಕಂಡು ಅವರಿಗಾಗಿ ಹೋರಾಡಿದರು. ಇವರ ವಿನಯವನ್ನೂ ನಿಧಾನವನ್ನೂ ಕಂಡು ಗಾಂಧೀಜಿಯವರು ಮುಗ್ಧರಾಗಿ ಇವರನ್ನೇ ತಮ್ಮ 'ರಾಜಗುರು'ವೆಂದು ಗೌರವಿಸಿದರು. ೧೯೧೫ರಲ್ಲಿ ಇವರು ಪರಂಧಾಮವನ್ನೈದಿದರು.

## ಕೆಲವು ಇತರ ವಿಶೇಷ ವಿಷಯಗಳು

ಜಾರಥೂಷ್ಟ್ರ:

ಇವರು ಪಾರಸೀಯರ ಮತಸ್ಥಾಪಕರು. ಕ್ರಿ. ಪೂ. ೫ನೆಯ ಶತಮಾನದಲ್ಲಿ ಈತನಿದ್ದನೆಂದು ಪರಿಶೋಧಕರ ಹೇಳಿಕೆ. ಪಾರಸೀಯರ ಮತಗ್ರಂಥವಾದ 'ಅವೆಸ್ತ'ವಾದರೋ ಬಹು ಪುರಾತನವಾದುದು. ಇದರಭಾಷೆಗೂ ವೇದದಲ್ಲಿ ಪ್ರಯೋಗಿಸಿರುವ ಸಂಸ್ಕೃತಕ್ಕೂ ಹೋಲಿಕೆಯುಂಟು. ಪಾರಸೀಮತದಲ್ಲಿ ಜಗದೀಶ್ವರನನ್ನು ಅಗ್ನಿಸ್ವರೂಪಿಯಾಗಿ ಆರಾಧಿಸುವರು. ಅವರ ಪುರಾಣದಲ್ಲಿ ಸೃಷ್ಟಿಕರ್ತನ ಹೆಸರು 'ಅರ್ಮಜ್ದ'. ಅಸುರೀಶಕ್ತಿಗೆ 'ಅಹ್ರಿಮಾನ್' ಎನ್ನುವರು. ಈ ಸಾತ್ವಿಕ, ತಾಮಸಿಕ ಶಕ್ತಿಗಳಲ್ಲಿ ಪರಸ್ಪರ ಯುದ್ಧವು ನಿರಂತರ ನಡೆಯುವುದು.

ಈ ಮತಸ್ಥರು ಈಗ ಪಾರಸೀಸ್ಥಾನದಲ್ಲಿ ವಿರಳ. ಈ ಮತಾನುಯಾಯಿಗಳು ಹಿಂದೂಸ್ಥಾನಕ್ಕೆ ಬಂದು ನೆಲಸಿ ಮುಂಬಯಿ ರಾಜಧಾನಿಯಲ್ಲಿ ಪ್ರಬಲವಾದ ವ್ಯಾಪಾರವಾಣಿಜ್ಯದಲ್ಲಿ ನಿರತರಾಗಿರುವರು.

ದಿನ್‌ಷಾ ಇಡಲ್ಜಿ ವಾಚಾ:

ಇವರು ಪ್ರಸಿದ್ಧರಾದ ಅರ್ಥಶಾಸ್ತ್ರಜ್ಞರು. ರಾಷ್ಟ್ರಸಭೆಯ ಪೂರ್ವಾವಸ್ಥೆಯಲ್ಲಿ ಆ ಸಭೆಯ ಯಶಸ್ಸಿಗಾಗಿ ಸಾಹಸಪಟ್ಟ ಪಾರಸೀ

ಪ್ರಮುಖರಲ್ಲಿವರೊಬ್ಬರು. ಕಲಿಕತ್ತೆಯಲ್ಲಿ (೧೯೦೧) ನಡೆದ ರಾಷ್ಟ್ರ ಮಹಾಸಭೆಯ ಅಧ್ಯಕ್ಷರಾಗಿದ್ದರು. ವಯೋವೃದ್ಧರಾಗಿದ್ದರೂ ಈಗಲೂ ದೆಹಲಿಯ ಕೌನ್ಸಿಲ್ ಆಫ್ ಸ್ಟೇಟ್ ಎನ್ನುವ ಪ್ರಾಂತಸಭೆಯಲ್ಲಿ ಸದಸ್ಯರಾಗಿರುವರು. ಆದರೆ ಈಗಿನ ರಾಷ್ಟ್ರ ಜೀವನದ ಚಳವಳಿಗಳಲ್ಲಿ ಇವರಿಗೆ ರುಚಿಯಿಲ್ಲವಾಗಿದೆ.

ಮ್ಯಾಕ್ಸ್ ಮುಲ್ಲರ್ : (೧೮೨೩—೧೯೦೦)

ಇವರು ಜರ್ಮನ್‌ದೇಶದ ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸರು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಇವರಿಗೆ ಕೆಲಸವಿದ್ದಿತು. ವೇದಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿದುದಲ್ಲದೆ ಹಿಂದೂಸ್ಥಾನದ ಪ್ರಾಚೀನ ಸಂಸ್ಕೃತಿಯ ವಿಚಾರವಾಗಿ ಅನೇಕ ಅಭಿಮಾನಪೂರ್ವಕವಾದ ಉಪನ್ಯಾಸಗಳನ್ನು ಮಾಡಿರುವರು. ಶ್ರೀ ರಾಮಕೃಷ್ಣ ಪರಮಹಂಸರ ವಿಷಯದಲ್ಲಿ ಬಹಳ ಗೌರವವನ್ನು ತೋರ್ಪಡಿಸಿದರು. ಯುರೋಪ್ಯರಲ್ಲಿ ಸಂಸ್ಕೃತದ ಅಭಿಮಾನವನ್ನು ಹುಟ್ಟಿಸಿದವರಲ್ಲಿ ಇವರೇ ಪ್ರಮುಖರು.

ಇರ್ವಿಂಗ್, ವಾಷಿಂಗ್ಟನ್ : (೧೭೮೩—೧೮೫೯)

ಇವರು ಅಮೇರಿಕದೇಶದ ಸುಪ್ರಸಿದ್ಧ ಲೇಖಕರು. ಲಲಿತವಾದ ಜನರಂಜಕವಾದ ಶೈಲಿಯನ್ನು ಬರೆಯತಕ್ಕವರು. ಸ್ಪೇನ್ ದೇಶದಲ್ಲಿನ ಗ್ರೆನಡಾ ಎನ್ನುವ ಪ್ರಾಂತವನ್ನು ಮಹಮ್ಮದೀಯರು ಗೆದ್ದ ಇತಿಹಾಸವನ್ನು ಬರೆದುದಲ್ಲದೆ ಮಹಮದ್ ಪೈಗಂಬರರನ್ನು ಕುರಿತು ಒಂದು ಸಣ್ಣ ಪ್ರಬಂಧವನ್ನು ಬರೆದರು. ಸಾಮಾನ್ಯವಾಗಿ ಪೈಗಂಬರರ ವಿಚಾರವಾಗಿ ಬರೆಯುವವರು ದೋಷಾನ್ವೇಷಣಯುಕ್ತರಾಗಿ ಕುಹಕ ರೀತಿಯಿಂದಲೇ ಬರೆಯುವರು. ಆದರೆ ಇರ್ವಿಂಗ್ ಮತ್ತು ಕಾರ್ಲೈಲ್ (೧೭೯೫—೧೮೮೧) ಎನ್ನುವ ಆಂಗ್ಲ ದಾರ್ಶನಿಕರು ಈ ಗುಂಪಿಗೆ ಸೇರಿದವರಲ್ಲ.

ಮಹಾದೇವ ಗೋವಿಂದ ರಾನಡೆ :

ಇವರು ಮುಂಬಯಿಯ ಹೈಕೋರ್ಟಿನಲ್ಲಿ ನ್ಯಾಯಾಧೀಶರಾಗಿದ್ದರು. ಹಿಂದೂಸ್ಥಾನದ ಸಾಮಾಜಿಕ ಮತ್ತು ರಾಜಕೀಯ ಚಳವಳಿ

ಗಳಲ್ಲಿ ಬಹು ಆಸಕ್ತಿಯುಳ್ಳವರಾಗಿ ರಾಷ್ಟ್ರಮಹಾಸಭೆ ಮತ್ತು ಸಾಮಾಜಿಕ ಪರಿಷತ್ತುಗಳ ಅನೇಕ ನಿರ್ಣಯಗಳಿಗೆ ಪ್ರೇರಕರಾಗಿದ್ದರು. ಇವರನ್ನು ಶ್ರೀ ಗೋಖಲೆಯವರು ಗುರುವೆಂದು ಭಾವಿಸಿದ್ದರು. ಮೂವತ್ತು ವರ್ಷಗಳ ಹಿಂದೆ ಮುಂಬಯಿ ರಾಜಧಾನಿಯಲ್ಲಿ ಶ್ರೀ ರಾನಡೆಯವರು ಭಾಗಿಗಳಾಗದ ಸಾರ್ವಜನಿಕ ಕೆಲಸಗಳೇ ಇರಲಿಲ್ಲವೆಂದು ಹೇಳಬಹುದು. ಮಹಾರಾಷ್ಟ್ರ ಇತಿಹಾಸದ ಸಂಶೋಧನೆಯಲ್ಲಿಯೂ ಅರ್ಥಶಾಸ್ತ್ರದ ವಿಚಾರದಲ್ಲಿಯೂ ಪ್ರೌಢತರವಾದ ಕೆಲಸವನ್ನು ಮಾಡಿರುವರು.



# ಅನುಕ್ರಮಣಿಕೆ

---

